# ಜಿಜ್ಞಾಸೆ

ಪ್ರಶ್ನೋತ್ತರ ರೂಪದಲ್ಲಿ . . .



ಸಂಗ್ರಹ : ಕೆ. ಕಾಂತೇಶ ಕದರಮಂಡಲಗಿ

ಪ್ರಕಾಶನ : ವಿಶ್ವ ಮಧ್ವ ಮಹಾಪರಿಷತ್, ಬೆಂಗಳೂರು.

22.1.2005
Madhuramurthy

# ಜಿಜ್ಞಾಸೆ

*ಪ್ರಶ್ನೋತ್ತರರೂಪದಲ್ಲಿ.........*

(ಧಾರವಾಡದಲ್ಲಿ ಜರುಗಿದ ಬೃಹತ್‌ಜ್ಞಾನಸತ್ರದಲ್ಲಿ ಸಭಿಕರ ಪ್ರಶ್ನೆಗಳಿಗೆ ಶ್ರೀಸತ್ಯಾತ್ಮತೀರ್ಥರು ನೀಡಿದ ಉತ್ತರಗಳ ಸಂಗ್ರಹ)

## ದ್ವಿತೀಯಾವೃತ್ತಿ

(ಪ್ರಮಾಣಭಾವಸಂಗ್ರಹ - ತಿದ್ದುಪಡಿ ಸಹಿತ)

*ಸಂಗ್ರಹ*

ಕೆ. ಕಾಂತೇಶ. ಕದರಮಂಡಲಗಿ

*ಪ್ರಕಾಶನ*

ವಿಶ್ವಮಧ್ವಮಹಾಪರಿಷತ್

ಶ್ರೀಜಯತೀರ್ಥ ವಿದ್ಯಾಪೀಠ

ಬೆಂಗಳೂರು-4

**Jignase** compilation of answers offered by **H.H. Sri Sri Satyatmateertharu** to the querries raised by the learned participants held during June 2003 Jnanasatra at Dharwad being collected by **Kanthesh Kadaramandalagi,** and Published by **Vishwamadhwa Mahaparishat,** Jayatirtha Vidyapeeta, Bangalore.

No. of Pages : xii + 132

First Edition - 2004
Second Edition - 2004
Third Edition - 2004
Fourth Edition - 2004



Price : Rs. 40/-

Designed by : K. M. Sheshagiri

Printed at :

Vagartha, # 149, 8th Cross, N.R. Colony, Bangalore. Ph : 26527677

# ವಿಷಯಾನುಕ್ರಮಣಿಕೆ



# ಪ್ರಶ್ನೋತ್ತರಗಳು

॥ श्री ॥

॥ श्रीदिग्विजयरामो विजयते ॥

# ಅನುಗ್ರಹ ಸಂದೇಶ

ಧಾರವಾಡದಲ್ಲಿ ಒಂದು ತಿಂಗಳು ನಡೆದ ಬೃಹದ್ಜ್ಞಾನಸತ್ರದಲ್ಲಿ ಪ್ರತಿನಿತ್ಯವೂ ಭಕ್ತಜನರು ನಮಗೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ಪ್ರಾಯಃ ಅವುಗಳು ಧಾರ್ಮಿಕವಿಷಯಗಳಿಗೆ ಸಂಬಂಧಪಟ್ಟಿರುತ್ತಿದ್ದವು. ಗುರುಗಳು, ತತ್ವಾಭಿಮಾನಿದೇವತೆಗಳು, ಭಾರತೀರಮಣ ಮುಖ್ಯಪ್ರಾಣದೇವರು ಹಾಗೂ ತದಂತರ್ಯಾಮಿ ಶ್ರೀವೇದವ್ಯಾಸದೇವರು ನಮ್ಮಲ್ಲಿ ನಿಂತು ಏನು ನುಡಿಸುತ್ತಿದ್ದರೋ ಅದನ್ನು ನಾವು ನುಡಿಯುತ್ತಿದ್ದೆವು. ಹಾಗೂ ಆ ಉತ್ತರಗಳಿಗೆ ಆಧಾರವಾಗಿ ಕೆಲವು ಪ್ರಮಾಣವಚನಗಳನ್ನೂ ಕೂಡ ಸೂಚಿಸುತ್ತಿದ್ದೆವು. ಆದರೆ ಆ ಎಲ್ಲ ಉತ್ತರಗಳೂ ಹಾಗೇ ಗಾಳಿಯಲ್ಲಿ ಹಾರಿ ಹೋಗಬಾರದೆಂಬ ಹಂಬಲದಿಂದ ನಮ್ಮ ಪರಮಪ್ರಿಯಶಿಷ್ಯನಾದ ಪಂ. ಕಾಂತೇಶಾಚಾರ್ಯನು ಆ ಸಭೆಯಲ್ಲಿ ನಡೆದ ಪ್ರಶ್ನೋತ್ತರಗಳನ್ನು ಬಹಳ ಸುಂದರವಾದ ರೀತಿಯಲ್ಲಿ ಸಂಗ್ರಹಿಸಿದ್ದಾನೆ. ಅವುಗಳಿಗೆ ಆಧಾರವಾಗಿ ಕೊಟ್ಟ ಪ್ರಮಾಣಗಳನ್ನೂ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾನೆ. ಇದರಿಂದ ಜನರಿಗೆ ಉಪಕಾರವಾಗುವುದರಲ್ಲಿ ಸಂದೇಹವಿಲ್ಲ.

ಕಾಂತೇಶಾಚಾರ್ಯನಿಗೆ ಚಿಕ್ಕವಯಸ್ಸಿನಿಂದಲೇ ಸಂಗ್ರಹ ಮಾಡುವ, ಅನುವಾದ ಮಾಡುವ, ಲೇಖನಗಳನ್ನು ಬರೆಯುವ ಉತ್ಸಾಹ. ಎರಡು ವರ್ಷಗಳ ಹಿಂದೆಯೇ ಸಮಗ್ರ ''ವಾದಾವಲೀ'' ಗ್ರಂಥವನ್ನು ಕನ್ನಡದಲ್ಲಿ ಅನುವಾದ ಮಾಡಿ

ಪ್ರಕಟಣೆಗೊಳಿಸಿದ್ದಾನೆ. ಈಗಾಗಲೇ ಅದು ಜನಪ್ರಿಯವಾಗಿದೆ. ಇದೇ ರೀತಿಯಾಗಿ ನಿರಂತರವಾಗಿ ಲೇಖನ-ಪ್ರವಚನ-ಸಂಶೋಧನೆಗಳ ಮೂಲಕ ಶ್ರೀಮಧ್ವಸಿದ್ಧಾಂತದ ಪ್ರಚಾರವನ್ನು ದೇಶದಾದ್ಯಂತ ಮಾಡುವುದಕ್ಕೆ ಇವನ ಮೇಲೆ ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಅನುಗ್ರಹ ಮಾಡಲಿ ಎಂಬುದಾಗಿ ಪ್ರಾರ್ಥಿಸುತ್ತೇವೆ.

ತನ್ನ ಸುಧಾಮಂಗಳದ ಸಂದರ್ಭದಲ್ಲಿ ತಾನು ಸಮಗ್ರ ಜಿಜ್ಞಾಸಾಧಿಕರಣದ ಪರೀಕ್ಷೆಯನ್ನು ಕೊಟ್ಟು ಉತ್ತೀರ್ಣನಾದ ಸಂದರ್ಭದಲ್ಲಿ ಈ "ಜಿಜ್ಞಾಸೆ" ಪುಸ್ತಕವನ್ನು ಸಮರ್ಪಿಸುತ್ತಿದ್ದಾನೆ. ಇದು ಆದರ್ಶವಾಗಲಿ ಎಂದು ಬಯಸುತ್ತೇವೆ.

**ಶ್ರೀಮತ್ಸತ್ಯಾತ್ಮತೀರ್ಥ ಶ್ರೀಪಾದಂಗಳವರು**

ಉತ್ತಾರಾದಿಮಠ

# ಮೊದಲ ಮಾತು

'ವ್ಯೇಯೇ ಕೃತೇ ವರ್ಧತ ಏವ ನಿತ್ಯಂ ವಿದ್ಯಾಧನಂ ಸರ್ವಧನಾತ್ಪ್ರಧಾನಮ್' ಎಂಬ ವಚನದಂತೆ ಅಧ್ಯಯನ-ಅಧ್ಯಾಪನ ಕ್ರಮದಲ್ಲಿಯಾಗಲೀ, ಪುರಾಣ-ಪ್ರವಚನ ಮೂಲಕವಾಗಲೀ, ಚರ್ಚೆರೂಪದಲ್ಲಿಯಾಗಲೀ ಜ್ಞಾನಪ್ರಸಾರ ಮಾಡಿದ ಪಕ್ಷದಲ್ಲಿ ಅದು ಜ್ಞಾನದ ಇನ್ನೂ ಅಭಿವೃದ್ಧಿಗೆ ಕಾರಣವಾಗುತ್ತದೆ ಎನ್ನುವುದು ಸಿದ್ಧ. ಶಾಸ್ತ್ರ ಓದುವ ಸೌಭಾಗ್ಯ ಎಲ್ಲರಿಗೂ ಸಿಗುವುದಿಲ್ಲ. ಸಿಕ್ಕರೂ ಸರಿಯಾದ ಕ್ರಮದಲ್ಲಿ ಓದುವುದು ಸುಲಭದ ಮಾತಲ್ಲ. ಇದರ ಜೊತೆಗೆ ಸಮಯದ ಕೊರತೆ ಎಲ್ಲರ ಮನೆ-ಮಂದಿರಗಳನ್ನು ಹಾಸುಹೊಕ್ಕಾಗಿ ಶಾಸ್ತ್ರದ ಅಧ್ಯಯನವೇ, ತತ್ವಜ್ಞಾನದ ತಿಳುವಳಿಕೆಯೇ ಕಡಿಮೆಯಾಗುತ್ತಿದೆ. ಹೀಗಾಗಿ ಆಚಾರ್ಯರು ಕರುಣಿಸಿ ಉಪದೇಶಿಸಿದ ತತ್ವಜ್ಞಾನದ ವಿಚಾರವನ್ನು ಸಾಮಾನ್ಯರೂ ವಿಶೇಷರೀತಿಯಲ್ಲಿ ತಿಳಿಯಬೇಕೆಂಬ ಬಯಕೆಯಿಂದ ಅಲ್ಲಲ್ಲಿ ಈಗೀಗ ಹೆಚ್ಚು 'ಜ್ಞಾನಸತ್ರ' ಎನ್ನುವ ಈ ಮಾಧ್ಯಮದ ಮೂಲಕ ಕಾರ್ಯಕ್ರಮಗಳು ಜರುಗಿ ಪ್ರತಿಯೊಬ್ಬರನ್ನೂ ಶ್ರೇಷ್ಠಮಾರ್ಗದಲ್ಲಿ ತಂದು, ಇದ್ದ ಸಮಯದಲ್ಲಿಯೇ ಸಮಯದ (ಶಾಸ್ತ್ರದ) ಅಧ್ಯಯನಕ್ಕಾಗಿ ಅನುಕೂಲ ಮಾಡಿಕೊಟ್ಟು, ಇನ್ನೂ ಹೆಚ್ಚಿನ ಸಮಯವನ್ನು ಇದರಲ್ಲಿಯೇ ಕಳೆಯಬೇಕೆಂಬ ಒತ್ತಾಯಪೂರ್ಣವಾದ ಮನೋಭಾವನೆಯನ್ನು ತರುವುದು ಜ್ಞಾನಿಗಳ ಜ್ಞಾನಸತ್ರದ ವೈಶಿಷ್ಟ್ಯ.

ಅಕ್ಷಮ್ಯ ಅಪರಾಧಗಳನ್ನು ಅರಿಕೆಯಿಲ್ಲದೇ ಅಂತಮುಟ್ಟಿಸುವ ಆ ಅಜಪಿತನ ತತ್ವಗಳನ್ನು, ಅಲವಬೋಧರ ಗ್ರಂಥಗಳ ಮುಖಾಂತರ ಅರಿವಿಲ್ಲದ ಅಜ್ಞಾನಿಗಳಿಗೆ ಅವಬೋಧಿಸುವುದು ಜ್ಞಾನಿಗಳ ಕರ್ತವ್ಯ ಒಂದು ಕಡೆಯಾದರೆ ಇದರ ಸದುಪಯೋಗ ಪಡಿಸಿಕೊಳ್ಳುವುದು ಅಜ್ಞಾನಿಗಳ ಕರ್ತವ್ಯವಾಗಿದೆ. ಅದನ್ನೇ

'ಬುಧೋಽಭಿಧಾನಂ ಶ್ರವಣಂ ಬುಧೇತರಃ'

ಎನ್ನುವಲ್ಲಿ ಕಾಣಬಹುದಾಗಿದೆ. ಇದರಿಂದ ಜ್ಞಾನದ ಲಾಭ ಹೆಚ್ಚಾಗುತ್ತದೆ. ಹೀಗಾಗಿ ಜ್ಞಾನಸತ್ರದ ಮಹತ್ವ ಬಹಳವಾಗಿದೆ.

ಇದಕ್ಕೊಂದು ಸರಿಯಾದ ದೃಷ್ಟಾಂತವೆಂದರೆ, ಇತ್ತೀಚೆಗೆ ಧಾರವಾಡದಲ್ಲಿ ನಡೆದ ಬೃಹತ್ ಜ್ಞಾನಸತ್ರ. ಇದರಲ್ಲೊಂದು ವೈಶಿಷ್ಟ್ಯವಿದೆ. ಅದು ಹೀಗಿದೆ - ಪುರಾಣ-ಪ್ರವಚನಗಳಲ್ಲಿ ಅಡಗಿದ ರಹಸ್ಯಪ್ರಮೇಯಗಳನ್ನು ತಿಳಿಸುವ ಜೊತೆಗೆ, ಒಂದು ತಿಂಗಳವರೆಗೆ ಪ್ರತಿನಿತ್ಯ ಸಂಜೆ ಸಭಿಕರ ಸಮಗ್ರ ಸಮಸ್ಯೆ(ಪ್ರಶ್ನೆ)ಗಳಿಗೆ

ಸಮಂಜಸವಾಗಿ ಸಕ್ರಮವಾಗಿ ಉತ್ತರಗಳನ್ನು ನೀಡಿ, ನಗರದ ಜನತೆಯ ನಾಡಿಯು ಮಿಡಿಯುವಂತೆ ಮಾಡಿದ, ಉತ್ತಮಮಾರ್ಗದಲ್ಲಿ ಎಲ್ಲರನ್ನೂ ತರುವಂತೆ ಮಾಡಿದ ಶ್ರೀಸತ್ಯಾತ್ಮತೀರ್ಥರ ಅನುಗ್ರಹ ಅವಿಸ್ಮರಣೀಯವಾದದ್ದು.

ನಗರದ ಪ್ರಸಿದ್ಧ ಕಲಾಭವನದಲ್ಲಿ ಜರುಗಿದ ಪ್ರಶ್ನೋತ್ತರಗಳ ಸಂಗ್ರಹವನ್ನು ಪ್ರತಿಯೊಬ್ಬರಿಗೂ ಮುಟ್ಟಿಸುವ ನಿಟ್ಟಿನಲ್ಲಿ ಈ 'ಜಿಜ್ಞಾಸೆ' ಎಂಬ ಹೊತ್ತಿಗೆಯನ್ನು ಸರಿಯಾದ ಹೊತ್ತಿನಲ್ಲಿ ಹೊರತರುತ್ತಿರುವ, ನಮ್ಮ ವಿದ್ಯಾಪೀಠದ ಚಿ|| ಕಾಂತೇಶ ಕದರಮಂಡಲಗಿ ಎಂಬ ಈ ವಿದ್ಯಾರ್ಥಿಯ ಪ್ರಯತ್ನ ಪ್ರಶಂಸನೀಯವಾಗಿದೆ. ಇದರಿಂದ ನಮ್ಮ ಮನಸ್ಸಿಗೆ ಬಹಳ ಸಂತೋಷವಾಗಿದೆ. ಈಗಾಗಲೇ ಶ್ರೀಜಯತೀರ್ಥರ 'ವಾದಾವಲೀ' ಗ್ರಂಥವನ್ನು ಕನ್ನಡದಲ್ಲಿ ಅನುವಾದಿಸಿ ಕನ್ನಡಿಗರಿಗೆ ಕೊಟ್ಟಿರುವ ಈ ಚಿ|| ಕಾಂತೇಶನಿಗೆ ಇನ್ನೂ ಅನೇಕ ಗ್ರಂಥಗಳನ್ನು ಬರೆಯುವ, ಅನುವಾದಿಸುವ ಸೌಭಾಗ್ಯವನ್ನು ಮೇಲಿಂದ ಮೇಲೆ ನಮ್ಮ ಕುಲಸ್ವಾಮಿ ತೊರವಿ ಶ್ರೀನರಸಿಂಹದೇವರು ಅನುಗ್ರಹಿಸಲಿ ಎಂದು ಶ್ರೀಮನ್ನ್ಯಾಯಸುಧಾಮಂಗಳ ಮಹೋತ್ಸವದ ಸಂದರ್ಭದಲ್ಲಿ ಆಶಿಸುತ್ತೇವೆ.

ಇತಿ

**ಪಂ|| ರಂಗಾಚಾರ್ಯ ಗುತ್ತಲ**

ಕುಲಪತಿಗಳು

ಶ್ರೀಜಯತೀರ್ಥ ವಿದ್ಯಾಪೀಠ

# ಇಣಕು ನೋಟ

ಶ್ರೀಮನ್ನ್ಯಾಯಸುಧೆಯಲ್ಲಿ ಟೀಕಾಕೃತ್ಪಾದರು ಬಹಳ ಮಹತ್ವದ ಒಂದು ವಿಷಯವನ್ನು ತಿಳಿಸುತ್ತಾರೆ.

ಮೋಕ್ಷಕ್ಕೆ ಸಾಧನವಾದದ್ದು ಭಕ್ತಿ ಹಾಗೂ ಅಪರೋಕ್ಷಜ್ಞಾನ. ಶಾಸ್ತ್ರಶ್ರವಣ ಮಾಡುವುದರಿಂದ ಆ ಅಪರೋಕ್ಷಜ್ಞಾನವನ್ನು ಸಂಪಾದಿಸಿ, ಪರಮಾತ್ಮನಲ್ಲಿ ಭಕ್ತಿ ಮಾಡಿ ಮೋಕ್ಷವನ್ನು ಹೊಂದಬಹುದಾದ್ದರಿಂದ ಈ ಜಿಜ್ಞಾಸೆ (ಶಾಸ್ತ್ರವಿಮರ್ಶೆ ಅಥವಾ ಮನನ) ಏಕೆ ಮಾಡಬೇಕು?

ಈ ಪ್ರಶ್ನೆಗೆ ಟೀಕಾಕೃತ್ಪಾದರು ಉತ್ತರ ನೀಡುತ್ತಾರೆ :- ''ಅಪರೋಕ್ಷಜ್ಞಾನವು ಮೋಕ್ಷಸಾಧನವಾದರೂ ಆ ಅಪರೋಕ್ಷಜ್ಞಾನಕ್ಕೆ ಸಾಧನವಾದದ್ದು ನಿದಿಧ್ಯಾಸನ (ಬಿಂಬರೂಪಿ ಭಗವಂತನ ಧ್ಯಾನ). ಆ ಬಿಂಬರೂಪಿಯ ಧ್ಯಾನ ಮಾಡಬೇಕಾದರೆ ಭಗವಂತನ (ಗುಣಗಳ) ಸರಿಯಾದ ತತ್ವಜ್ಞಾನ ಆವಶ್ಯಕ. ಕೇವಲ ಶಾಸ್ತ್ರಶ್ರವಣ ಮಾಡುವುದರಿಂದ ಭಗವಂತನ ಸರಿಯಾದ (ನಿಶ್ಚಯಾತ್ಮಕವಾದ) ತತ್ವಜ್ಞಾನ ಸಿಗುವುದಿಲ್ಲ. ಅರ್ಥಾತ್ ಸಾಮಾನ್ಯಜ್ಞಾನವಾದರೂ ಅನೇಕ ಸಂಶಯಗಳು ಬರುತ್ತವೆ. ಅಥವಾ ವಿಪರೀತಜ್ಞಾನವಾಗಲೂ ಬಹುದು.

**''न च निदिध्यासनं वाक्यार्थग्रहणलक्षणे श्रवणे कृतेऽपि विना मननापरनाम्ना विचारेणोपपद्यते । संशयविपर्यययोः तादवस्थ्यात् । न हि तयोः सतोः आदरनैरन्तर्यादि उपपद्यते ।''**

(ನ್ಯಾಯಸುಧಾ-ಜಿಜ್ಞಾಸಾಧಿಕರಣ)

ಈ ರೀತಿ ಸಂಶಯ-ವಿಪರೀತಜ್ಞಾನಗಳು ಇದ್ದರೆ ಭಗವಂತನ ಧ್ಯಾನದಲ್ಲಿ, ತತ್ವದಲ್ಲಿ ಆದರ ಹುಟ್ಟುವುದಿಲ್ಲ. ಮನಸ್ಸಿನಲ್ಲಿ ಸಂತೃಪ್ತತೆ ಬರುವುದಿಲ್ಲ. ಹಾಗಾದರೆ ಧ್ಯಾನ-ಜ್ಞಾನಗಳ ಮೂಲಕ ಮೋಕ್ಷವು ಅಸಾಧ್ಯವಾಗಬೇಕಾಗುತ್ತದೆ.

ಅದಕ್ಕಾಗಿ ಬೇಕು ಜಿಜ್ಞಾಸೆ (ವಿಮರ್ಶೆ). ಶಾಸ್ತ್ರಶ್ರವಣದಿಂದ ಸಾಮಾನ್ಯಜ್ಞಾನ-ವಾದ ನಂತರ ಅನೇಕ ಸಂಶಯಗಳು, ವಿಪರೀತಜ್ಞಾನಗಳು ಪ್ರಾಪ್ತವಾದಾಗ ''ಯಾವುದು ಸರಿ? ಯಾವುದು ತಪ್ಪು? ಏನು ಪ್ರಮಾಣ? ಅದು ಯಾಕೆ?'' ಎಂಬುದಾಗಿ ವಾದ-ವಿವಾದರೂಪದಲ್ಲಿ, ಪ್ರಶ್ನೋತ್ತರ ರೂಪದಲ್ಲಿ ತತ್ವಗಳನ್ನು ಚೆನ್ನಾಗಿ ವಿಮರ್ಶೆ (ಜಿಜ್ಞಾಸೆ) ಮಾಡುವುದರಿಂದ ಸಂಶಯ-ವಿಪರೀತಜ್ಞಾನಗಳು

ಪರಿಹಾರವಾಗಿ ಸರಿಯಾದ (ನಿಶ್ಚಯಾತ್ಮಕವಾದ) ತತ್ವಜ್ಞಾನವಾಗುತ್ತದೆ. ಅದರಿಂದ ಆದರಪೂರ್ವಕವಾದ ಭಗವದ್ಧ್ಯಾನ, ಅದರಿಂದ ಅಪರೋಕ್ಷಜ್ಞಾನ, ಅದರಿಂದ ಮೋಕ್ಷಪ್ರಾಪ್ತಿ.

''अतो जिज्ञासा निदिध्यासनपरमेश्वरानुग्रह-
तद्दर्शनपरमभक्तिपरमानुग्रहद्वारा मोक्षसाधनत्वात् कर्तव्येति ॥''

(ನ್ಯಾಯಸುಧಾ)

ಈ ರೀತಿಯಾಗಿ ಜಿಜ್ಞಾಸೆಯೂ (ವಿಚಾರ ಅಥವಾ ವಿಮರ್ಶೆಯೂ) ಮೋಕ್ಷಸಾಧನವಾದ್ದರಿಂದ ಶಾಸ್ತ್ರದಲ್ಲಿ ಜಿಜ್ಞಾಸೆ ಮಾಡುವುದು ಅತ್ಯಂತ ಸೂಕ್ತವಾಗಿದೆ'' ಎಂದು.

ಅಂದಮೇಲೆ ಕೇವಲ ಸ್ವಂತ ಅಧ್ಯಯನ ಮಾಡುವುದರಿಂದ, ಕೇವಲ ಪುಸ್ತಕಗಳನ್ನು ಓದುವುದರಿಂದ, ಪುರಾಣಗಳನ್ನು ಕೇಳುವುದರಿಂದ ಹೀಗೆ ಅನೇಕ ಮಾರ್ಗಗಳಿಂದ ತತ್ವಗಳನ್ನು ತಿಳಿದಿರುತ್ತೇವೆ. ಸಾಮಾನ್ಯಜ್ಞಾನ ಮಾಡಿ-ಕೊಂಡಿರುತ್ತೇವೆ. ಆದರೆ ಅದರ ಜೊತೆಗೆ ಅನೇಕ ಸಂದೇಹಗಳು ಮನಸ್ಸಿನಲ್ಲಿ ಬಂದು ಅಥವಾ ತತ್ವಗಳ ವಿಪರೀತಜ್ಞಾನವಾಗಿ ನಿಶ್ಚಯಜ್ಞಾನಕ್ಕೆ ಅಡ್ಡಿಯನ್ನುಂಟು-ಮಾಡಿರುತ್ತವೆ. ಈ ಪರಿಸ್ಥಿತಿಯಲ್ಲಿ

''गुकारोऽन्धकारः स्यात् रुकारः तन्निवारकः''

ಎಂದು ಹೇಳಿದಂತೆ ನಮ್ಮ ಸಂಶಯ-ವಿಪರೀತಜ್ಞಾನಗಳನ್ನು ಪರಿಹರಿಸಿ ಸರಿಯಾದ ತತ್ವಜ್ಞಾನ ಮಾಡಿಸಿಕೊಡುವ 'ಗುರು'ಗಳ ಆವಶ್ಯಕತೆ ಅತೀವ. ಅಂತಹ ಗುರುಗಳು ಸಿಕ್ಕಾಗ, ಅವರಲ್ಲಿ ತಮ್ಮ ಸಂಶಯಗಳನ್ನು, ಪ್ರಶ್ನೆಗಳನ್ನು ವ್ಯಕ್ತಪಡಿಸಿ ಅವರಿಂದ ಸರಿಯಾದ ಉತ್ತರ ಪಡೆದು, ಸರಿಯಾದ ತತ್ವಜ್ಞಾನವನ್ನು ಸಂಪಾದಿಸಬೇಕಾದದ್ದು ಪ್ರತಿಯೊಬ್ಬ ಸಾಧಕನ ಆವಶ್ಯಕ ಕರ್ತವ್ಯವಾಗಿದೆ.

ಈ ದೃಷ್ಟಿಯಲ್ಲಿ ತಾವು ತಿಳಿದ ಅನೇಕ ತತ್ವಗಳ - ವಿಚಾರಗಳ ಬಗ್ಗೆ ತಮಗಿರುವ ಸಂಶಯಗಳನ್ನು ಪ್ರಶ್ನೆಗಳ ಮೂಲಕ ವ್ಯಕ್ತಪಡಿಸಿ 'ಗುರು'ಗಳಾದ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರಿಂದ ಅವುಗಳಿಗೆ ಅದ್ಭುತವಾದ, ಪ್ರಮಾಣಪುರಸ್ಸರವಾದ ಉತ್ತರಗಳನ್ನು ಪಡೆದು, ಸಂಶಯವಿಪರ್ಯಯಗಳನ್ನು ಪರಿಹರಿಸಿಕೊಂಡ ಒಂದು ಅಭೂತಪೂರ್ವಸಂದರ್ಭವು ಧಾರವಾಡದ ಜನತೆಗೆ ಅವಿಸ್ಮರಣೀಯ.

**ಧಾರವಾಡದ ಬೃಹತ್‌ಜ್ಞಾನಸತ್ರ**

ಶ್ರೀಸತ್ಯಾತ್ಮತೀರ್ಥರು ಧಾರವಾಡದ ಎಲ್ಲ ಭಕ್ತರ ವಿಶೇಷ ಅಪೇಕ್ಷೆಗೆ ಸ್ಪಂದಿಸಿ ಒಂದು ತಿಂಗಳವರೆಗೆ (ದಿನಾಂಕ 6-6-2003 ರಿಂದ 5-7-2003) ಧಾರವಾಡದಲ್ಲಿ ನೆಲೆಸಿ, ನಗರದ ಕಲಾಭವನದಲ್ಲಿ ಪ್ರತಿನಿತ್ಯ ಸಂಜೆ ಸೇರುತ್ತಿದ್ದ ಐದು ಸಾವಿರ ಭಕ್ತರಿಗೆ ಆಶೀರ್ವಚನದ ಮೂಲಕ ಮಹಾಭಾರತ (ಅನುಶಾಸನಪರ್ವ)ದ ಸಿಹಿಯನ್ನು ಉಣಿಸಿದರು. ಅದೇ ಸಂದರ್ಭದಲ್ಲಿ ಎಲ್ಲ ಸಭಿಕರ ಅಪೇಕ್ಷೆಯ ಮೇರೆಗೆ ಸಭಿಕರು ಕೇಳಿದ ನೂರಾರು ಪ್ರಶ್ನೆಗಳಿಗೆ ಅಭೂತಪೂರ್ವವಾಗಿ, ಪ್ರಮಾಣಬದ್ಧವಾಗಿ ಶ್ರೀಗಳವರು ಉತ್ತರ ನೀಡಿದರು.

**'रोम्णां हर्षणकारिणी श्रवणतो'**

ಎಂದು ವರ್ಣಿಸಿದಂತೆ ಸಭಿಕರ ಪ್ರಶ್ನೆಗಳಿಗೆ ಶ್ರೀಗಳವರು ನೀಡಿದ ಅದ್ಭುತ ಉತ್ತರಗಳನ್ನು ಕೇಳಿ ಆದ ರೋಮಾಂಚನ ಅನುಭವವನ್ನು ತಿಳಿಸಲು ನಿಜಕ್ಕೂ ಶಬ್ದಗಳಿಲ್ಲ.

**''ಜಿಜ್ಞಾಸೆ''**

ಅಂತಹ ಒಂದು (ಅನುಭವ) ಪ್ರಶ್ನೋತ್ತರಗಳ ರಸದೌತಣ ಕೇವಲ ಧಾರವಾಡದ ಜನತೆಗೆ ಮಾತ್ರ ಸೀಮಿತವಾಗದೇ, ಎಲ್ಲ ಊರುಗಳಲ್ಲಿನ ಸಮಸ್ತ ಜಿಜ್ಞಾಸುಗಳಿಗೂ ತಲುಪಬೇಕು. ಕೇವಲ ಶಾಸ್ತ್ರಶ್ರವಣಾದಿಗಳಿಂದ ಮನಸ್ಸಿನಲ್ಲಿ ಸಹಜವಾಗಿ ಬರುವ ಸಂದೇಹಗಳಿಗೆ - ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳನ್ನು ಎಲ್ಲ ಜಿಜ್ಞಾಸುಗಳೂ ಪಡೆಯಬೇಕು.

ಈ ಹಿನ್ನಲೆಯಲ್ಲಿ ಗುರುಗಳ ವಿಶೇಷ ಆದೇಶಾನುಸಾರವಾಗಿ, ಧಾರವಾಡದ ಬೃಹತ್‌ಜ್ಞಾನಸತ್ರದಲ್ಲಿ (ಕಲಾಭವನದಲ್ಲಿ) ನಡೆದ ಆ ಪ್ರಶ್ನೋತ್ತರಗಳನ್ನು ಸಂಗ್ರಹಿಸಿ, (ಒಂದು ಪುಸ್ತಕರೂಪದಿಂದ ಎಲ್ಲ ಜಿಜ್ಞಾಸುಗಳಿಗೂ ತಲುಪಿಸಲು ಪ್ರಯತ್ನಿಸಿದ್ದೇನೆ.) ಎಲ್ಲ ಜಿಜ್ಞಾಸುಗಳಿಗೂ ತಲುಪಿಸುವ ಉದ್ದೇಶದಿಂದ ಈ ಪ್ರಶ್ನೋತ್ತರ ಪುಸ್ತಕವನ್ನು ಹೊರತರುತ್ತಿದ್ದೇನೆ.

**ಒಂದು ವಿಶೇಷ**

ಧಾರವಾಡದ ಕಲಾಭವನದಲ್ಲಿ ಸಭಿಕರ ಪ್ರಶ್ನೆಗಳಿಗೆ ಶ್ರೀಗಳವರು ಉತ್ತರ ನೀಡಿದ ಶೈಲಿ ಬಹಳ ಸುಂದರ. 'ಎಲ್ಲರೂ ಅರ್ಥಮಾಡಿಕೊಳ್ಳಬೇಕು' ಎಂಬ ಉದ್ದೇಶದಿಂದ, ಶಾಸ್ತ್ರದಲ್ಲಿ ತಿಳಿಸಿದ ಉತ್ತರಗಳನ್ನು ದೃಷ್ಟಾಂತಗಳ ಮೂಲಕ

ನಿರೂಪಿಸಿದ್ದಾರೆ. ಅಲ್ಲದೇ ತಾವು ನೀಡಿದ ಉತ್ತರಗಳು ಸ್ವಕಪೋಲಕಲ್ಪಿತವಲ್ಲ (ತಮ್ಮ ಬುದ್ಧಿಗೆ ಬಂದಂತೆ ಹೇಳಿದ್ದಲ್ಲ) ಎನ್ನುವುದನ್ನು ದೃಢಪಡಿಸಲು ಸಾಮಾನ್ಯವಾಗಿ ಎಲ್ಲ ಉತ್ತರಗಳಿಗೂ ಸರ್ವಮೂಲ-ಧರ್ಮಶಾಸ್ತ್ರ ಗ್ರಂಥಗಳ ಆಧಾರ (ಪ್ರಮಾಣ) ನೀಡಿದ್ದಾರೆ.

ಈ ರೀತಿಯಾಗಿ ದೃಷ್ಟಾಂತಗಳಿಂದ ಸಹಿತವಾದ, ಮಹತ್ವದ ಪ್ರಶ್ನೋತ್ತರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇದರಲ್ಲಿ ಐದು ವಿಭಾಗಗಳನ್ನು ಮಾಡಲಾಗಿದೆ.

1. ಸಾಮಾನ್ಯವಾದ (ಜನರಲ್) ಪ್ರಶ್ನೋತ್ತರಗಳನ್ನು ಮೊದಲನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
2. ಕರ್ಮಗಳ - ಆಚರಣೆಯ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ಎರಡನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
3. ಮಹಾಭಾರತದ ಬಗ್ಗೆ ಬಂದ ಕೆಲವು ಪ್ರಶ್ನೋತ್ತರಗಳನ್ನು ಮೂರನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
4. ಉತ್ತರಾದಿಮಠದ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ನಾಲ್ಕನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
5. ತಪ್ತಮುದ್ರಾಧಾರಣೆಯ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ಐದನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.

ಮತ್ತು ಪ್ರತಿಯೊಂದು ಉತ್ತರಗಳಿಗೂ ಶ್ರೀಗಳವರು ನೀಡಿದ ಪ್ರಮಾಣ-ಗಳನ್ನು ಆ ಆ ಉತ್ತರಗಳ ಅಡಿಟಿಪ್ಪಣಿಯಲ್ಲಿ ನಿರೂಪಿಸಲಾಗಿದೆ.

ಹೀಗೆ ಎಲ್ಲ ತತ್ವಜಿಜ್ಞಾಸುಗಳಿಗೂ ಅನುಕೂಲವಾಗುವ ದೃಷ್ಟಿಯಿಂದ ಧಾರವಾಡದ ಬೃಹತ್ ಜ್ಞಾನಸತ್ರದಲ್ಲಿ ನಡೆದ ಪ್ರಶ್ನೋತ್ತರಗಳನ್ನು ಸಂಗ್ರಹಿಸಿ, ಪುಸ್ತಕರೂಪದಿಂದ ಹೊರತರುತ್ತಿದ್ದೇನೆ. ತತ್ವಜಿಜ್ಞಾಸುಗಳು ಇದನ್ನು ಓದಿ ಪ್ರಶ್ನೋತ್ತರಗಳ ಸವಿಯನ್ನುಂಡು ಪ್ರೋತ್ಸಾಹಿಸಬೇಕೆಂದು ಆಶಿಸುತ್ತೇನೆ.

ಇತಿ

ಗುರುಪಾದಸೇವಕ

**ಕೆ. ಕಾಂತೇಶ ಕದರಮಂಡಲಗಿ.**

# ಉಪಕೃತಿ ಸ್ಮೃತಿ

''ಶರೀರಮಾದ್ಯಂ ಖಲು ಧರ್ಮಸಾಧನಂ'' ಎಂದು ಹೇಳಿದಂತೆ ಸಾಧನೆಗೆ ಒಂದು ಮಾಧ್ಯಮ ಅದು ಶರೀರ. ಅಂತಹ ಸಾಧನಶರೀರವನ್ನು ಕೊಟ್ಟು, ಆಚಾರ್ಯರ ಶಾಸ್ತ್ರವನ್ನೂ ಓದಿಸಿ ಸಾಧನೆಗೆ ಮುಖ್ಯಕಾರಣರಾದ ಪೂಜ್ಯ **ತಂದೆ-ತಾಯಿಗಳಿಗೆ** ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ವಿದ್ಯಾಪೀಠದಲ್ಲಿ ಒಂದು ಸ್ಥಾನ ಕೊಟ್ಟು, ಅನ್ನವಸ್ತ್ರಾದಿಗಳನ್ನು ನೀಡಿ ಮಕ್ಕಳಂತೆ ಬೆಳೆಸಿದ, ಕುಲಪತಿಗಳಾದ **ಪಂ|| ಪೂ|| ಗುತ್ತಲ ರಂಗಾಚಾರ್ಯರಿಗೆ** ನನ್ನ ಶಿ|| ಸಾ|| ನಮನಗಳು.

ಶಾಸ್ತ್ರಾಧ್ಯಯನ ಮಾಡಲು ಕರೆತಂದು ಸಾಧನಮಾರ್ಗವನ್ನು ತೋರಿಸಿದ **ಪಂ|| ಸತ್ಯಧ್ಯಾನಾಚಾರ್ಯ ಕಟ್ಟಿ** ಅವರಿಗೆ ಹಾಗೂ ಸಣ್ಣಗ್ರಂಥಗಳಿಂದ ಪ್ರಾರಂಭಿಸಿ ಉದ್ಗ್ರಂಥಗಳವರೆಗಿನ ಎಲ್ಲ ಗ್ರಂಥಗಳನ್ನೂ ಶುಕಪಾಠದಂತೆ ಪಾಠ ಹೇಳಿ, ಇಂದಿನ ಉನ್ನತಿಗೆ ಕಾರಣರಾಗಿರುವ, ಸಾತ್ವಿಕಸ್ವಭಾವದವರಾದ **ಪಂ|| ಆಲೂರು ಶ್ರೀನಿವಾಸಾಚಾರ್ಯರಿಗೆ**, ಮತ್ತು ವಿದ್ಯಾಪೀಠದ ಎಲ್ಲ **ಅಧ್ಯಾಪಕರಿಗೂ** ನನ್ನ ಸಾ|| ನಮಸ್ಕಾರಗಳು.

ಧಾರವಾಡದ ಕಲಾಭವನದಲ್ಲಿ ಒಂದು ತಿಂಗಳವರೆಗೆ ನಡೆದ ಪ್ರಶ್ನೋತ್ತರಗಳನ್ನು ರೆಕಾರ್ಡ್ ಮಾಡಿಕೊಟ್ಟು, ಈ ಪುಸ್ತಕವನ್ನು ಹೊರತರಲು ಸಹಕರಿಸಿದ, ನನ್ನ ಸಹಪಾಠಿಯಾದ **ಮಹಿದಾಸನಿಗೆ** ಹಾಗೂ ಸೋನ್ ಗ್ರಾಮಸ್ಥರಾದ **ಕೆ. ಹನುಮಂತರಾವ್** ಅವರಿಗೂ ನನ್ನ ಕೃತಜ್ಞತೆಗಳು.

ಪ್ರತಿಯೊಂದು ಉತ್ತರಗಳಿಗೆ ಶ್ರೀಗಳವರು ನೀಡಿದ ಸರ್ವಮೂಲ ಧರ್ಮಶಾಸ್ತ್ರಗ್ರಂಥಗಳ ಪ್ರಮಾಣಗಳನ್ನು ಸಂಗ್ರಹಿಸಿ, ಅಡಿಟಿಪ್ಪಣಿಯಲ್ಲಿ

ನಿರೂಪಿಸಿದ್ದಾರೆ. ಅಲ್ಲದೇ ತಾವು ನೀಡಿದ ಉತ್ತರಗಳು ಸ್ವಕಪೋಲಕಲ್ಪಿತವಲ್ಲ (ತಮ್ಮ ಬುದ್ಧಿಗೆ ಬಂದಂತೆ ಹೇಳಿದ್ದಲ್ಲ) ಎನ್ನುವುದನ್ನು ದೃಢಪಡಿಸಲು ಸಾಮಾನ್ಯವಾಗಿ ಎಲ್ಲ ಉತ್ತರಗಳಿಗೂ ಸರ್ವಮೂಲ-ಧರ್ಮಶಾಸ್ತ್ರ ಗ್ರಂಥಗಳ ಆಧಾರ (ಪ್ರಮಾಣ) ನೀಡಿದ್ದಾರೆ.

ಈ ರೀತಿಯಾಗಿ ದೃಷ್ಟಾಂತಗಳಿಂದ ಸಹಿತವಾದ, ಮಹತ್ವದ ಪ್ರಶ್ನೋತ್ತರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇದರಲ್ಲಿ ಐದು ವಿಭಾಗಗಳನ್ನು ಮಾಡಲಾಗಿದೆ.

1. ಸಾಮಾನ್ಯವಾದ (ಜನರಲ್) ಪ್ರಶ್ನೋತ್ತರಗಳನ್ನು ಮೊದಲನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
2. ಕರ್ಮಗಳ - ಆಚರಣೆಯ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ಎರಡನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
3. ಮಹಾಭಾರತದ ಬಗ್ಗೆ ಬಂದ ಕೆಲವು ಪ್ರಶ್ನೋತ್ತರಗಳನ್ನು ಮೂರನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
4. ಉತ್ತರಾದಿಮಠದ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ನಾಲ್ಕನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.
5. ತಪ್ತಮುದ್ರಾಧಾರಣೆಯ ಬಗ್ಗೆ ಬಂದ ಪ್ರಶ್ನೋತ್ತರಗಳನ್ನು ಐದನೇ ಭಾಗದಲ್ಲಿ ಸಂಗ್ರಹಿಸಲಾಗಿದೆ.

ಮತ್ತು ಪ್ರತಿಯೊಂದು ಉತ್ತರಗಳಿಗೂ ಶ್ರೀಗಳವರು ನೀಡಿದ ಪ್ರಮಾಣ-ಗಳನ್ನು ಆ ಆ ಉತ್ತರಗಳ ಅಡಿಟಿಪ್ಪಣಿಯಲ್ಲಿ ನಿರೂಪಿಸಲಾಗಿದೆ.

ಹೀಗೆ ಎಲ್ಲ ತತ್ವಜಿಜ್ಞಾಸುಗಳಿಗೂ ಅನುಕೂಲವಾಗುವ ದೃಷ್ಟಿಯಿಂದ ಧಾರವಾಡದ ಬೃಹತ್ ಜ್ಞಾನಸತ್ರದಲ್ಲಿ ನಡೆದ ಪ್ರಶ್ನೋತ್ತರಗಳನ್ನು ಸಂಗ್ರಹಿಸಿ, ಪುಸ್ತಕರೂಪದಿಂದ ಹೊರತರುತ್ತಿದ್ದೇನೆ. ತತ್ವಜಿಜ್ಞಾಸುಗಳು ಇದನ್ನು ಓದಿ ಪ್ರಶ್ನೋತ್ತರಗಳ ಸವಿಯನ್ನುಂಡು ಪ್ರೋತ್ಸಾಹಿಸಬೇಕೆಂದು ಆಶಿಸುತ್ತೇನೆ.

ಇತಿ

ಗುರುಪಾದಸೇವಕ

**ಕೆ. ಕಾಂತೇಶ ಕದರಮಂಡಲಗಿ.**

# ಉಪಕೃತಿ ಸ್ಮೃತಿ

''ಶರೀರಮಾದ್ಯಂ ಖಲು ಧರ್ಮಸಾಧನಂ'' ಎಂದು ಹೇಳಿದಂತೆ ಸಾಧನೆಗೆ ಒಂದು ಮಾಧ್ಯಮ ಅದು ಶರೀರ. ಅಂತಹ ಸಾಧನಶರೀರವನ್ನು ಕೊಟ್ಟು, ಆಚಾರ್ಯರ ಶಾಸ್ತ್ರವನ್ನೂ ಓದಿಸಿ ಸಾಧನೆಗೆ ಮುಖ್ಯಕಾರಣರಾದ **ಪೂಜ್ಯ ತಂದೆ-ತಾಯಿಗಳಿಗೆ** ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ವಿದ್ಯಾಪೀಠದಲ್ಲಿ ಒಂದು ಸ್ಥಾನ ಕೊಟ್ಟು, ಅನ್ನವಸ್ತ್ರಾದಿಗಳನ್ನು ನೀಡಿ ಮಕ್ಕಳಂತೆ ಬೆಳೆಸಿದ, ಕುಲಪತಿಗಳಾದ **ಪಂ|| ಪೂ|| ಗುತ್ತಲ ರಂಗಾಚಾರ್ಯ**ರಿಗೆ ನನ್ನ ಶಿ|| ಸಾ|| ನಮನಗಳು.

ಶಾಸ್ತ್ರಾಧ್ಯಯನ ಮಾಡಲು ಕರೆತಂದು ಸಾಧನಮಾರ್ಗವನ್ನು ತೋರಿಸಿದ **ಪಂ|| ಸತ್ಯಧ್ಯಾನಾಚಾರ್ಯ ಕಟ್ಟಿ** ಅವರಿಗೆ ಹಾಗೂ ಸಣ್ಣಗ್ರಂಥಗಳಿಂದ ಪ್ರಾರಂಭಿಸಿ ಉದ್ಗ್ರಂಥಗಳವರೆಗಿನ ಎಲ್ಲ ಗ್ರಂಥಗಳನ್ನೂ ಶುಕಪಾಠದಂತೆ ಪಾಠ ಹೇಳಿ, ಇಂದಿನ ಉನ್ನತಿಗೆ ಕಾರಣರಾಗಿರುವ, ಸಾತ್ವಿಕಸ್ವಭಾವದವರಾದ **ಪಂ|| ಆಲೂರು ಶ್ರೀನಿವಾಸಾಚಾರ್ಯರಿಗೆ**, ಮತ್ತು ವಿದ್ಯಾಪೀಠದ ಎಲ್ಲ **ಅಧ್ಯಾಪಕರಿಗೂ** ನನ್ನ ಸಾ|| ನಮಸ್ಕಾರಗಳು.

ಧಾರವಾಡದ ಕಲಾಭವನದಲ್ಲಿ ಒಂದು ತಿಂಗಳವರೆಗೆ ನಡೆದ ಪ್ರಶ್ನೋತ್ತರಗಳನ್ನು ರೆಕಾರ್ಡ್ ಮಾಡಿಕೊಟ್ಟು, ಈ ಪುಸ್ತಕವನ್ನು ಹೊರತರಲು ಸಹಕರಿಸಿದ, ನನ್ನ ಸಹಪಾಠಿಯಾದ **ಮಹಿದಾಸನಿಗೆ** ಹಾಗೂ ಸೋನ್ ಗ್ರಾಮಸ್ಥರಾದ **ಕೆ. ಹನುಮಂತರಾವ್** ಅವರಿಗೂ ನನ್ನ ಕೃತಜ್ಞತೆಗಳು.

ಪ್ರತಿಯೊಂದು ಉತ್ತರಗಳಿಗೆ ಶ್ರೀಗಳವರು ನೀಡಿದ ಸರ್ವಮೂಲ ಧರ್ಮಶಾಸ್ತ್ರಗ್ರಂಥಗಳ ಪ್ರಮಾಣಗಳನ್ನು ಸಂಗ್ರಹಿಸಿ, ಅಡಿಟಿಪ್ಪಣಿಯಲ್ಲಿ

ಅವುಗಳನ್ನು ಕೊಡಲು ವಿಶೇಷವಾಗಿ ಸಹಕಾರ ನೀಡಿದ ವಿದ್ಯಾಧೀಶಾಚಾರ್ಯ **ಗುತ್ತಲ್, ಶ್ರೀನಿವಾಸತೀರ್ಥಾಚಾರ್ಯ, ವಾದಿರಾಜಾಚಾರ್ಯ ಕರಣಂ, ವಾದಿರಾಜಾಚಾರ್ಯ ಎಲ್.ಎಸ್.** ಅವರಿಗೂ ನನ್ನ ನತಿತತಿಗಳು.

ಈ ಪುಸ್ತಕದ ಮುಖಪುಟವಿನ್ಯಾಸವನ್ನು ಅಂದವಾಗಿ ಮಾಡಿಕೊಟ್ಟಿರುವ **ಶ್ರೀ ಶೇಷಗಿರಿ** ಅವರಿಗೆ ನನ್ನ ಕೃತಜ್ಞತೆಗಳು.

ಪ್ರಶ್ನೋತ್ತರ ಪುಸ್ತಕದ ಅಕ್ಷರಜೋಡಣೆ ಹಾಗೂ ಮುದ್ರಣವನ್ನು ಬಹಳ ಸುಂದರವಾಗಿ ಮಾಡಿಕೊಟ್ಟಿರುವ **ವಾಗರ್ಥ** ಮುದ್ರಣಕಾರರಿಗೂ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು.

**ಕೆ. ಕಾಂತೇಶ ಕದರಮಂಡಲಗಿ.**

# ಜಿಜ್ಞಾಸೆ

ಶ್ರೀಃ

ಶ್ರೀಗುರುಭ್ಯೋನಮಃ

ಹರಿಃ ಓಂ

## ಸಾಮಾನ್ಯ (ಜನರಲ್) ವಿಭಾಗ

**ಪ್ರಶ್ನೆ 1. ಪ್ರಯಾಣಕಾಲದಲ್ಲಿ ಗಾಯತ್ರೀಮಂತ್ರಾದಿಗಳನ್ನು ಪಠಿಸುವ ಅನುಕೂಲತೆ ಇಲ್ಲದಿದ್ದಾಗ ಯಾವ ನಾಮಸ್ಮರಣೆಯನ್ನು ವಿಶೇಷವಾಗಿ ಮಾಡಬಹುದು?**

ಉತ್ತರ - ಪರಮಾತ್ಮನ ಯಾವ ನಾಮಸ್ಮರಣೆಯನ್ನಾದರೂ ಮಾಡಬಹುದು. ಪರಮಾತ್ಮನ ರಾಮ-ಕೃಷ್ಣ ಮೊದಲಾದ ನಾಮಗಳ ಸ್ಮರಣೆಯನ್ನು ಅಖಂಡವಾಗಿ ಮಾಡಬಹುದು. ಅದಕ್ಕೆ ಯಾವುದೇ ದೇಶ-ಕಾಲಗಳ ನಿರ್ಬಂಧವಿಲ್ಲ. ಸದಾಕಾಲದಲ್ಲಿಯೂ ಮಾಡಬಹುದು ಎಂಬುದಾಗಿ ಶ್ರೀಮದಾಚಾರ್ಯರು ತಿಳಿಸಿದ್ದಾರೆ.[1]

---

1.1 ''ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ ।
**ಸ್ಮರಣಂ ಸರ್ವದಾ ಯೋಗ್ಯಂ .....** ॥ ಇತಿ ನಾರಾಯಣತಂತ್ರೇ ॥''
(ಬ್ರಹ್ಮಸೂತ್ರಭಾಷ್ಯ ಅ-4 ಪಾ-1 ಸೂ-8)

''ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ !
ಸರ್ವೇ ವಿಧಿನಿಷೇಧಾಃ ಸ್ಯುರೇತಸ್ಯೈವ ವಿಧಿಂಕರಾಃ ॥''
(ಪದ್ಮಪುರಾಣ - ಉತ್ತರಖಂಡ ಅ-71 ಶ್ಲೋ-100)

''ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್।
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥''
(ಮ.ಭಾ.ತಾ.ನಿರ್ಣಯ ಅ-2 ಶ್ಲೋ-73)

ಅದರಲ್ಲಿಯೂ ರಾಮ-ಕೃಷ್ಣ-ನಾರಾಯಣ ನಾಮಗಳು ಶ್ರೇಷ್ಠ-ವಾದವುಗಳು. ಪದ್ಮಪುರಾಣದಲ್ಲಿ ರುದ್ರದೇವರು ಉಮಾದೇವಿಯರಿಗೆ ರಾಮನಾಮದ ಮಹಿಮೆಯನ್ನು ವಿಶೇಷವಾಗಿ ಹೇಳಿದ್ದಾರೆ. ''ಎಲ್ಲರೂ ನಿಮ್ಮನ್ನು ಕುರಿತು ಧ್ಯಾನ-ತಪಸ್ಸುಗಳನ್ನು ಮಾಡುತ್ತಿರುವಾಗ ನೀವು ಯಾರನ್ನು ಸ್ಮರಿಸುತ್ತಿದ್ದೀರಿ? ಸದಾ ಯಾವ ನಾಮವನ್ನು ಉಚ್ಚರಿಸುತ್ತೀರಿ?'' ಎಂದು ಉಮಾದೇವಿಯರು ಪ್ರಶ್ನಿಸುತ್ತಾರೆ. ರುದ್ರದೇವರು ಉತ್ತರಿಸುತ್ತಾರೆ-

**ರಾಮ ರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।**
**ಸಹಸ್ರನಾಮ ತುತ್ತುಲ್ಯ ರಾಮನಾಮ ವರಾನನೇ ॥**

''ನಾನು ಅಖಂಡವಾಗಿ ಸ್ಮರಣೆ ಮಾಡುವುದು ರಾಮನಾಮವನ್ನು. ವಿಷ್ಣುಸಹಸ್ರನಾಮದಂತೆ ಶ್ರೇಷ್ಠವಾದ, ಪರಮಾತ್ಮನ ಅವತಾರಗಳ ಲೀಲೆಗಳನ್ನು ವರ್ಣನೆ ಮಾಡುವ ವಾಸುದೇವಸಹಸ್ರನಾಮಗಳ ಸಮಗ್ರ-ಪಾರಾಯಣ ಮಾಡುವುದೂ ಒಂದೇ. ಭಕ್ತಿಯಿಂದ ರಾಮನಾಮಸ್ಮರಣೆ ಮಾಡುವುದೂ ಒಂದೇ. ಅಷ್ಟು ಶ್ರೇಷ್ಠವಾದ ಫಲ ರಾಮನಾಮಸ್ಮರಣೆಯಲ್ಲಿ ಇದೆ'' ಎಂದು.

ಆದ್ದರಿಂದ ಅಂತಹ ಶ್ರೇಷ್ಠವಾದ ರಾಮನಾಮಸ್ಮರಣೆಯನ್ನು ಅಥವಾ ಕೃಷ್ಣನಾಮ-ನಾರಾಯಣನಾಮಗಳ ಸ್ಮರಣೆಯನ್ನು (ಪ್ರಯಾಣಕಾಲದಲ್ಲಿ) ಸದಾ ಕಾಲದಲ್ಲಿಯೂ ಮಾಡಬಹುದು.

**ಪ್ರಶ್ನೆ 2. ಮನೆಗಳಲ್ಲಿ ಶನಿದೇವರ (ಫೋಟೋ) ಭಾವಚಿತ್ರ ಹಾಕಬಹುದೇ? ಅವರ ಪೂಜೆ-ನಮಸ್ಕಾರಾದಿಗಳನ್ನು ಮಾಡಬಹುದೇ? ಮಾಡುವುದಾದರೆ ಹೇಗೆ ಮಾಡಬೇಕು?**

ಉತ್ತರ ಶನಿದೇವರ ಭಾವಚಿತ್ರ (ಫೋಟೋ) ಹಾಕಿಕೊಂಡರೆ ಯಾವುದೇ ತಪ್ಪಿಲ್ಲ. ಮತ್ತು ಶನಿದೇವರ ಪೂಜೆ-ನಮಸ್ಕಾರಗಳನ್ನು ಮಾಡಿದರೆ ತಪ್ಪಿಲ್ಲ ಎಂದಷ್ಟೇ ಅಲ್ಲ. ಕಿಂತು ನಿರ್ಲಕ್ಷ್ಯ ಮಾಡದೇ ಶನಿ ಮೊದಲಾದ ಎಲ್ಲ ದೇವತೆಗಳಿಗೂ ಪೂಜೆ-ನಮಸ್ಕಾರಾದಿಗಳನ್ನು ಅವಶ್ಯವಾಗಿ ಮಾಡಲೇಬೇಕು ಎಂಬುದಾಗಿ ಶ್ರೀಮದಾಚಾರ್ಯರು ಆದೇಶಿಸಿದ್ದಾರೆ.[1]

ತತ್ವನ್ಯಾಸದಲ್ಲಿ ಧರಾದೇವಿ ಹಾಗೂ ಶನಿದೇವರಿಗೆ ನಮಸ್ಕಾರ ಮಾಡುವ ಶಿಷ್ಟಾಚಾರಪದ್ಧತಿಯೂ ಇದೆ. ಆದ್ದರಿಂದ ಶ್ರೀಮದಾಚಾರ್ಯರ ಆದೇಶದಂತೆ ಬ್ರಹ್ಮ-ರುದ್ರ-ಇಂದ್ರ-ಶನಿ ಮೊದಲಾದ ಎಲ್ಲ ದೇವತೆಗಳಿಗೆ ಪೂಜೆ ನಮಸ್ಕಾರಗಳನ್ನು ಅವಶ್ಯವಾಗಿ ಮಾಡಲೇಬೇಕು.

ಪೂಜೆ-ನಮಸ್ಕಾರ ಏನೇ ಮಾಡಿದರೂ 'ಭಗವಂತನ ಪರಿವಾರದವರು' ಎಂದು ತಿಳಿದು ಮಾಡಬೇಕು. ಅಂದರೆ ''ಈ ದೇವತೆಗಳು ಭಗವಂತನ ಭಕ್ತರಾಗಿದ್ದಾರೆ. ಭಗವಂತನಿಗೆ ಅಧಿಷ್ಠಾನರಾಗಿದ್ದಾರೆ. ಭಗವಂತನ ಆಜ್ಞೆಯಿಂದ, ಪ್ರೇರಣೆಯಿಂದ ನಮ್ಮ ಯೋಗ್ಯತೆ-ಕರ್ಮಗಳಿಗೆ ಅನುಸಾರವಾಗಿಯೇ ಫಲವನ್ನು ಕೊಡುತ್ತಾರೆ'' ಎಂಬ ಭಾಗವತ-ತ್ವಾನುಸಂಧಾನದಿಂದ ಪೂಜೆ-ನಮಸ್ಕಾರಗಳನ್ನು ಮಾಡಬೇಕು. [2] ಹೊರತು ಈ ದೇವತೆಗಳೇ ಸರ್ವೋತ್ತಮರೆಂದಾಗಲೀ, ಸ್ವತಂತ್ರರೆಂದಾಗಲೀ ತಿಳಿದು ಪೂಜಾದಿಗಳನ್ನು ಮಾಡಬಾರದು ಎಂದು ಶ್ರೀಮದಾಚಾರ್ಯರು ಆದೇಶ ನೀಡಿದ್ದಾರೆ.

---

2.1 ''ವಿಷ್ಣುಂ ಜ್ಞಾತ್ವಾ ತದನ್ಯತ್ರ ನೈವ ಜಾನಾತಿ ಯಃ ಪುಮಾನ್ ।
ತಾರತಮ್ಯಂ ಚ ತದ್ಭಕ್ತೇ ನ ಜಾನಾತಿ ಕಥಂಚನ ॥
ಅವಜಾನಂಶ್ಚ ತದ್ಭಕ್ತಾನಾತ್ಮನೋ ಭಕ್ತಿದರ್ಪತಃ ।
ಉಪೇಕ್ಷಕೋಽಪಿ ವಾ ತೇಷು ನ ಸ್ಮರೇದಥವಾಽಪಿ ತಾನ್ ॥
ಮಾನುಷೇಷು ಯಥಾ ಕಶ್ಚಿತ್ ಕಿಂಚಿದುಚ್ಚಃ ಪ್ರದೃಶ್ಯತೇ ।
ಏವಮೇವೋಚ್ಚತಾಂ ವಿಷ್ಣೋರಲ್ಪಾಂ ಪಶ್ಯತಿ ಚಾನ್ಯತಃ ॥
ತೇ ತು ಭಕ್ತಾಧಮಾಃ ಪ್ರೋಕ್ತಾಃ ಸ್ವರ್ಗಾದಿಫಲಭೋಗಿನಃ ।
ತೈರ್ವಿಘ್ನಿತಾ ಅಧೋ ಯಾಂತಿ ತದ್ಭಕ್ತಾನಾಮುಪೇಕ್ಷಕಃ ॥
ಕುರ್ಯುರ್ವಿಷ್ಣಾವಪಿ ದ್ವೇಷಂ ದೇವಾ ದೇವಾವಮಾನಿನಃ ।
ಪೂಜಿತಾ ವಿಷ್ಣುಭಕ್ತಿಂ ಚ ನಾವಜ್ಞೇಯಾಸ್ತತಃ ಸುರಾಃ ॥
ಉಪೇಕ್ಷಕೇಷು ದೇವಾನಾಂ ಭಕ್ತಿನಾಶಂ ಸ್ವಯಂ ಹರಿಃ ।
ಕರೋತಿ ತೇನ ವಿಭ್ರಷ್ಟಾಃ ಸಂಸರಂತಿ ಪುನಃ ಪುನಃ ॥
ಅಧೋ ವಾ ಯಾಂತಿ ವಿದ್ವೇಷಾತ್ **ಪೂಜ್ಯಾ ದೇವಾಸ್ತತಃ** ಸದಾ ।
ಯಸ್ತಾನ್ ದ್ವೇಷ್ಟಿ ಸ ತಂ ದ್ವೇಷ್ಟಿ ಯಸ್ತಾನನು ಸ ಚಾನು ತಮ್ ॥
ಐಕಾತ್ಮ್ಯಮಾಗತಂ ವಿದ್ಧಿ ದೇವೈಸ್ತಂ ಭಕ್ತಿಪೂರಿತೈಃ ।
ಉಪೇಕ್ಷಕಸ್ತು ದೇವಾನಾಂ ಯದ್ಯೈವ ನಿರಯೋಪಗಃ ॥''
''ವಿಷ್ಣೋಸ್ತು ಮಧ್ಯಮೋ ಭಕ್ತೋ ಜಾಯತೇ ಮಾನುಷೇಷು ವಾ ।
ಅಸ್ಮರನ್ ದೇವತಾ ಯಸ್ತು ಭಜತೇ ಪುರುಷೋತ್ತಮಮ್ ॥''
(ಭಾಗವತ ತಾತ್ಪರ್ಯ ಸ್ಕಂಧ-11, ಅ-2, ಶ್ಲೋ-47)

**3. ಸೃಷ್ಟಿಯ ಮೊದಲು ಲಕ್ಷ್ಮೀ-ಪರಮಾತ್ಮ ಇಬ್ಬರೇ ಇದ್ದರೇ?**

ಸೃಷ್ಟಿಯ ಮೊದಲು ಇಬ್ಬರಷ್ಟೇ ಅಲ್ಲ. ಅನೇಕ ಪದಾರ್ಥಗಳಿದ್ದವು. ಪರಮಾತ್ಮ, ಲಕ್ಷ್ಮೀದೇವಿ, ಪ್ರಕೃತಿ, ಕಾಲ, ದೇಶ, ಜೀವರು, ಜೀವರ ಕರ್ಮಗಳು, ಮನಸ್ಸಿನಲ್ಲಿನ ಸಂಸ್ಕಾರಗಳು, ವೇದಗಳು, ವರ್ಣಗಳು ಇದ್ದವು ಎಂದು ಶ್ರೀಮದಾಚಾರ್ಯರು ತಿಳಿಸಿದ್ದಾರೆ.[1]

**4. ಜೀವನಿಗೆ ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ ಸ್ಥೂಲದೇಹ ಎಂಬ ನಾಲ್ಕು ಶರೀರಗಳುಂಟು ಎನ್ನುತ್ತಾರೆ. ಆ ಎಲ್ಲ ದೇಹಗಳಿಗೂ ಇಂದ್ರಿಯಗಳು ಇವೆಯೇ?**

ಎಲ್ಲ ದೇಹಗಳಲ್ಲಿ ಇಂದ್ರಿಯಗಳಿವೆ. ವಾಸ್ತವಿಕವಾಗಿ ಅನಾದಿಕಾಲದಿಂದ ಲಿಂಗದೇಹದಲ್ಲಿಯೇ ಮುಖ್ಯವಾಗಿ ಇಂದ್ರಿಯಗಳಿರುವುದು. ಆ ಲಿಂಗದೇಹವೇ ಸ್ಥೂಲದೇಹರೂಪದಲ್ಲಿ ವಿಸ್ತೃತವಾದಾಗ ಆ ಲಿಂಗದೇಹದಲ್ಲಿರುವ ಇಂದ್ರಿಯಗಳೇ ಸ್ಥೂಲಶರೀರಕ್ಕೆ ಉಪಚಿತವಾಗಿ ಬರುತ್ತವೆ ಎಂದು ಹೇಳಿದ್ದಾರೆ.[1] ಆದ್ದರಿಂದ ಲಿಂಗದೇಹದಲ್ಲಿ, ಎಲ್ಲ ದೇಹಗಳಲ್ಲಿ ಅವಶ್ಯವಾಗಿ ಇಂದ್ರಿಯಗಳಿವೆ.

---

2.2 ''ಪೂಜಾ ಭಾಗವತತ್ವೇನ ದೇವಾದೀನಾಂ ಚ ಸರ್ವಶಃ ।''
(ಮ.ಭಾ.ತಾ.ನಿರ್ಣಯ ಅ-29, ಶ್ಲೋ.19)
''ಲಕ್ಷ್ಮ್ಯಾದೇಃ ಕ್ರಮಶಃ ಪೂಜಾಂ ಜ್ಞಾತ್ವಾ ಭಾಗವತಾ ಇತಿ ।''
(ಛಾಂದೋಗ್ಯಭಾಷ್ಯ...)
''ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾಃ ಪ್ರಧಾನತಃ ।''
(ಅನುವ್ಯಾಖ್ಯಾನ ಅ-1, ಪಾ-1, ಅಧಿ-5, ಸೂ-8)

3.1 ''ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವ ಚ ।
ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಮ್ ।
ಸಂಸ್ಕಾರಂ ಚೈವ ವೇದಾಂಶ್ಚ ಸರ್ತೇ ಕಿಂಚಿಲ್ಲಯೇ ತ್ವಭೂತ್ ॥ ಇತಿ ಬೃಹತ್ತರ್ಕೇ ॥''
(ಬೃಹದಾರಣ್ಯಭಾಷ್ಯ ಅ-3, ಬ್ರಾ-2, ಖಂ-1)

4.1 ''ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಹೀಂದ್ರಿಯಾಣಿ ತು ಸರ್ವಶಃ ।
ತೇಷಾಂ ಭೂತೈರುಪಚಯಃ ಸೃಷ್ಟಿಕಾಲೇ ವಿಧೀಯತೇ ॥
ಪರೇಣ ಸಾಮ್ಯಸಂಪ್ರಾಪ್ತೇಃ ಕಸ್ಯ ಸ್ಯಾನ್ಮುಖ್ಯನಿತ್ಯತಾ ॥ ಇತಿ ಭವಿಷ್ಯತ್ಪರ್ವಣಿ ॥''
(ಬ್ರಹ್ಮಸೂತ್ರಭಾಷ್ಯ ಅ-2, ಪಾ-4, ಸೂತ್ರ-2)
''ಸೂಕ್ಷ್ಮೇಂದ್ರಿಯಾಣಿ ಸಂತ್ಯೇವ ಸ್ಯುಸ್ಸ್ಥೂಲಾನ್ಯಪ್ಯಹಂಕೃತೇಃ ।'' (ಭಾಗವತ ತಾತ್ಪರ್ಯ)

**5. ಲಿಂಗದೇಹದಲ್ಲಿ ಹದಿನಾರು ಕಲೆಗಳಿವೆ ಎನ್ನುತ್ತಾರೆ. ಆ ಹದಿನಾರು ಕಲೆಗಳು ಯಾವುವು?**

ಇದಕ್ಕೆ ಶ್ರೀಮದಾಚಾರ್ಯರು ಎರಡು ರೀತಿಯಲ್ಲಿ 16 ಕಲೆಗಳನ್ನು ತಿಳಿಸಿದ್ದಾರೆ.

| **ಒಂದು ವಿಭಾಗ** | **ಎರಡನೇ ವಿಭಾಗ** |
|---|---|
| ಪಂಚ ಜ್ಞಾನೇಂದ್ರಿಯಗಳು | ಪಂಚ ಜ್ಞಾನೇಂದ್ರಿಯಗಳು |
| ಪಂಚ ಕರ್ಮೇಂದ್ರಿಯಗಳು | ಪಂಚ ಪ್ರಾಣಗಳು |
| ಪಂಚ ಪ್ರಾಣಗಳು | ಮನಸ್ಸಿನ ಐದು ಪ್ರಭೇದಗಳು |
| ಮನಸ್ಸು | ಹಾಗೂ ಸ್ವತಂತ್ರವಾಗಿ ಮನಸ್ಸು |

ಈ ಎರಡು ಕ್ರಮಗಳನ್ನೂ ಆಚಾರ್ಯರು ಚತುರ್ಥಸ್ಕಂಧ ಭಾಗವತ ತಾತ್ಪರ್ಯದಲ್ಲಿ ತಿಳಿಸಿದ್ದಾರೆ.[1] ಇನ್ನೊಂದು ಪ್ರಸಂಗದಲ್ಲಿ ಪಂಚಮಹಾ-ಭೂತಗಳನ್ನೂ ಭಾಗವತದಲ್ಲಿ ಹೇಳಿದ್ದಾರೆ. ಎಲ್ಲವನ್ನೂ ಪರಾಮರ್ಶಿಸಿ ನೋಡಿದಾಗ ಒಟ್ಟಿನಲ್ಲಿ ಹೇಳಬೇಕಾದರೆ -

ಪಂಚಜ್ಞಾನೇಂದ್ರಿಯಗಳು
ಪಂಚ ಕರ್ಮೇಂದ್ರಿಯಗಳು
ಪಂಚ ಪ್ರಾಣಗಳು
ಪಂಚ ವಿಧ ಮನಸ್ಸು
ಹಾಗೂ ಪಂಚ ಮಹಾಭೂತಗಳು

---

5.1 ''ಏಕಂ ಪಂಚವಿಧಂ ಲಿಂಗಂ ತ್ರಿವೃತ್ ಷೋಡಶವಿಸ್ತರಮ್ ।
ಏಷ ಚೇತನಯಾ ಯುಕ್ತೋ ಜೀವ ಇತ್ಯಭಿಧೀಯತೇ ॥''
(ಭಾಗವತ ಸ್ಕಂ-4 ಅ-29 ಶ್ಲೋ-76)

''ಪ್ರಾಣೇಂದ್ರಿಯಾಂತಃಕರಣಭೇದೇನ ತ್ರಿವಿಧಂ ಮತಮ್ ।
ಪಂಚ ಪಂಚೈವ ತೇ ಸರ್ವೇ ಪ್ರಾಣಬುದ್ಧೀಂದ್ರಿಯಾಣಿ ಚ ॥
ಕರ್ಮೇಂದ್ರಿಯಾಣಿ ಚ ತಥಾ ತಸ್ಮಾತ್ ಪಂಚವಿಧಂ ಸ್ಮೃತಂ ।
ಲಿಂಗಂ ಷೋಡಶಕಂ ಪ್ರಾಹುಃ ಮನಸಾ ಸಹ ತತ್ಪುನಃ ॥ ಇತಿ ಬ್ರಾಹ್ಮೇ ॥''
(ಭಾಗವತ ತಾತ್ಪರ್ಯ)

''ತತಶ್ಚಾಯಂ ಶ್ಲೋಕಾರ್ಥಃ ॥ ಏಕಮೇಕೇನ ಮನಸಾ ಸಹಿತಂ ತ್ರೀನ್ ಪ್ರಾಣೇಂದ್ರಿ-ಯಾಂತಃಕರಣಾಖ್ಯಾನ್ ವೃಣೋತೀತಿ ತ್ರಿವೃತ್, ತತ್ಪ್ರತ್ಯೇಕಂ ಪ್ರಾಣೇಂದ್ರಿ-ಯಾಂತಃಕರಣಭೇದೇನ ಪಂಚವಿಧಂ । ಪಂಚವಿಧಂ ಅಂತಃಕರಣಂ ಏಕಶಬ್ದೇನ ಗ್ರಾಹ್ಯಂ । ಏವಂ ಷೋಡಶಭಿಃ ವಿಸ್ತಾರಂ ವಿಸ್ತಾರೋ ಯಸ್ಯ ತತ್ ಲಿಂಗ-ಶರೀರಮ್ ॥'' (ಯಾದವಾರ್ಯ ಟಿಪ್ಪಣೀ - ಪ್ರಕಾಶಿಕಾ)

ಎಲ್ಲವೂ ಲಿಂಗಶರೀರದಲ್ಲಿ ಇವೆ. ಆದರಲ್ಲಿ ಅವಾಂತರ ವಿಶೇಷವಿವಕ್ಷೆಯನ್ನು ಮಾಡಿ ಲಿಂಗಶರೀರಕ್ಕೆ ಹದಿನಾರು ಕಲೆಗಳನ್ನು ಹೇಳಿದ್ದಾರೆ.

**6. ಪರಮಾತ್ಮ ಹಾಗೂ ವಾಯುದೇವರು ನಮ್ಮ ದೇಹದ ಒಳಗೆ ಇದ್ದಾಗಲೂ ಯಮದೂತರು ನಮ್ಮನ್ನು ಮುಟ್ಟುವ ಸಾಹಸ ಹೇಗೆ ಮಾಡುತ್ತಾರೆ?**

ಯಮದೂತರು ಮಾತ್ರ ಏಕೆ? ದೇವರು ಎಲ್ಲ ಸ್ಥಳಗಳಲ್ಲಿಯೂ ಇರುವುದರಿಂದ ಯಾರೂ ಯಾವ ಪದಾರ್ಥವನ್ನೂ ಮುಟ್ಟದೇ ಹೋಗಬೇಕಾದೀತು. ಬೆಳ್ಳಿ-ಬಂಗಾರ ಎಲ್ಲದರಲ್ಲಿಯೂ ಭಗವಂತ ಇರುವಾಗ ಕಳ್ಳರು ಅದನ್ನು ಮುಟ್ಟುವ ಸಾಹಸ ಹೇಗೆ ಮಾಡುತ್ತಾರೆ? ಎಂಬ ಪ್ರಶ್ನೆ ಇದ್ದೇ ಇದೆ.

ದೇವರು ಎಲ್ಲೆಡೆ ಇದ್ದರೂ ಸಹ ಎಲ್ಲಿ ಯಾವ ಕಾರ್ಯವನ್ನು ಮಾಡಿಸಬೇಕು ಎಂದು ಇಚ್ಛಿಸುತ್ತಾನೆ ಅಲ್ಲಿ ಆ ಕಾರ್ಯವನ್ನು ಮಾಡಿಸುತ್ತಾನೆ. ಉದಾಹರಣೆಗೆ - ದೇವರು ನಮ್ಮಲ್ಲಿ ಇರುವಂತೆ ಕಲ್ಲಿನಲ್ಲಿಯೂ ಇದ್ದಾನೆ. ಆದರೆ ಹೇಗೆ ನಮ್ಮಲ್ಲಿ ನಿಂತು 'ಮಾತನಾಡಿಸಬೇಕು' ಎಂದು ಇಚ್ಛಿಸಿ ನಮ್ಮಿಂದ ಮಾತನಾಡಿಸುತ್ತಾನೆ ಹಾಗೆ ಕಲ್ಲಿನಲ್ಲಿ ನಿಂತು 'ಮಾತನಾಡಿಸಬೇಕು' ಎಂದು ಇಚ್ಛಿಸುವುದಿಲ್ಲ. ಆದರಿಂದ ಮಾತನಾಡಿಸುವುದೂ ಇಲ್ಲ. ಅದರಂತೆ ಉತ್ತಮರಲ್ಲಿ, ಸಜ್ಜನರಲ್ಲಿ ನಿಂತು 'ಯಮದೂತರ ಬಾಧೆ ಆಗುವುದು ಬೇಡ' ಎಂದು ಇಚ್ಛಿಸಿದರೆ ವಿಷ್ಣುದೂತರು ಬಂದು ಕರೆದುಕೊಂಡು ಹೋಗುತ್ತಾರೆ. ದೇವರು ಒಳಗೇ ಇದ್ದರೂ ಸಹ 'ಯಮದೂತರು ಬಂದು ಕರೆದುಕೊಂಡು ಹೋಗಲಿ' ಎಂದು ಇಚ್ಛಿಸಿದರೆ ಯಮದೂತರೇ ಬಂದು ಕರೆದುಕೊಂಡು ಹೋಗುತ್ತಾರೆ.

**7. ಕುಟುಂಬದ ಎಲ್ಲರೂ ಧರ್ಮಮಾರ್ಗದಲ್ಲಿ ನಡೆಯಬೇಕಾದರೆ ಅದಕ್ಕಾಗಿ ಗೃಹಸ್ಥನಾದವನು ಯಾವ ಸಾಧನೆಯನ್ನು ಮಾಡಬೇಕು?**

ಅದಕ್ಕೆ ಗಾಯತ್ರೀಮಂತ್ರದ ಜಪವೇ ಶ್ರೇಷ್ಠಸಾಧನೆ. ಅದಕ್ಕಾಗಿಯೇ **ಧಿಯೋ ಯೋ ನಃ ಪ್ರಚೋದಯಾತ್** ಎಂದಿದ್ದಾರೆ. ಅಂದರೆ ಮೇ ಪ್ರಚೋದಯಾತ್ (ನನಗೆ ಬುದ್ಧಿ ಕೊಡಲಿ) ಎಂದು ಒಬ್ಬನಿಗೆ ಮಾತ್ರ ಪ್ರಾರ್ಥನೆಯಲ್ಲ. ಕಿಂತು 'ನಃ ಧಿಯಃ ಪ್ರಚೋದಯಾತ್' ಕುಟುಂಬದ ಎಲ್ಲರಿಗೂ ಧರ್ಮಮಾರ್ಗದಲ್ಲಿ ನಡೆಯುವ ಬುದ್ಧಿಯನ್ನು ಕೊಡಲಿ ಎಂದು ಪ್ರಾರ್ಥನೆಯಿದೆ.

ತಾನು, ತನ್ನ ಹೆಂಡತಿ-ಮಕ್ಕಳು, ಬಾಂಧವರು ಎಲ್ಲರೂ ಧರ್ಮಮಾರ್ಗದಲ್ಲಿ ನಡೆಯುವುದಕ್ಕಾಗಿ ಆ ಪ್ರಾರ್ಥನೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ವಿಶೇಷವಾಗಿ ಪ್ರತಿನಿತ್ಯ ಗಾಯತ್ರೀಮಂತ್ರದ ಜಪವನ್ನು ಮಾಡಬೇಕು.

ಗಾಯತ್ರೀಮಂತ್ರಜಪದ ಅಧಿಕಾರವಿಲ್ಲದವರಾಗಿದ್ದರೆ ತಮಗೆ ಉಚಿತವಾದ ಯಾವುದೇ ಜಪ, ಸ್ತೋತ್ರಪಾರಾಯಣ, ನಾಮಸ್ಮರಣೆಗಳನ್ನು ಮಾಡುವಾಗ ಹಾಗೂ ಹಾಡುಗಳನ್ನು ಹಾಡುವಾಗ ಈ ಧಾರ್ಮಿಕ ಬುದ್ಧಿಯ ಪ್ರಾರ್ಥನೆಯನ್ನು ಭಕ್ತಿಯಿಂದ ಭಗವಂತನಲ್ಲಿ ಸಲ್ಲಿಸಬೇಕು. ಭಕ್ತಿಯಿಂದ ಪರಮಾತ್ಮನಿಗೆ ಶರಣಾದರೆ, ಪುಣ್ಯವನ್ನು ಸಂಪಾದಿಸಿದರೆ ಅದರಿಂದ ಭಗವಂತ ನಮ್ಮ ಮೇಲೆ (ಕುಟುಂಬದ ಎಲ್ಲರ ಮೇಲೆ) ಅನುಗ್ರಹ ಮಾಡುತ್ತಾನೆ.

**8. ಜೀವನು ತನ್ನ ಸ್ವರೂಪಭೂತವಾದ ಅನಂತ ಆನಂದದ ಪ್ರಾಪ್ತಿಗಾಗಿ (ಮೋಕ್ಷಕ್ಕಾಗಿ) ಪ್ರಯತ್ನಿಸಬೇಕು ಎನ್ನುತ್ತದೆ ಶಾಸ್ತ್ರ ಆದರೆ ಜೀವನು ಎಂದಾದರೂ ಸ್ವರೂಪಸುಖದ ಸ್ವಲ್ಪರುಚಿಯನ್ನಾದರೂ ಕಂಡಿದ್ದರೆ ಅದಕ್ಕಾಗಿ ಪ್ರಯತ್ನಿಸಬಹುದಲ್ಲವೇ?**

ಇದಕ್ಕೆ ಎರಡು ರೀತಿಯಿಂದ ಉತ್ತರ ತಿಳಿಯಬಹುದು.

1. ಮೊದಲನೆಯದಾಗಿ ''ಮೋಕ್ಷದಲ್ಲಿ ಅನುಭವಿಸುವ ಸ್ವರೂಪಸುಖದ ಅನುಭವ (ರುಚಿ) ಸ್ವಲ್ಪವೂ ನಮಗಿಲ್ಲ'' ಎಂದು ತಿಳಿದದ್ದೇ ತಪ್ಪು. ಜೀವನು ಸಂಸಾರದಲ್ಲಿರುವಾಗಲೇ ಅನೇಕ ಅವಸ್ಥೆಗಳಲ್ಲಿ ಸ್ವರೂಪಸುಖವನ್ನು ಅನುಭವಿಸುತ್ತಾನೆ ಎಂದು ಶಾಸ್ತ್ರ ತಿಳಿಸುತ್ತದೆ.

   ಅ) ಸಂಸಾರದಲ್ಲಿದ್ದಾಗಲೇ ಅಪರೋಕ್ಷಜ್ಞಾನವಾದ ಮೇಲೆ ಅಸಂಪ್ರಜ್ಞಾತಸಮಾಧಿಯಲ್ಲಿ ಭಗವದ್ದರ್ಶನದಿಂದಾಗಿ ಸ್ವರೂಪಸುಖವನ್ನು ಅನುಭವಿಸುತ್ತಾನೆ.[1]

---

8.1 1. ವಿವರಣೆ :- ಶ್ರೀಮದಾಚಾರ್ಯರು ಎರಡನೇ ಅಧ್ಯಾಯದ ಗೀತಾಭಾಷ್ಯದಲ್ಲಿ-
''ಯೋಗಿನಾಂ ಭಿನ್ನಲಿಂಗಾನಾಮಾವಿರ್ಭೂತಸ್ವರೂಪಿಣಾಮ್ ।
**ಪ್ರಾಪ್ತಾನಾಂ ಪರಮಾನಂದಂ** ತಾರತಮ್ಯಂ ಸದೈವ ಹಿ ॥''
(ಲಿಂಗದೇಹಭಂಗಮಾಡಿಕೊಂಡ, ಆವಿರ್ಭೂತಸ್ವರೂಪವುಳ್ಳ, ಪರಮಾನಂದ (ಸ್ವರೂಪಸುಖ)ವನ್ನು ಹೊಂದಿದ ಮುಕ್ತರಲ್ಲೂ ತಾರತಮ್ಯ ಇದ್ದೇ ಇರುತ್ತದೆ)

ಆ) ಪ್ರತಿನಿತ್ಯ ಸುಷುಪ್ತಿಯಲ್ಲಿ ಸ್ವರೂಪಸುಖವನ್ನು ಅನುಭವಿಸುತ್ತಾನೆ.[2]

---

ಎಂಬುದಾಗಿ ಸ್ವರೂಪಸುಖ ಎಂಬ ಅರ್ಥದಲ್ಲಿ **'ಪರಮಾನಂದ'** ಶಬ್ದವನ್ನು ಬಳಸಿ, ಮತ್ತು -

''ದುಃಖಾಭಾವಃ **ಪರಾನಂದೋ** ಲಿಂಗಭೇದಸ್ಸಮಾ ಮತಾಃ ।
ತಥಾಽಪಿ **ಪರಮಾನಂದೋ** ಜ್ಞಾನಭೇದಾತ್ತು ಭಿದ್ಯತೇ ॥''

(ದುಃಖಾಭಾವ - ಸ್ವರೂಪಸುಖ - ಲಿಂಗಭೇದ ಈ ವಿಷಯಗಳಲ್ಲಿ ಮುಕ್ತರಿಗೂ ಭಗವಂತನಿಗೂ ಸಾಮ್ಯವಿದ್ದರೂ ಸಹ ಭಗವಂತನ ಪರಮಾನಂದ (ಸ್ವರೂಪಸುಖ) ಹಾಗೂ ಜ್ಞಾನದಲ್ಲಿ ಪ್ರಾಚುರ್ಯವಿದೆ)

ಎಂಬುದಾಗಿ ಸ್ವರೂಪಸುಖ ಎಂಬ ಅರ್ಥದಲ್ಲಿ **'ಪರಮಾನಂದ'** ಶಬ್ದವನ್ನು ಮತ್ತೆ ಬಳಸಿ, ಅಸಂಪ್ರಜ್ಞಾತಸಮಾಧಿಯ ಬಗ್ಗೆ ಹೇಳುವಾಗ 'ಸಮಾಧಾವಚಲಾ ಬುದ್ಧಿ:' ಎಂಬ ಗೀತೆಯನ್ನು ವ್ಯಾಖ್ಯಾನಿಸುವಾಗ -

''ತತಶ್ಚ ಸಮಾಧಾವಚಲಾ ಬ್ರಹ್ಮಪ್ರತ್ಯಕ್ಷದರ್ಶನೇನ ಭೇರೀತಾಡನಾದಾವಪಿ **ಪರಮಾನಂದಮಗ್ನತ್ವಾತ್**''

(ಅಸಂಪ್ರಜ್ಞಾತಸಮಾಧಿಯಲ್ಲಿ ಬ್ರಹ್ಮನ ಅಪರೋಕ್ಷಜ್ಞಾನದಿಂದ ಪರಮಾನಂದ (ಸ್ವರೂಪಸುಖ)ದಲ್ಲಿ ಮಗ್ನನಾಗಿರುವುದರಿಂದ ಅವನ ಕಿವಿಯ ಹತ್ತಿರ ಭೇರೀ (ನಗಾರೀ)ತಾಡನ ಮಾಡಿದರೂ ಅವನಿಗೆ ಎಚ್ಚರವಿರುವುದಿಲ್ಲ)

ಎಂಬುದಾಗಿ ಅಸಂಪ್ರಜ್ಞಾತಸಮಾಧಿಯಲ್ಲಿರುವಾಗ ಅದೇ (ಸ್ವರೂಪಸುಖ ಎಂಬ ಅರ್ಥದಲ್ಲಿ ಹಿಂದೆ ಬಳಸಿದ) **'ಪರಮಾನಂದ'** ಶಬ್ದವನ್ನೇ ಬಳಸಿದ್ದಾರೆ. ಇವುಗಳನ್ನು ಅವಲೋಕಿಸಿದರೆ ''ಅಸಂಪ್ರಜ್ಞಾತಸಮಾಧಿಯಲ್ಲಿರುವಾಗ ಬ್ರಹ್ಮದರ್ಶನದಿಂದಾಗಿ ಜೀವನು ಸ್ವರೂಪಸುಖವನ್ನು ಅನುಭವಿಸುತ್ತಾನೆ'' ಎಂಬ ವಿಚಾರವು ಸ್ಪಷ್ಟವಾಗುತ್ತದೆ.

2. ಅಷ್ಟಲ್ಲದೇ, ಭೇರೀತಾಡನಾದಿಗಳನ್ನು ಮಾಡಿದರೂ ಎಚ್ಚರವಿರುವುದಿಲ್ಲ ಎಂದು ಹೇಳುವುದರಿಂದ ''ಅಸಂಪ್ರಜ್ಞಾತಸಮಾಧಿಯಲ್ಲಿ ಬಾಹ್ಯವಿಷಯಗಳ ಜ್ಞಾನ ಇರುವುದಿಲ್ಲ'' ಎಂದು ತಿಳಿಯುತ್ತದೆ. **''ಅಸಂಪ್ರಜ್ಞಾತಸಮಾಧೀನಾಂ ಬಾಹ್ಯಾದರ್ಶನಾತ್''** ಎಂಬುದಾಗಿ (ಗೀತಾಭಾಷ್ಯ 5-24) ಆಚಾರ್ಯರೇ ಸ್ಪಷ್ಟವಾಗಿ ಈ ವಿಷಯವನ್ನು ಹೇಳಿದ್ದಾರೆ. ಹೀಗೆ ಬಾಹ್ಯವಿಷಯಗಳ ಜ್ಞಾನ ಇಲ್ಲದಿದ್ದರೂ ಸುಖಾನುಭವ ಆಗುತ್ತದೆ ಎಂದರೆ ''ಅಸಂಪ್ರಜ್ಞಾತಸಮಾಧಿಯಲ್ಲಿ ಭಗವದ್ದರ್ಶನದಿಂದ ಜೀವನು ಅನುಭವಿಸುವ ಆ ಸುಖವು ಬಾಹ್ಯವಿಷಯ-ಜನ್ಯ(ಮನಃಪರಿಣಾಮರೂಪ)ಸುಖವಲ್ಲ, ಕಿಂತು ಸ್ವರೂಪ- ಸುಖವೇ'' ಎಂಬ ಅಂಶವು ಸ್ಪಷ್ಟವಾಗಿ ತಿಳಿದುಬರುತ್ತದೆ.

8.2 ಅ. ''ಅವಿಷಯಜನ್ಯತ್ವಾತ್ ಸೌಷುಪ್ತಿಕಸುಖಸ್ಯ ।''

(ನ್ಯಾಯಸುಧಾ - ಜಿಜ್ಞಾಸಾಧಿಕರಣ)

ಆ. ''ಅವಿಷಯೇತಿ ॥ **ಸುಷುಪ್ತೌ ಸ್ವರೂಪಸುಖಾನುಭವಾಂಗೀಕಾರಾತ್** ಇತಿ ಭಾವಃ ।'' (ವಿದ್ಯಾಧೀಶತೀರ್ಥಕೃತಾ ವಾಕ್ಯಾರ್ಥಚಂದ್ರಿಕಾ - ಸುಧಾಟಿಪ್ಪಣೀ)

ಇ. 'ಸ್ವಾತ್ಮತಮೋ ವಿನಾ' ಇತ್ಯತ್ರ ಸ್ವಾತ್ಮಾಚ ತಮಶ್ಚೇತಿ ದ್ವಂದ್ವೈಕವದ್ಭಾವಃ । ಇದಂ ಚೋಪಲಕ್ಷಣಮ್ । **ಸ್ವರೂಪಭೂತಸುಖಸ್ಯಾಪಿ ಅನುಭವಾದಿತ್ಯಪಿ ಜ್ಞೇಯಮ್** ।

(ವಾದಿರಾಜಯತಿ ವಿರಚಿತಾ - ಮಾಂಡೂಕೋಪನಿಷದ್ಭಾಷ್ಯಟಿಪ್ಪಣೀ - ಪ್ರಕಾಶಿಕಾ, ಖಂ-1)

ಈ. ''ತತಃ ಪ್ರಾಜ್ಞಾಪರನಾಮಕಸ್ಯ ಅಗ್ರೇಶಸ್ಯ ಅತ್ಯಂತಂ ಸಮೀಪೇ ಸ್ಥಿತೋ ಜೀವಃ ತೇಜಸ್ಯಂತರ್ಗತೋ ಭವತಿ । ತೇನ ಚ ಭಗವತ್ಸನ್ನಿಧಾನವಿಶೇಷೇಣ ಜೀವಸ್ಯ **ಸ್ವರೂಪಸುಖಂ ಅಭಿವ್ಯಜ್ಯತೇ** । ತಾದೃಶಂ ಸುಖಂ ಅನುಭವಂಸ್ತು ಜೀವೋ ಜಾಗ್ರದಾದ್ಯವಸ್ಥಾಕಾಲೀನಂ ಶ್ರಮಚಿಂತಾದಿಕಂ ವಿಸ್ಮೃತ್ಯ **ಕೇವಲಮಾನಂದ-ನಿರ್ಭರೋ ಮುಕ್ತವದವತಿಷ್ಠತೇ**''

(ವಿಷ್ಣುತೀರ್ಥವಿರಚಿತಾ - ಷೋಡಶೀ - ಸುಷುಪ್ತಿಪ್ರಕರಣ)

5. ವಿವರಣೆ :-'ಯತ್ರ ಸರ್ವೇಂದ್ರಿಯೋಪರಮಃ ಸಾ ಸುಷುಪ್ತಿಃ' ಎಂದು ಮಾಂಡೂಕೋಪನಿಷತ್ತಿನ ಗೂಢಕರ್ತೃಕಾಟೀಕಾಟಿಪ್ಪಣಿಯಲ್ಲಿ ಹೇಳಿದಂತೆ ಮನಸ್ಸನ್ನು ಹಿಡಿದು ಎಲ್ಲ ಇಂದ್ರಿಯಗಳೂ ಸುಷುಪ್ತಿಯಲ್ಲಿ ಉಪರತವಾಗಿರುತ್ತವೆ (ಇಂದ್ರಿಯವ್ಯಾಪಾರ ಇರುವುದಿಲ್ಲ). ಅಂತೆಯೇ ಬಾಹ್ಯವಿಷಯಗಳ ಜ್ಞಾನವೂ ಇರುವುದಿಲ್ಲ. ಹೀಗಾಗಿ ಬಾಹ್ಯವಿಷಯಗಳಿಂದ ಜನ್ಯವಾದ (ಮನಃಪರಿಣಾಮ-ರೂಪವಾದ) ಬಾಹ್ಯಸುಖ ಇರಲು ಸಾಧ್ಯವಿಲ್ಲ. ಆದರೆ,

''ಪ್ರಾಜ್ಞಃ ಸಂವೇದಯೇತ್ ಕಿಂಚಿತ್ ಜೀವಕಾಲತಮೋ ವಿನಾ ।
ಸುಪ್ತ್ಯವಸ್ಥಾಂ **ಸುಖಂ** ಚಾಪಿ ವಿನಾ ನಾನ್ಯತ್ ಪ್ರದರ್ಶಯೇತ್ ॥''

ಎಂಬುದಾಗಿ ಮಾಂಡೂಕೋಪನಿಷದ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ತಿಳಿಸಿದಂತೆ ಸುಷುಪ್ತಿಯಲ್ಲಿ ಜೀವನಿಗೆ ಸುಖಾನುಭವ ಇರುತ್ತದೆ. ಅಲ್ಲದೇ ''ಏತಾವಂತಂ ಕಾಲಂ ಸುಖಂ ಅಹಂ ಅಸ್ವಾಪ್ಸಂ'' (ಇಷ್ಟೊತ್ತಿನವರೆಗೆ ಸುಖವಾಗಿ ನಿದ್ರಿಸಿದೆ) ಎಂಬುದಾಗಿ ಪ್ರತಿಯೊಬ್ಬನಿಗೂ ಸುಖದ ಪರಾಮರ್ಶವು ಅನುಭವಕ್ಕೂ ಬರುತ್ತದೆ. ಅಂದಮೇಲೆ ಎಲ್ಲ ಇಂದ್ರಿಯಗಳೂ (ಮನಸ್ಸೂ) ಉಪರತವಾಗಿ ಬಾಹ್ಯವಿಷಯಗಳ ಜ್ಞಾನವಿಲ್ಲದಿದ್ದರೂ ಸುಖಾನುಭವವಾಗುತ್ತದೆ ಎಂದರೆ ಜೀವನು ಸುಷುಪ್ತಿಯಲ್ಲಿ ಸ್ವರೂಪೇಂದ್ರಿಯ(ಸಾಕ್ಷಿ)ದಿಂದ ಅನುಭವಿಸುವ ಆ ಸುಖವು ಸ್ವರೂಪಸುಖವೇ ಎಂದು ಸಿದ್ಧವಾಗುತ್ತದೆ.

ಇ) ಕಾಮಾದ್ಯುಪದ್ರವಕ್ಷಯವಾದಾಗ ಸ್ವರೂಪಸುಖವನ್ನು ಅನುಭವಿಸುತ್ತಾನೆ.[3]

ಅಂದಮೇಲೆ ಪ್ರತಿನಿತ್ಯ ಮಲಗಿದಾಗ ಅರ್ಥಾತ್ ಸುಷುಪ್ತಿಯಲ್ಲಿ ಅನುಭವಿಸುವ ಸುಖ ಅದು ಸ್ವರೂಪಸುಖವೇ. ಮೋಕ್ಷದಲ್ಲಿ ಯಾವ ವಿಷಯಾದಿಗಳ ಅಪೇಕ್ಷೆ ಇಲ್ಲದಿದ್ದರೂ ಅನುಭವಿಸುವ ಯಾವ ಸ್ವರೂಪಸುಖವುಂಟೋ ಆ ಸ್ವರೂಪಸುಖದ ತುಣುಕನ್ನೇ ಪ್ರಾಜ್ಞನಾಮಕ-ಪರಮಾತ್ಮ ಪ್ರತಿನಿತ್ಯ ಸುಷುಪ್ತಿಯಲ್ಲಿ ನಮಗೆ ಕೊಡುತ್ತಾನೆ. ಸ್ವರೂಪಸುಖದ ರುಚಿಯನ್ನು ತೋರಿಸುತ್ತಾನೆ. ಆದ್ದರಿಂದ ''ಸ್ವರೂಪಸುಖದ ರುಚಿಯೇ ನಮಗೆ ಗೊತ್ತಿಲ್ಲ'' ಎನ್ನುವುದು ಸರಿಯಲ್ಲ.

ಸುಷುಪ್ತಿಯಲ್ಲಿರುವಾಗ ಸ್ವರೂಪಸುಖದ ರುಚಿಯನ್ನು ಅನಾದಿ-ಕಾಲದಿಂದಲೂ ಕಾಣುತ್ತಿದ್ದೇವೆ. ಹೀಗೆ ಸ್ವರೂಪಸುಖದ ರುಚಿ ಕಂಡಿದ್ದರಿಂದ ಅದರ ಪ್ರಾಪ್ತಿಗಾಗಿ (ಮೋಕ್ಷಕ್ಕಾಗಿ) ಪ್ರಯತ್ನಿಸಬೇಕಾದದ್ದು ನಮ್ಮ ಕರ್ತವ್ಯ.

2. ಎರಡನೆಯದಾಗಿ ''ನಾವು ಪ್ರತಿನಿತ್ಯ ಅನುಭವಿಸುವ ವೈಷಯಿಕಸುಖವು ಸುಖವೇ ಅಲ್ಲ'' ಎಂದು ತಿಳಿದಿದ್ದರೆ ಅದು ತಪ್ಪು. ಈ ವೈಷಯಿಕ ಸುಖವೂ ಸುಖವೇ. ಮೋಕ್ಷದಲ್ಲಿನ ಸುಖವು ವಿಷಯಗಳಿಂದ ಹುಟ್ಟುವುದಲ್ಲ, ದುಃಖಮಿಶ್ರಿತವಾದದ್ದಲ್ಲ. ಆದರೆ ಇಲ್ಲಿನ ಸುಖವು ವಿಷಯಗಳಿಂದ ಹೊಸದಾಗಿ ಹುಟ್ಟುತ್ತದೆ, ದುಃಖಮಿಶ್ರಿತವಾಗಿದೆ. ಅಂದಮಾತ್ರಕ್ಕೆ ಅದು ಸುಖವೇ ಅಲ್ಲ ಎನ್ನುವುದು ತಪ್ಪು.

ಕಡುಬಡತನದಲ್ಲಿಯೇ ಬೆಳೆದ ವ್ಯಕ್ತಿ ಹುಟ್ಟಿದಾಗಿನಿಂದಲೂ ಪ್ರತಿನಿತ್ಯ ಕಲ್ಲುಮಿಶ್ರಿತವಾದ ಅಕ್ಕಿಯನ್ನೇ (ಆರಿಸಿ ಆರಿಸಿ) ಬೇಯಿಸಿ ಅನ್ನವನ್ನು ತಿನ್ನುತ್ತಿರುತ್ತಾನೆ. ಅಂತಹ ವ್ಯಕ್ತಿಗೆ 'ಒಂದೂ ಕಲ್ಲಿಲ್ಲದ ಶುದ್ಧವಾದ ಅನ್ನವನ್ನು ಕೊಡುತ್ತೇನೆ' ಎಂದು ಹೇಳಿದರೆ ''ನಿತ್ಯವೂ ಕಲ್ಲುಗಳನ್ನು ಆರಿಸಿ ಆರಿಸಿ ಸಾಕಾಗಿದೆ. ಅವಶ್ಯವಾಗಿ ಕೊಡು'' ಎಂದು ಸಂತೋಷದಿಂದ ತೆಗೆದುಕೊಳ್ಳುತ್ತಾನೆ. ಹೊರತು 'ನನಗೆ ಹುಟ್ಟಿದಾಗಿನಿಂದಲೂ

---

8.3 ''ಕಾಮರಹಿತೇ ಆತ್ಮನಿ ಯತ್ ಸುಖಂ ವಿಂದತಿ ಸ ಏವ ಬ್ರಹ್ಮಯೋಗಯುಕ್ತಾತ್ಮಾ ಚೇತ್ತದೇವ ಅಕ್ಷಯಂ ಸುಖಂ ವಿಂದತಿ ।''

(ಗೀತಾಭಾಷ್ಯ ಅ-5 ಶ್ಲೋಕ-21)

''ಕಾಮಾದ್ಯುಪದ್ರವಕ್ಷಯೇ ಸ್ವರೂಪಸುಖಸ್ಯ ಆವಿರ್ಭಾವಾತ್ ।''

(ಪ್ರಮೇಯದೀಪಿಕಾ 5-21)

ಕಲ್ಲುಮಿಶ್ರಿತವಾಗದ, ಶುದ್ಧವಾದ ಅನ್ನವನ್ನು ತಿಂದೇ ಗೊತ್ತಿಲ್ಲ. ಅದರ ರುಚಿಯೇ ತಿಳಿದಿಲ್ಲ' ಎಂಬುದಾಗಿ ಶುದ್ಧ ಅನ್ನವನ್ನು ತೆಗೆದುಕೊಳ್ಳುವುದಕ್ಕೆ ಹಿಂಜರಿಯುವುದಿಲ್ಲ. ಕಾರಣ ಆ ವ್ಯಕ್ತಿಗೆ ಅನ್ನದ ರುಚಿ ಗೊತ್ತು. ಕಲ್ಲುಗಳ ಪ್ರತಿಬಂಧವೂ ಗೊತ್ತು. ಅಂತಹ ಪ್ರತಿಬಂಧಕವಾದ ಕಲ್ಲುಗಳಿಂದ ರಹಿತವಾದ ಅನ್ನ ಎಂದರೆ ಸುಲಭವಾಗಿ ಅರ್ಥಮಾಡಿಕೊಳ್ಳುತ್ತಾನೆ.

ಅದರಂತೆ ನಮಗೆ ಸುಖದ ಅನುಭವವೂ ಇದೆ. ದುಃಖದ ಜ್ಞಾನವೂ ಇದೆ. ಅಂತಹ ದುಃಖವೆಂಬ ಕಲ್ಲುಗಳನ್ನು ತೆಗೆದು (ದುಃಖದ ಲೇಶವೂ ಇಲ್ಲದ) ಸುಖವೆಂಬ ಶುದ್ಧ ಅನ್ನವನ್ನು (ಕೇವಲ ಸುಖವನ್ನು) ಮೋಕ್ಷದಲ್ಲಿ ಕೊಡುತ್ತೇನೆ ಎಂದು ದೇವರು ಹೇಳಿದರೆ ಅದು ನಮಗೆ ಅರ್ಥವಾಗಿಯೇ ಆಗುತ್ತದೆ.

**9. ಉಪನಯನದಲ್ಲಿ ಗಾಯತ್ರೀಮಂತ್ರದ ಉಪದೇಶವನ್ನು ಬಹಳ ಗೋಪ್ಯವಾಗಿ ಮಾಡುತ್ತಾರೆ. ಹಾಗಿದ್ದಾಗ ಇಂದು ಅಂತಹ ಗಾಯತ್ರೀಮಂತ್ರವನ್ನು ಸಿಕ್ಕ ಸಿಕ್ಕಲ್ಲಿ ಯಾರು ಬೇಕಾದರೂ ಹೇಳುತ್ತಾರೆಂದರೆ ಆ ಗೋಪ್ಯಉಪದೇಶಕ್ಕೆ ಏನು ಬೆಲೆ?**

ಗಾಯತ್ರೀಮಂತ್ರವನ್ನು ಹಾಗೆ ಯಾರು ಬೇಕಾದರೂ ಎಲ್ಲಿ ಬೇಕಾದರೂ ಹೇಳಿದರೆ ಅದು ಅವರ (ಹೇಳುವವರ - ಹೇಳಿಸಿದವರ) ತಪ್ಪು. ಗಾಯತ್ರೀ ಮಂತ್ರಕ್ಕೆ ಒಂದು ನಿಯಮದ ಚೌಕಟ್ಟಿದೆ. ಗಾಯತ್ರೀಮಂತ್ರವನ್ನು ಉಚ್ಚರಿಸುವ ಅಧಿಕಾರ, ಉಪನಯನ ಸಂಸ್ಕಾರ ಪಡೆದವರಿಗೆ ಮಾತ್ರ ಇರುವುದು. ಹೊರತು ಯಾರು ಬೇಕಾದರೂ ಹೇಳುವುದಲ್ಲ.

ಮತ್ತು ಗಾಯತ್ರೀಮಂತ್ರವನ್ನು ಜಪ ಮಾಡುವುದರಲ್ಲಿ ಉಪಯೋಗಿಸ-ಬೇಕೇ ಹೊರತು ಸಿಕ್ಕ ಸಿಕ್ಕ ಸ್ಥಳಗಳಲ್ಲಿ ಹಾಡು ಹಾಡುವುದಕ್ಕೆ ಟೈಮ್ ಪಾಸ್ ಮಾಡುವುದಕ್ಕಾಗಿ ಉಪಯೋಗಿಸಬಾರದು. ಅದರ ಪಾವಿತ್ರ್ಯವನ್ನು ಕಳೆಯಬಾರದು. ಪರಮಾತ್ಮನ ನಾಮಸ್ಮರಣೆಯನ್ನು ಮಾತ್ರ ಸರ್ವತ್ರ-ಸದಾಕಾಲಗಳಲ್ಲಿ ಮಾಡಬಹುದಾಗಿದೆ. ಆದರೆ ಗಾಯತ್ರೀ ಮಂತ್ರಕ್ಕೆ ಅಧಿಕಾರಿ-ದೇಶ-ಕಾಲಗಳ ನಿರ್ಬಂಧವಿದೆ.

**10. ಸಗೋತ್ರವಿವಾಹವನ್ನು ಮಾಡಬಾರದು ಎಂದು ಹೇಳುವುದಾದರೆ, ಸೋದರ ಮಾವ/ಅತ್ತೆ ಮಕ್ಕಳನ್ನು ಮದುವೆಯಾಗುವ ಪದ್ಧತಿಯನ್ನು ತಡೆಯಬಹುದಲ್ಲವೇ?**

ಇದು ಇಂದಿನ ಚರ್ಚೆಯಲ್ಲ. ಮೊದಲಿನಿಂದಲೂ ಶಾಸ್ತ್ರದಲ್ಲಿ ಇದರ ಬಗ್ಗೆ ಕೂಲಂಕುಶವಾಗಿ ಚರ್ಚೆ (ವಿಚಾರ) ನಡೆಯುತ್ತಲೇ ಬಂದಿದೆ. ಸಗೋತ್ರ

ವಿವಾಹವನ್ನು ಶಾಸ್ತ್ರವು ಮೊದಲಿನಿಂದಲೂ ನಿಷೇಧಿಸುತ್ತಿದೆ.[1] ವೈಜ್ಞಾನಿಕವಾಗಿಯೂ ಇಂದು ಅದನ್ನು ನಿಷೇಧಿಸುತ್ತಿದ್ದಾರೆ. ಆದ್ದರಿಂದ ಸಗೋತ್ರವಿವಾಹ ನಿಷಿದ್ಧ ಎನ್ನುವುದು ಸತ್ಯ. ಇದರಲ್ಲಿ ವಿವಾದವಿಲ್ಲ.

ಸೋದರ ಮಾವ/ಅತ್ತೆ ಮಕ್ಕಳನ್ನು ಮದುವೆ ಮಾಡಿಕೊಳ್ಳುವ ಪದ್ಧತಿಯು ಮಾತ್ರ ಕೆಲವು ದೇಶಭೇದದಿಂದ ವ್ಯತ್ಯಸ್ತವಾಗಿದೆ. ಸೋದರ ಮಾವ/ಅತ್ತೆ ಮಕ್ಕಳ ಮದುವೆ ಮಾಡಬಾರದು ಎಂದು ಉತ್ತರದೇಶದಲ್ಲಿ ಅದರ ನಿಷೇಧವಿದೆ.[2] ಆದರೆ ದಕ್ಷಿಣ ದೇಶದಲ್ಲಿ ಈ ಪದ್ಧತಿ ನಡೆದುಕೊಂಡು ಬಂದಿದೆ. ದಕ್ಷಿಣದೇಶದಲ್ಲಿ ಅದಕ್ಕೆ ನಿಷೇಧವಿಲ್ಲ.[3]

ಈ ಮಾತುಲಕನ್ಯಾಪರಿಣಯವು ಧರ್ಮವೋ? ಅಧರ್ಮವೋ? ಎಂದು ಕೇಳಿದರೆ ಅದು ದೇಶಭೇದದಿಂದ ಎರಡೂ ಆಗುತ್ತದೆ. ಅಂದರೆ ಉತ್ತರ ದೇಶದಲ್ಲಿ ಮಾತುಲಕನ್ಯಾಪರಿಣಯವು ಅಧರ್ಮವಾದರೆ ದಕ್ಷಿಣದೇಶದಲ್ಲಿ ಅದು ಧರ್ಮವೇ ಎಂಬ ಶಾಸ್ತ್ರವಿಚಾರವನ್ನು ಟೀಕಾಕೃತ್ಪಾದರು ತಮ್ಮ ನ್ಯಾಯಸುಧೆಯಲ್ಲಿ[4] ಹಿಡಿದಿದ್ದಾರೆ. (ಸಂ.:- ದಕ್ಷಿಣದೇಶದ

---

10.1 ''ಸಮಾನಗೋತ್ರಪ್ರವರಾಂ ಕನ್ಯಾಂ ಊಢ್ವೋಪಗಮ್ಯ ಚ ।
ತಸ್ಯಾಮುತ್ಪಾದ್ಯ ಚಂಡಾಲಂ ಬ್ರಾಹ್ಮಣ್ಯಾದೇವ ಹೀಯತೇ ॥''
(ಸ್ಮೃತಿಚಂದ್ರಿಕಾ - ಸಂಸ್ಕಾರಕಾಂಡ ವಿವಾಹ)
''ಪರಿಣೀಯ ಸಗೋತ್ರಾಂ ತು ಸಮಾನಪ್ರವರಾಂ ತಥಾ ।
ಸಂಗಂ ಕೃತ್ವಾ ತತಸ್ತಸ್ಯಾ ದ್ವಿಜಶ್ಚಾಂದ್ರಾಯಣಂ ಚರೇತ್ ॥ಇತಿ॥ ''
(ಸ್ಮೃತಿಮುಕ್ತಾವಲಿ - ಸಗೋತ್ರಾದಿವಿವಾಹನಿಷೇಧ)

10.2 ಏವಂ ಮಾತುಲಸಂಬಂಧಂ ನೈವ ಕುರ್ಯಾತ್ । ಶಾತಾತಪೋऽಪಿ-
'ಮಾತುಲಸ್ಯ ಸುತಾಮೂಢ್ವಾ ಮಾತೃಗೋತ್ರಾಂ ತಥೈವ ಚ ।
ಸಮಾತೃಪ್ರವರಾಂ ಚೈವ ದ್ವಿಜಶ್ಚಾಂದ್ರಾಯಣಂ ಚರೇತ್ ॥'
ಇತಿ ಪ್ರಾಯಶ್ಚಿತ್ತಸ್ಮರಣಾತ್ । **ಮಾತೃಗೋತ್ರಾಂ ಇತ್ಯನೇನ ನರ್ಮದಾಯಾ ಉದೀಚ್ಯ ದೇಶೇ ಯೇ ಮಾತುಲದುಹಿತೃಸಂಬಂಧಂ ಆಚರಂತಿ ತೇಷಾಂ ನಿಷೇಧವಿಷಯತ್ವಮ್ । ತೇಷಾಮೇವ ದೋಷಸ್ಮರಣಾತ್** । ಶ್ರುತಿಸ್ಮೃತಿವಿಧಾನಾತ್ । ತದುಕ್ತಂ ವ್ಯಾಘ್ರಪಾದೇನ-
'ಉದ್ವಹೇತ್ ದಕ್ಷಿಣೇ ವಿದ್ವಾನ್ಮಾತುಲಸ್ಯ ಚ ವೈ ಸುತಾಮ್ ।
**ಉತ್ತರೇ ನೋದ್ವಹೇತ್ ವಿಪ್ರೋ ಹ್ಯೇಷ ಧರ್ಮಃ ಸನಾತನಃ ॥** (ಸ್ಮೃತಿರತ್ನಾಕರ)

10.3 ''ಆಪಸ್ತಂಬೋऽಪಿ -
ಪಿತೃಸ್ವಸುಃ ಸುತಾಯಾಶ್ಚ ಸುತಾಯಾ ಮಾತುಲಸ್ಯ ಚ ।
ವಿವಾಹಂ **ದಕ್ಷಿಣೇ ದೇಶೇ** ಪ್ರಶಂಸಂತಿ ಮನೀಷಿಣಃ ॥
ಸ್ಮೃತ್ಯಂತರೇऽಪಿ -

ವಾತಾವರಣದಲ್ಲಿ ಅದು ಅನರ್ಥಕಾರಣವಲ್ಲ ಎಂಬ ದೃಷ್ಟಿಯಿಂದ ಪ್ರಾಯಃ ಹಿರಿಯರು ಈ ಪದ್ಧತಿಯನ್ನು ಹಿಡಿದಿರಬಹುದು. ಉತ್ತರದೇಶದಲ್ಲಿ ಅದು ಅನರ್ಥಕಾರಣವಾಗುವ ದೃಷ್ಟಿಯಿಂದ ಅದನ್ನು ನಿಷೇಧಿಸಿರಬಹುದು. ಆದರೆ ಅಲ್ಲಿ ನಿಷಿದ್ಧವೇಕೆ? ಇಲ್ಲಿ ಯಾಕೆ ನಿಷಿದ್ಧವಲ್ಲ? ಎನ್ನುವುದನ್ನು ಇಂದಿನ ವಿಜ್ಞಾನಿಗಳು ವಿಶೇಷವಾಗಿ ಸಂಶೋಧಿಸಬೇಕಾಗಿದೆ).

ಆದ್ದರಿಂದ ಸಗೋತ್ರವಿವಾಹವನ್ನು ನಿಷೇಧಿಸಿದರೂ ಮಾತುಲಕನ್ಯಾ-ಪರಿಣಯವನ್ನು ನಿಷೇಧಿಸಲು ಬರುವುದಿಲ್ಲ. ದಕ್ಷಿಣದೇಶದಲ್ಲಿ ಈ ರೀತಿಯ ಪದ್ಧತಿಯೂ ಇದೆ. ದಕ್ಷಿಣದೇಶದಲ್ಲಿ ಅದಕ್ಕೆ ಶಾಸ್ತ್ರವೂ ಒಪ್ಪಿಗೆ ನೀಡಿದೆ.[5]

---

ಮಾತುಲಸ್ಯ ಸುತಾಯಾಶ್ಚ ಸುತಾಯಾಶ್ಚ ಪಿತೃಸ್ವಸುಃ ।
ವಿವಾಹೋ **ದಕ್ಷಿಣೇ ದೇಶೇ** ಸಂಕೋಚ್ಯಾಪಿ ಸಪಿಂಡನಾಮ್ ॥
ಗ್ರಂಥಾಂತರೇ -
ವಿಂಧ್ಯಸ್ಯ **ದಕ್ಷಿಣೇ ದೇಶೇ** ವಿವಾಹಾದಿಮಹೋತ್ಸವಮ್ ।
ಮಾತುಲಸ್ಯ ಸುತಾಯಾಶ್ಚ ಕುರ್ಯಾದಿತ್ಯಾಹ ಗೌತಮಃ ॥
ಸಂಗ್ರಹೇ -
ಉದ್ವಹೇತ್ ಮಾತುಲಸುತಾಂ ಸುತಾಮಪಿ ಪಿತೃಸ್ವಸುಃ ।
**ನ ದೋಷೋ ದಾಕ್ಷಿಣಾತ್ಯಾನಾಂ** ಇತಿ ಬೋಧಾಯನೋಽಬ್ರವೀತ್ ॥
ಪಿತೃಸ್ವಸುಃ ಸುತಾಯಾಶ್ಚ ದುಹಿತುರ್ಮಾತುಲಸ್ಯ ಚ ।
ಉದ್ವಾಹಃ ಪುನಾತ್ಯುಭಯತೋ ದಶಪೂರ್ವೋಂದಶಾವರಾನ್ ॥
ತಸ್ಮಾನ್ಮಾತುಲಸಂಬಂಧೋ **ನ ದೋಷೋ ದಕ್ಷಿಣೇ ಯಥಾ** ॥ಇತಿ॥''
(ಸ್ಮೃತಿರತ್ನಾಕರ)

10.4 ''ಉತ ಮದನಭಿಮತಪ್ರಯೋಜನಂ ಆರ್ಯಾವರ್ತವಾಸಿನಂ ಪ್ರತಿ ದಾಕ್ಷಿಣಾತ್ಯಸ್ಯ ಮಾತುಲಕನ್ಯಾಪರಿಣಯನಪ್ರಕಾರೋಪದೇಶವತ್ ।''
(ನ್ಯಾಯಸುಧಾ - ಜಿಜ್ಞಾಸಾಧಿಕರಣ - ಶಾಸ್ತ್ರಪ್ರವರ್ತಕವಿಚಾರ)

10.5 ''ಯೇಷಾಂ ಕುಲೇ ಮಾತುಲಕನ್ಯಾಪರಿಣಯಃ ಪರಂಪರಾಪ್ರಾಪ್ತಃ ತೈಃ ಸ ಕಾರ್ಯಃ ।
'ಗೋತ್ರಾನ್ಮಾತುಃ ಸಪಿಂಡಾಚ್ಚ ವಿವಾಹೋ ಗೋವಧಸ್ತಥಾ'
ಇತಿ ಮಾತುಲಕನ್ಯಾವಿವಾಹಸ್ಯ ಕಲಿವರ್ಜ್ಯತ್ವವಚನಮಪಿ ಯೇಷಾಂ ಕುಲೇ ದೇಶೇ ಮಾತುಲಕನ್ಯಾವಿವಾಹೋ ನಾಸ್ತಿ
ತತ್ಪರಮ್ । ಮಾತುಲಕನ್ಯಾಪರಿಣಯನಸ್ಯ ಅನೇಕಶ್ರುತಿಸ್ಮೃತಿಸಿದ್ಧತ್ವಾತ್ ।''
(ಧರ್ಮಸಿಂಧು - ತೃತೀಯಪರಿಚ್ಛೇದ ವಿವಾಹಪ್ರಕರಣ)

**11. ಎಲ್ಲ ಗ್ರಂಥಗಳ ಕೊನೆಯಲ್ಲಿ ಫಲಶ್ರುತಿಯನ್ನು ಏಕೆ ಹೇಳುತ್ತಾರೆ? ಅಷ್ಟೆಲ್ಲ ಫಲಗಳನ್ನು ಹೇಳಿದಾಗಲೂ ಜನಕರಾಜನಂತೆ ನಿಷ್ಕಾಮವಾಗಿ ಕರ್ಮ ಮಾಡಲು ಹೇಗೆ ಸಾಧ್ಯ?**

ಆ ರೀತಿಯಾಗಿ ಫಲಗಳನ್ನು ಹೇಳದೇ, ಕೇವಲ ಬಹುಜನ್ಮಸಾಧ್ಯವಾದ ಮೋಕ್ಷವೊಂದೇ ಫಲ ಎಂದು ಹೇಳಿಬಿಟ್ಟರೆ ಯಾರಿಗೂ ಕರ್ಮದಲ್ಲಿ ಪ್ರವೃತ್ತಿಯೇ ಹುಟ್ಟದಿರಬೇಕಾಗುತ್ತದೆ. ಅಷ್ಟು ದಿವಸ(ಜನ್ಮ)ಗಳ ನಂತರ ಸಿಗುವ ಮೋಕ್ಷಕ್ಕಾಗಿ ಕಾಯುವವರು ಯಾರು? ತತ್ಕಾಲದಲ್ಲಿ ಆಗುವ ಫಲಗಳನ್ನು ಹೇಳಿದಾಗ ಕರ್ಮದಲ್ಲಿ ನಮಗೆ ಅಭಿರುಚಿ ಹುಟ್ಟಿ, ಪ್ರವೃತ್ತರಾಗಲಿ ಎಂಬ ದೃಷ್ಟಿಯಿಂದ ಫಲಶ್ರುತಿಯನ್ನು ಹೇಳುತ್ತಾರೆ.[1]

ಕೊನೆಗೆ ಕರ್ಮದಲ್ಲಿ ನಮಗೆ ಅಭಿರುಚಿ ಹುಟ್ಟಿದಾಗ ಮೂಲಭೂತವಾದ ಮೋಕ್ಷವೆಂಬ ತತ್ವವನ್ನು ಹೇಳುತ್ತಾರೆ.

---

11.1 ''ಫಲಶ್ರುತಿರಿಯಂ ನೃಣಾಂ ನಃ ಶ್ರೇಯೋರೋಚನಂ ಪರಂ ।
ಶ್ರೋತುರ್ವಿವಕ್ಷಯಾ ಪ್ರೋಕ್ತಂ ಯಥಾ ಭೈಷಜ್ಯರೋಚನಂ ॥''

(ಭಾಗವತ ಸ್ಕಂ-11 ಅ-21 ಶ್ಲೋ-23)

''ಅನೇಕ ಬ್ರಹ್ಮಕಾಲಪ್ರಾಪ್ಯತ್ವಾತ್ ಮೋಕ್ಷಸ್ಯ ತಾವಂತಂ ಕಾಲಂ ತಪ ಏವ ಕರ್ತುಂ ನ ಶಕ್ಯತ ಇತಿ ಮಂದಾಧಿಕಾರಿಣಾಂ ಸ್ವರ್ಗಾದಿಷ್ವಭಿರುಚಿರ್ಭವತಿ । ತಾನ್ ಪ್ರತ್ಯಂತೇ ಮೋಕ್ಷ ಏವ ಭವತಿ । ಅಂತರಾಳೇऽಪ್ಯೇವಂವಿಧಂ ಸ್ವರ್ಗಾದಿಕಂ ಸುಖಂ ಭವತಿ । ತಸ್ಮಾದ್ ವಿಹಿತಂ ಕರ್ಮ ಕರ್ತವ್ಯಮಿತಿ ರೋಚಯತಿ । ಉತ್ತಮಾನಾಂ ತು ಯಸ್ಮಾದೇತಾದೃಶಮನಿತ್ಯತ್ವಾದಿದೋಷವತ್ ಸ್ವರ್ಗಾದಿಕಂ ತಸ್ಮಾನ್ಮೋಕ್ಷಫಲ ಏವ ವೇದ ಇತಿ ದರ್ಶಯತಿ । ನ ಹಿ ಸರ್ವಪ್ರಮಾಣೋತ್ತಮೋ ವೇದೋऽಲ್ಪಫಲೇ ಪರ್ಯವಸಿತಃ ।
ಮಂದಾಧಿಕಾರಿಣಾಂ ನಿತ್ಯಂ ತಪಸ್ಯೆವ ಪ್ರತೀಕ್ಷಿತುಮ್ ।
ಮೋಕ್ಷೋ ನ ಶಕ್ಯತೇऽಧೈರ್ಯಾತ್ ತತಃ ಸ್ವರ್ಗಾದಿಕಂ ಭವೇತ್ ॥
ಸ್ವರ್ಗಾದಿಷ್ವಲ್ಪಫಲತಾಂ ಜ್ಞಾಪಯಿತ್ವಾ ವಿಮೋಕ್ಷದಮ್ ।
ಜ್ಞಾನಂ ವಕ್ತುಂ ತೂತ್ತಮಾನಾಂ ನಿತ್ಯೋ ವೇದಃ ಪ್ರವರ್ತತೇ ॥
ಇಕ್ಷುದಂಡಂ ದದಾನೀತಿ ಯಥಾ ಭೈಷಜ್ಯರೋಚನಮ್ ।
ಏವಂ ಮಂದೇಷೂತ್ತಮೇಷು ಮೋಕ್ಷಮಾಹಾತ್ಮ್ಯಮುಚ್ಯತೇ ॥
ನ ಹ್ಯಲ್ಪಫಲಭಾಗ್ ವೇದೋ ವಾಸುದೇವೈಕಸಂಶ್ರಯಃ ॥
॥ಇತಿ ವಿಚಾರೇ ॥ ''

(ಭಾಗವತ ತಾತ್ಪರ್ಯ 11-21-23)

**12. ಸನ್ಯಾಸಿಗಳು - ಬ್ರಹ್ಮಚಾರಿಗಳು ಹಿಡಿಯುವ ದಂಡಕಾಷ್ಠದ ಹಿನ್ನಲೆ ಹಾಗೂ ಮಹತ್ವ (ಮಹಿಮೆ) ಏನು?**

ಮೊದಲಿಗೆ ದಂಡಕಾಷ್ಠ ಹಿಡಿಯುವ ಹಿನ್ನಲೆಯನ್ನು ತಿಳಿಯಬೇಕಾದರೆ :-

ಮನಸ್ಸು-ಮಾತು-ದೇಹ ಈ ಮೂರನ್ನೂ ದಂಡನೆ ಮಾಡುವ ವಿಶೇಷ ಕೆಲಸ ಸನ್ಯಾಸಿ-ಬ್ರಹ್ಮಚಾರಿಗಳಿಗೆ ಇರುತ್ತದೆ. ಅದರ ನೆನಪಾಗುವುದಕ್ಕಾಗಿ ದಂಡ ಎನ್ನುವುದು ಒಂದು ಚಿಹ್ನೆಯಿದ್ದಂತೆ. ಆ ದಂಡದಲ್ಲಿ ಪಿತೃದೇವತೆಗಳ ಹಾಗೂ ಇತರ ದೇವತೆಗಳ ಆವಾಹನೆಯನ್ನು ಮಾಡಿ, ಅಂತಹ ಎಲ್ಲ ದೇವತೆಗಳ ಸನ್ನಿಧಾನದಿಂದ ಕೂಡಿದ ದಂಡವನ್ನು ಧಾರಣೆ ಮಾಡುವುದರಿಂದ ''ಎಲ್ಲ ದೇವತೆಗಳ ಸಮಕ್ಷಮದಲ್ಲಿ ನಾನು ಪ್ರತಿಜ್ಞೆ ಮಾಡಿ ಸನ್ಯಾಸವನ್ನು ಅಥವಾ ಬ್ರಹ್ಮಚರ್ಯವನ್ನು ಸ್ವೀಕರಿಸಿದ್ದೇನೆ. ಅನ್ನುವುದಕ್ಕಾಗಿ ನಾನು ನನ್ನ ನಿಯಮವನ್ನು ಬಿಟ್ಟು ಹೋಗಬಾರದು'' ಎನ್ನುವ ವಿಚಾರ ಆಗಾಗ (ದಂಡವನ್ನು ನೋಡಿದಾಗಲೆಲ್ಲಾ) ಇವನಿಗೆ ನೆನಪಿಗೆ ಬರಬೇಕು. ಹೀಗೆ ತಾನು ಮಾಡಿದ ಮನಸ್ಸು-ಮಾತು-ದೇಹಗಳ ದಂಡನೆಪ್ರತಿಜ್ಞೆಯ ನೆನಪಾಗುವುದಕ್ಕಾಗಿ ಸನ್ಯಾಸಿಗಳು ಅಥವಾ ಬ್ರಹ್ಮಚಾರಿಗಳು ದಂಡಧಾರಣೆ ಮಾಡಬೇಕು.

ಎರಡನೆಯದಾಗಿ ದಂಡಕಾಷ್ಠದ ಮಹತ್ವ ತಿಳಿಯಬೇಕೆಂದರೆ :-

ದಂಡಕಾಷ್ಠದಲ್ಲಿ ಎಲ್ಲ ದೇವತೆಗಳ ಸನ್ನಿಧಾನವಿದೆ. ಇತರ ಗೃಹಸ್ಥಾಶ್ರಮಿಗಳು ತಾವು ಪಡೆದ ದೇವತೆಗಳ ಉಪಕಾರಕ್ಕೆ ಪ್ರತೀಕಾರವಾಗಿ ಯಜ್ಞಗಳನ್ನು ಮಾಡುತ್ತಾರೆ. ಪಿತೃಗಳ ಉಪಕಾರ ಪಡೆದದ್ದಕ್ಕಾಗಿ ಪಿತೃಗಳಿಗಾಗಿ ಶ್ರಾದ್ಧವನ್ನು ಮಾಡುತ್ತಾರೆ. ಸನ್ನಾಸಿಗಳಿಗೆ ಶ್ರಾದ್ಧ-ಯಜ್ಞ ಮಾಡುವ ಅಧಿಕಾರವಿಲ್ಲ. ಆದರೆ ದೇವತೆಗಳ ಉಪಕಾರ, ಪಿತೃಗಳ ಉಪಕಾರ ತಪ್ಪಿದ್ದಲ್ಲ. ಸನ್ಯಾಸಿಗಳಿಗೂ ದೇವತೆಗಳ, ಪಿತೃಗಳ ಅನುಗ್ರಹ ಬೇಕೇ ಬೇಕು. ಹಾಗಾದರೆ ಅದಕ್ಕಾಗಿ (ಆ ದೇವತೆಗಳ ಪಿತೃಗಳ ಉಪಕಾರಕ್ಕೆ ಪ್ರತೀಕಾರವಾಗಿ) ಏನು ಮಾಡಬೇಕು?

ಏಕಾದಶಸ್ಕಂಧ ಭಾಗವತತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ.[1]

**''ಉದಕೈಶ್ಚ ನಮಸ್ಕಾರೈಃ''**

---

12.1 ''ಉದಕೈಶ್ಚ ನಮಸ್ಕಾರೈಃ ಸ್ತುತಿಭಿರ್ಮನಸಾ ತಥಾ ।
ಯತಿಭಿಶ್ಚಾಪಿ ಸಂಪೂಜ್ಯಾ ದೇವಾ ಮೋಕ್ಷಂ ಯಿಯಾಸುಭಿಃ ॥
ಮಧ್ಯೇ ವಿಷ್ಣುಮನುಸ್ಮೃತ್ಯ ನಾನ್ಯಥಾ ತು ಕಥಂಚನ ॥
ಇತಿ ಸಮಯಾಚಾರೇ ॥''
(ಭಾಗವತತಾತ್ಪರ್ಯ ಸ್ಕಂ-11 ಅ-5 ಶ್ಲೋ-42)

ಅಲ್ಲಿ 'ಉದಕೈಃ'' ಎಂಬ ಪದಕ್ಕೆ ಶ್ರೀನಿವಾಸತೀರ್ಥರು 'ದಂಡೋದಕೈಃ' ಎಂದು ಅರ್ಥ ಹೇಳುತ್ತಾರೆ. 'ಉದಕೈಃ' ಎಂಬ ಪದಕ್ಕೆ 'ಉದಕೈಃ ಅರ್ಘ್ಯಾದಿಭಿಃ' ಎಂದು ಶ್ರೀ ಸುಧೀಂದ್ರತೀರ್ಥರು ವ್ಯಾಖ್ಯಾನಿಸುತ್ತಾರೆ. ಗೃಹಸ್ಥಾಶ್ರಮಿಗಳು ಯಜ್ಞ-ಶ್ರಾದ್ಧಾದಿಗಳನ್ನು ಮಾಡಿ ದೇವತೆಗಳನ್ನು ಪಿತೃಗಳನ್ನು ಸಂತೋಷಪಡಿಸಿದರೆ, ದಂಡದಲ್ಲಿ ಸನ್ನಿಹಿತರಾದ ದೇವತೆಗಳಿಗೆ ಹಾಗೂ ಪಿತೃಗಳಿಗೆ ಕೇವಲ ತೀರ್ಥವನ್ನು (ನೀರನ್ನು) ಸಮರ್ಪಣ ಮಾಡುವ ಮುಖಾಂತರವೇ ಯಜ್ಞ-ಶ್ರಾದ್ಧಾದಿಗಳಿಂದ ಬರುವ ಪುಣ್ಯವನ್ನು ಸನ್ಯಾಸಿಗಳು ಪಡೆದುಕೊಳ್ಳುತ್ತಾರೆ. ಅದಕ್ಕಾಗಿ ಅವರಿಗೆ ದಂಡವನ್ನು ನೀಡಿದ್ದಾರೆ. ಅದರ ಉದ್ದೇಶ ಗೃಹಸ್ಥಾಶ್ರಮಿಗಳಿಗೆ ಯಾವ ವಿಸ್ತೃತವಾದ ಕರ್ಮಗಳಿವೆ ಅವುಗಳನ್ನು ಸಂಕ್ಷೇಪ ಮಾಡಿಕೊಂಡು, ಉಳಿದ ಅಧ್ಯಯನ - ಅಧ್ಯಾಪನಾದಿ ಸಾಧನೆಯನ್ನು ಹೆಚ್ಚು ಮಾಡಬೇಕು ಎನ್ನುವುದಕ್ಕಾಗಿ ಈ ವಿಧಾನವನ್ನು ಹಾಕಿಕೊಟ್ಟಿದ್ದಾರೆ.

ಬ್ರಹ್ಮಚಾರಿಗಳಿಗೂ ಸಹ ವೇಣುದಂಡದ ಸಂಪರ್ಕವು ವೈಜ್ಞಾನಿಕವಾಗಿಯೂ ಹಿತಕರ ಎಂದು ತಿಳಿಸುತ್ತಾರೆ.

**13. ಗಂಡು-ಹೆಣ್ಣುಗಳ ಗೋತ್ರ ಒಂದೇ ಆಗಿದ್ದರೆ ಹೆಣ್ಣನ್ನು ದತ್ತಕ್ಕೆ ಕೊಟ್ಟು ಮದುವೆ ಮಾಡಬಹುದೇ?**

ಮೊದಲಿನ ತಮ್ಮ ಗೋತ್ರ, ಹಾಗೂ ಯಾವ ಗೋತ್ರದವರಿಗೆ ದತ್ತು ಕೊಟ್ಟಿರುತ್ತಾರೋ ಅವರ ಗೋತ್ರ, ಎರಡೂ ಗೋತ್ರಗಳನ್ನು ಬಿಟ್ಟು ಉಳಿದ ಗೋತ್ರದವರಿಗೆ ವಿವಾಹ ಮಾಡಿಕೊಡಬೇಕು ಎಂದೇ ಶಾಸ್ತ್ರದ ವಿಧಾನವಿದೆ.[1] ಆದ್ದರಿಂದ ದತ್ತಕ್ಕೆ ಕೊಟ್ಟ ಮಾತ್ರಕ್ಕೆ ಸಗೋತ್ರವಿವಾಹ ಮಾಡಲು ಬರುವುದಿಲ್ಲ.

**14. ಸರಿಯಾದ ರೀತಿಯಲ್ಲಿ ವೇದಮಂತ್ರಗಳ ಉಪದೇಶ ಆಗದಿದ್ದಾಗ ಏನು ಮಾಡಬೇಕು? ಅಂತಹ ವೇದಮಂತ್ರಗಳ ಅನುಷ್ಠಾನದಿಂದ ಪುಣ್ಯ ಬರುತ್ತದೆಯೇ? ಇಲ್ಲವೇ?**

ಕಲಿಯುವಾಗಲೇ ಸರಿಯಾದ ಕ್ರಮದಲ್ಲಿ ಕಲಿಯಬೇಕು. ಗುರೂಪದೇಶವಿಲ್ಲದೇ ತಾನೇ ಕೇವಲ ಪುಸ್ತಕವನ್ನು ಓದಿ ಕಲಿತಿದ್ದರೆ ಅಥವಾ

---

13.1 ''ವಿವಾಹಹೇತುಸರ್ವದತ್ತಕೇನ ಜನಕಪಾಲಕಯೋಃ ಉಭಯೋರಪಿ ಪಿತ್ರೋಃ ಗೋತ್ರಪ್ರವರಸಂಬಂಧಿನೀ ಕನ್ಯಾ ವರ್ಜನೀಯಾ''

''ಏವಂ ದತ್ತಕನ್ಯಾಯಾ ಅಪಿ ಸ್ವೀಕಾರ ಉಕ್ತವಿಧಿನಾ ಕಾರ್ಯಃ । ತತ್ರ ಪರಗೋತ್ರೋತ್ಪನ್ನಾಯಾ ಗ್ರಹಣೇ ವಿವಾಹೇ ಗೋತ್ರದ್ವಯವರ್ಜನಂ ಪ್ರಾಗ್ವತ್''

(ಧರ್ಮಸಿಂಧು - ತೃತೀಯಪರಿಚ್ಛೇದ - ವಿವಾಹ)

ಸರಿಯಾದ ಕ್ರಮದಲ್ಲಿ ಗುರುಗಳಿಂದ ಉಪದೇಶವಾಗಿಲ್ಲದಿದ್ದರೆ ಅದು ಫಲಪ್ರದವಾಗುವುದಿಲ್ಲ. ಗುರುಮುಖದಿಂದ ಸರಿಯಾಗಿ ಕಲಿತರೆ ಮಾತ್ರ ಆ ವಿದ್ಯೆ ಫಲಪ್ರದವಾಗುತ್ತದೆ ಎಂದು ಶಾಸ್ತ್ರವು ತಿಳಿಸುತ್ತದೆ.[1] ಆದ್ದರಿಂದ ಹೇಗೋ ಒಂದು ರೀತಿಯಲ್ಲಿ ಕಲಿತವರು ಏನು ಮಾಡಬೇಕೆಂದರೆ, ತಾನು ಮೊದಲು ಏನೇನು ಕಲಿತಿರುತ್ತಾನೆ ಅವೆಲ್ಲವನ್ನೂ ಇನ್ನೊಮ್ಮೆ ಗುರುಮುಖದಿಂದ ಸರಿಯಾಗಿ ಹೇಳಿಸಿಕೊಂಡು (ಉಪದೇಶ ತೆಗೆದುಕೊಂಡು) ಶುದ್ಧವಾದ ರೀತಿಯಲ್ಲಿ ಅದರ ಅನುಷ್ಠಾನವನ್ನು ಮುಂದೆ ಮಾಡಬೇಕು.

ಇನ್ನು ಮುಂದೆ ಕಲಿಯುವವರು ಮಾತ್ರ ಆ ರೀತಿ ತಪ್ಪನ್ನು ಮಾಡದೇ ಸರಿಯಾಗಿ ಗುರುಗಳಲ್ಲಿ ಅಧ್ಯಯನ ಮಾಡಿ, ಉಪದೇಶ ಪಡೆದು ಅನುಷ್ಠಾನ ಮಾಡಬೇಕು.

**15. ಅದು ಇದು ಎಂಬುದಾಗಿ ನಾನಾವಿಧ ಸ್ತ್ರೀದೇವತೆಗಳ ಆರಾಧನೆಯನ್ನು ಮಾಡಬಹುದೇ?**

ಮನಸ್ಸಿಗೆ ಬಂದ ದೇವತೆಗಳನ್ನು ಮನಸ್ಸಿಗೆ ಬಂದ ರೀತಿಯಲ್ಲಿ ಪೂಜೆ ಮಾಡುವುದಲ್ಲ. ಅದಕ್ಕೆ ಶ್ರೀಮದಾಚಾರ್ಯರು ಹಾಗೂ ಅನೇಕ ದಾಸವರೇಣ್ಯರು ಲಕ್ಷ್ಮೀ, ಭಾರತೀ, ಸರಸ್ವತೀ ಮೊದಲಾದ ದೇವತಾಸ್ತ್ರೀಯರ ಉಪಾಸನೆಯನ್ನು ಯಾವ ಕ್ರಮದಲ್ಲಿ ಹೇಳಿದ್ದಾರೆಯೋ ಆ ಕ್ರಮದಲ್ಲಿ ಆ ದೇವತೆಗಳನ್ನು ಆರಾಧಿಸಬೇಕು.

---

14.1 ''ಗುರುಶಿಷ್ಯಯೋರಯೋಗ್ಯತ್ವಾತ್ ಗುರುವೃತ್ತೇರಪೂರ್ತಿತಃ ।
ಅಪ್ರಸಾದಾದ್ ಗುರೋರ್ವಿದ್ಯಾ ನ ಯಥೋಕ್ತಫಲಪ್ರದಾ ॥ ॥ಇತಿ ಚ ॥''
''ವಿದ್ಯಾಃ ಕರ್ಮಾಣಿ ಚ ಸದಾ ಗುರೋಃಪ್ರಾಪ್ತಾಃ ಫಲಪ್ರದಾಃ ।
ಅನ್ಯಥಾ ನೈವ ಫಲದಾಃ ಪ್ರಸನ್ನೋಕ್ತಾಃ ಫಲಪ್ರದಾಃ ॥ ಇತಿ ತಂತ್ರಸಾರೇ ॥''
(ಭಾಗವತ ತಾತ್ಪರ್ಯ ಸ್ಕಂ-5 ಅ-8 ಶ್ಲೋ-37)
''ಸಮ್ಯಗ್‌ಲಕ್ಷಣಸಂಪನ್ನೋ ಯದ್ ದದ್ಯಾತ್ ಸುಪ್ರಸನ್ನಧೀಃ ।
ಶಿಷ್ಯಾಯ ಸತ್ಯಂ ಭವತಿ ತತ್ ಸರ್ವಂ ನಾತ್ರ ಸಂಶಯಃ ।
ಅಗಮ್ಯತ್ವಾತ್ ಹರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ ॥
ನಾತಿಪ್ರಸನ್ನಹೃದಯೋ ಯದ್ ದದ್ಯಾತ್ ಗುರುರಪ್ಯಸೌ ।
ನ ತತ್ ಸತ್ಯಂ ಭವೇತ್ ತಸ್ಮಾದರ್ಚನೀಯೋ ಗುರು: ಸದಾ ॥''
(ಮ.ಭಾ.ತಾ.ನಿರ್ಣಯ ಅ-1 ಶ್ಲೋ-123/124)

ಕೇವಲ ಲಕ್ಷ್ಮೀ, ಭಾರತೀ, ಸರಸ್ವತೀ ಮೊದಲಾದ (ಶಾಸ್ತ್ರೋಕ್ತ) ದೇವತಾಸ್ತ್ರೀಯರ ಆರಾಧನೆಯನ್ನು ಮಾಡಬೇಕು ಎನ್ನುವುದು ಎಷ್ಟು ಮುಖ್ಯವೋ, ಅವರನ್ನು ಆರಾಧಿಸುವಾಗ ಶ್ರೀಮದಾಚಾರ್ಯರು ತಿಳಿಸಿದ ಅನುಸಂಧಾನವೂ ಅಷ್ಟೇ ಮುಖ್ಯವಾದದ್ದು.[1]

ಲಕ್ಷ್ಮೀ ಮೊದಲಾದ ದೇವತೆಗಳ ಪೂಜೆ ಮಾಡುವಾಗ "ಇವರು ಭಾಗವತರಾಗಿದ್ದಾರೆ (ಭಗವಂತನ ಭಕ್ತರಾಗಿದ್ದಾರೆ), ಭಗವಂತನಿಗೆ ಅಧಿಷ್ಠಾನರಾಗಿದ್ದಾರೆ" ಎಂಬ ಅನುಸಂಧಾನವನ್ನು ತಪ್ಪದೇ ಮಾಡಬೇಕು.

### 16. ನಿಯತಗುರುಗಳು ನಮಗೆ ಯಾವಾಗ ಸಿಗುತ್ತಾರೆ? ಅವರಿಂದ ನಮ್ಮ ಉದ್ಧಾರ ಎಂದು?

ನಿಯತಗುರುಗಳು ಅಷ್ಟು ಸುಲಭವಾಗಿ ಸಿಗುವುದಿಲ್ಲ. ನಿಯತಗುರುಗಳು ಸಿಗಬೇಕಾದರೆ ನಮಗೆ ಎಷ್ಟೋ ಜನ್ಮಗಳ ಸಾಧನೆ ಆಗಬೇಕು. ಭಾರೀ-ಪುಣ್ಯದ ಪರಿಪಾಕ ಸಿಗಬೇಕು. ಆ ಎಷ್ಟೋ ಜನ್ಮಗಳ ಸಾಧನೆಯಿಂದ, ಪುಣ್ಯದ ಪರಿಪಾಕದಿಂದ, ಅಷ್ಟು ಕಾಲ ಶ್ರವಣ-ಮನನ-ನಿಧಿಧ್ಯಾಸನಗಳನ್ನು ಮಾಡಿದ್ದರಿಂದ ನಿಯತಗುರುಗಳು (ನಮ್ಮ ಸ್ವರೂಪಯೋಗ್ಯತೆಯನ್ನು ತಿಳಿದ ಗುರುಗಳು) ನಮಗೆ ಸಿಗುತ್ತಾರೆ. ಅವರು ನಮಗೆ ನಿಜವಾಗಿ ತತ್ವೋಪದೇಶ ಮಾಡಿ ಅಪರೋಕ್ಷಜ್ಞಾನವಾಗುವಂತೆ ಮಾಡುತ್ತಾರೆ. ನಮ್ಮನ್ನು ಉದ್ಧಾರ ಮಾಡುತ್ತಾರೆ ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ.[1]

---

15.1 "ಲಕ್ಷ್ಮ್ಯಾದೇಃ ಕ್ರಮಶಃ ಪೂಜಾಂ ಜ್ಞಾತ್ವಾ ಭಾಗವತಾ ಇತಿ ।"
(ಛಾಂದೋಗ್ಯಭಾಷ್ಯ)
"ಪೂಜಾ ಭಾಗವತತ್ವೇನ ದೇವಾದೀನಾಂ ಚ ಸರ್ವಶ: ।"
(ಮ.ಭಾ.ತಾ.ನಿರ್ಣಯ ಅ-29 ಶ್ಲೋ-19)

16.1 "ಶಿಷ್ಯಯೋಗ್ಯತಾಭಿಜ್ಞಗುರೂಪದೇಶಾನುಸಾರೇಣ ಶ್ರವಣಾದಿಕಂ ಕರ್ತವ್ಯಮಿತ್ಯ-ಯುಕ್ತಮ್ । ತಾದೃಶಸ್ಯ ಗುರೋರ್ದುರ್ಲಭತ್ವೇನ ಶ್ರವಣಾದ್ಯಭಾವಾಪತ್ತೇಃ । ಲಭ್ಯಮಾನೋಽ ಪ್ಯಸಾವನುಷ್ಠಿತಶ್ರವಣಾದಿನಾ ಆಧ್ಯಾತ್ಮಿಕಶಕ್ತಿಸಂಪನ್ನೇನೈವ ಶಿಷ್ಯೇಣ ಲಭ್ಯತೇ ನಾನ್ಯೇನ । ತಥಾ ಚಾನ್ಯೋನ್ಯಾಶ್ರಯ ಇತ್ಯತ ಆಹ ॥ಯದೀತಿ॥
ಅನು - 'ಯದಿ ತಾದೃಗ್ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಮ್ ।
ತತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ ಸಮಾಚರೇತ್ ॥'

ಆ ರೀತಿ ನಿಯತಗುರುಗಳು ಸಿಗುವವರೆಗೆ ಯೋಗ್ಯರಾದ, ಸತ್ಸಂಪ್ರದಾಯ-ದಲ್ಲಿ ಬಂದ, ಸದಾಚಾರನಿಷ್ಠರಾದ ಗುರುಗಳು ಸಿಕ್ಕರೆ ಸಾಕು. ಅವರ ಹತ್ತಿರ ಹೋಗಿ ವಿದ್ಯೆಯನ್ನು ಪಡೆದುಕೊಳ್ಳಬೇಕು.

**17. ಪತಿ-ಪತ್ನಿಯರಿಗೆ ಒಬ್ಬರೇ ಗುರುಗಳಿರಬೇಕೇ? ಬೇರೆ ಬೇರೆ ಗುರುಗಳಿದ್ದರೆ ಪಾತಿವ್ರತ್ಯಕ್ಕೆ ಹಾನಿಯಲ್ಲವೇ?**

ಇಬ್ಬರಿಗೂ ಬೇಕಾದ ಧರ್ಮಗಳನ್ನು, ತತ್ವಗಳನ್ನು ಉಪದೇಶಿಸುವ ಒಬ್ಬರೇ ಗುರುಗಳಿದ್ದರೆ ಉತ್ತಮ. ಅಂತಹ ಒಬ್ಬರೇ ಗುರುಗಳು ಸಿಗದಿದ್ದಲ್ಲಿ ತಪ್ಪೇನಿಲ್ಲ. ಕೇವಲ ಪತಿಗೆ ಬೇಕಾದ ಧರ್ಮಗಳನ್ನು-ಮಂತ್ರಗಳನ್ನು ಉಪದೇಶಿಸುವ ಗುರುಗಳು ಲಭ್ಯವಾಗಿದ್ದರೆ, ಪತಿಯು ತನಗೆ ಬೇಕಾದ ಧರ್ಮಗಳನ್ನು ಅವರಿಂದ ಉಪದೇಶಿಸಿಕೊಳ್ಳಬೇಕು. ಅಷ್ಟುಮಾತ್ರಕ್ಕೆ ಪತ್ನಿಯು ಧರ್ಮಗಳನ್ನು ತಿಳಿಯದೇ ಬಿಡಬಾರದು. ಅದಕ್ಕಾಗಿ (ಸ್ತ್ರೀಧರ್ಮಗಳನ್ನು ಹಾಡು-ಸುಳಾದಿಗಳನ್ನು ಉಪದೇಶಿಸುವ) ಯೋಗ್ಯಗುರುಗಳನ್ನು ಕಂಡು, ಪತ್ನಿಯು ಅವರಿಂದ ತನಗೆ ಬೇಕಾದ ಧರ್ಮಗಳನ್ನು ಉಪದೇಶಿಸಿಕೊಳ್ಳಬೇಕು.

**18. ರಾಘವೇಂದ್ರಸ್ವಾಮಿಗಳ ಮಂತ್ರವನ್ನು ಪಠಿಸುವಾಗ ಹಿಂದೆ-ಮುಂದೆ ಓಂಕಾರವನ್ನು ಹೇಳಬಹುದೇ?**

ರಾಘವೇಂದ್ರಸ್ವಾಮಿಗಳೇ ಓಂಕಾರಪ್ರತಿಪಾದ್ಯರಾಗಿದ್ದಾರೆ ಎಂದು ತಿಳಿದು ಓಂಕಾರವನ್ನು ಪಠಿಸಬಾರದು. ಕಿಂತು ''ರಾಘವೇಂದ್ರಸ್ವಾಮಿಗಳಲ್ಲಿ

---

ದ್ವಿವಿಧಂ ಶಾಸ್ತ್ರಂ ನಿರ್ಣೀತಂ ನಿರ್ಣೇತವ್ಯಂ ಚ । ತತ್ರಾದ್ಯಂ ಬ್ರಹ್ಮಸೂತ್ರಾದಿಕಮ್ ದ್ವಿತೀಯಂ ವೇದಾದಿಕಮ್ । ತತ್ರ ನಿರ್ಣೀತಸ್ಯ ಶ್ರವಣಾದಿಕಂ ಸಮಾಚರೇತ್ । ಸರ್ವಜ್ಞಾನಾಂ ಸಿದ್ಧಾಂತಾನುಸಾರೇಣ ಯೋ ನಿರ್ಣಯಂ ಜಾನಾತಿ ತಸ್ಮಾತ್ । ಇದಮುಕ್ತಂ ಭವತಿ । ಮುಖ್ಯಸ್ಯ ಗುರೋಃ ಪ್ರಥಮಮಲಾಭೇಽಪಿ ನ ಶ್ರವಣಾದ್ಯ-ಭಾವಾಪತ್ತಿಃ । ಅಮುಖ್ಯಾದಪಿ ಗೋರೋಸ್ತದುಪಪತ್ತೇಃ । ತತ್ರ ಮುಖ್ಯವದಮುಖ್ಯ-ಸ್ಯಾತಿಗಹನವೇದಾದಿವ್ಯಾಖ್ಯಾನಸಾಮರ್ಥ್ಯಾಭಾವೇಽಪಿ ನಿರ್ಣೀತವ್ಯಾಖ್ಯಾನಮುಪ-ಪದ್ಯತ ಏವ । ನ ಚ ನಿರ್ಣೀತಶಾಸ್ತ್ರಸ್ಯಾಪಿ ವ್ಯಾಖ್ಯಾನವಿಪ್ರತಿಪತ್ತ್ಯಾ ಽ ಭಿಪ್ರಾಯೋ ದುರಧಿಗಮ ಇತಿ ವಾಚ್ಯಮ್ । ಸರ್ವಜ್ಞಪ್ರಣೀತೋಪಾಯಗ್ರಂಥಾನುಸಾರೇಣಾ-ಮುಖ್ಯಸ್ಯಾಪಿ ಗುರೋಸ್ತದವಗಮಸಂಭವಾತ್ । ಏವಂ ಚಾಮುಖ್ಯೇ ಶ್ರವಣಾದಾ-ವನುಷ್ಠಿತೇ ಮುಖ್ಯೋಽಪಿ ಗುರುರ್ಲಭ್ಯತ ಇತಿ ॥''

(ನ್ಯಾಯಸುಧಾ ಅ-3 ಪಾ-3 ಅಧಿ-1 ಸೂ-3)

ಅಂತರ್ಯಾಮಿಯಾದ ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ರಾಮಚಂದ್ರನು ಓಂಕಾರಪ್ರತಿಪಾದ್ಯನಾಗಿದ್ದಾನೆ'' ಎಂಬ ಅನುಸಂಧಾನ-ದಿಂದ ಮಂತ್ರದ ಆದಿಯಲ್ಲಿ ಹಾಗೂ ಅಂತ್ಯದಲ್ಲಿ ಓಂಕಾರವನ್ನು ಪಠಿಸಬಹುದು.

ಯಾಕೆಂದರೆ :- ಸ್ವತಃ ವಿಜಯೀಂದ್ರಸ್ವಾಮಿಗಳೇ ವ್ಯಾಸರಾಜರ ಮೇಲೆ ಒಂದು ಸ್ತೋತ್ರವನ್ನು ರಚಿಸಿದ್ದಾರೆ. ಆ ವ್ಯಾಸರಾಜರ ಸ್ತೋತ್ರದಲ್ಲಿ ವ್ಯಾಸರಾಜರ ಮಂತ್ರವನ್ನು ಜಪಿಸುವ ವಿಧಾನವನ್ನು ಹೇಳಿದ್ದಾರೆ.[1] ಅದರಲ್ಲಿ **'ತಾರಪೂರ್ವಂ** ಬಿಂದುಯುಕ್ತಂ' ಎಂಬುದಾಗಿ ಓಂಕಾರಸಹಿತವಾಗಿಯೇ ವ್ಯಾಸರಾಜರ ಮಂತ್ರವನ್ನು ಜಪಿಸಬೇಕು ಎಂದು ಹೇಳಿದ್ದಾರೆ. ಅಂದಮೇಲೆ ಅಲ್ಲಿ ವ್ಯಾಸರಾಜರಿಗೆ ಹೇಳಿದ್ದು ರಾಘವೇಂದ್ರಸ್ವಾಮಿಗಳಿಗೂ ಅನ್ವಯಿಸುತ್ತದೆ. ಅಷ್ಟೇ ಅಲ್ಲದೆ ಓಂಕಾರಪ್ರತಿಪಾದ್ಯರಾಗದ ಗರುಡ-ಶೇಷಾದಿಗಳ, ಇಂದ್ರಾದಿಗಳ, ಅಷ್ಟದಿಕ್ಪಾಲಕರ ಮಂತ್ರಗಳನ್ನು ಪಠಿಸುವಾಗ ಓಂಕಾರಸಹಿತವಾಗಿಯೇ ಜಪಿಸುವ ಪದ್ಧತಿ ಬಂದಿದೆ.[2]

ಅಲ್ಲಿ ಯಾವ ರೀತಿಯಾಗಿ ಆ ದೇವತೆಗಳು ಓಂಕಾರಪ್ರತಿಪಾದ್ಯರಾಗ-ದಿದ್ದರೂ ಸಹ ಅಂತರ್ಯಾಮಿಯಾದ ಭಗವಂತನಲ್ಲಿ ಓಂಕಾರಪ್ರತಿ-ಪಾದ್ಯವಾದ ಗುಣಗಳನ್ನು ಅನ್ವಯಮಾಡಿಕೊಂಡು, ಗರುಡ-ಶೇಷಾದಿಗಳ ಮಂತ್ರಗಳನ್ನು ಪಠಿಸುತ್ತಾರೆಯೋ ಅದೇ ರೀತಿಯಾಗಿ ಇಲ್ಲಿಯೂ ಸಹ ರಾಘವೇಂದ್ರಸ್ವಾಮಿಗಳು ಓಂಕಾರಪ್ರತಿಪಾದ್ಯರಾಗದಿದ್ದರೂ ಸಹ ಅಂತರ್ಯಾಮಿಯಾದ ಭಗವಂತನು ಓಂಕಾರಪ್ರತಿಪಾದ್ಯನಾಗಿದ್ದಾನೆ ಎಂದು ತಿಳಿದು ರಾಘವೇಂದ್ರಸ್ವಾಮಿಗಳ ಮಂತ್ರವನ್ನು ಓಂಕಾರಸಹಿತವಾಗಿ

---

**18.1** **'ತಾರಪೂರ್ವಂ** ಬಿಂದುಯುಕ್ತಂ ಪ್ರಥಮಾಕ್ಷರಪೂರ್ವಕಮ್ ।
ಚತುರ್ಥ್ಯಂತಂ ಚ ತನ್ನಾಮ ನಮಃಶಬ್ದಾದ್ವಿಭೂಷಿತಮ್ ॥'
(ವಿಜಯೀಂದ್ರವಿರಚಿತ ವ್ಯಾಸರಾಜಸ್ತೋತ್ರ ಶ್ಲೋ-15)
''ಓಂ ವ್ಯಾಂ ವ್ಯಾಸರಾಜಾಯ ನಮಃ'' (ವ್ಯಾಸರಾಜಮಂತ್ರಜಪಕ್ರಮ)

**18.2** 'ವ್ಯತ್ಯಸ್ತಪಕ್ಷಿತಾರೌ ಚ ಸ್ವಾಹಾಂತೋ ಗರುಡೋ ಮನುಃ । '
(ತಂತ್ರಸಾರಸಂಗ್ರಹ ಶ್ಲೋ-89)
''ಏವಂಕ್ರಮೇಣೋಚ್ಚಾರಣೇ 'ಓಂ ಪಕ್ಷಿ ಸ್ವಾಹಾ' ಇತಿ ಗರುಡಮಂತ್ರೋ ನಿಷ್ಪದ್ಯತೇ ।''
(ಶ್ರೀರಘುನಾಥಯತಿವಿರಚಿತಾ - ತತ್ವಕಣಿಕಾ ವ್ಯಾಖ್ಯಾ)

ಬೌದ್ಧಾವತಾರದ ಉದ್ದೇಶವನ್ನು ಶಾಸ್ತ್ರದಲ್ಲಿ ಅರ್ಥಾತ್ ಪದ್ಮಪುರಾಣ ಮೊದಲಾದ ಅನೇಕಪುರಾಣಗಳಲ್ಲಿ ತಿಳಿಸಿದ್ದಾರೆ. ಶ್ರೀಮದಾಚಾರ್ಯರೂ ಹೇಳಿದ್ದಾರೆ. ಸ್ವಭಾವತಃ ದುಷ್ಟರಾದ ಅನೇಕಜನರು ತತ್ವಜ್ಞಾನವನ್ನು ಪಡೆಯಬೇಕು ಎಂದು ಪ್ರಯತ್ನ ಮಾಡುತ್ತಿರುವಾಗ, ಅವರ ಯೋಗ್ಯತೆಗೆ ಅನುಗುಣವಾಗಿ ಅವರಿಗೆ ಗತಿಯನ್ನು ಕೊಡಬೇಕು ಎಂಬ ಉದ್ದೇಶದಿಂದ ಪರಮಾತ್ಮನು ಬುದ್ಧಾವತಾರ ತಾಳಿದ. ಶಾಸ್ತ್ರದ ನಿಜವಾದ ತಥ್ಯವನ್ನು-ಮರ್ಮವನ್ನು ಮುಚ್ಚಿಟ್ಟು ಅವರನ್ನು ಮೋಹನಗೊಳಿಸಿ ಬುದ್ಧರೂಪದಿಂದ ಅವರಿಗೆ ಉಪದೇಶ ಮಾಡಿದ ಎಂಬ ಮಾತನ್ನು ಆಚಾರ್ಯರು ಹೇಳಿದ್ದಾರೆ. ಸಾಕ್ಷಾತ್ ವೇದವ್ಯಾಸದೇವರೂ ಪದ್ಮಪುರಾಣದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.[2]

ಆದ್ದರಿಂದ ದುಷ್ಟರನ್ನು ಮೋಹಗೊಳಿಸಿ ಅವರಿಗೆ ಯೋಗ್ಯಗತಿಯನ್ನು ಕೊಡುವುದೇ ಬೌದ್ಧಾವತಾರದ ಉದ್ದೇಶ. ಇದೇ ಬೌದ್ಧಾವತಾರದಲ್ಲಿಯೇ ಪರಮಾತ್ಮನು ದೇವತೆಗಳಿಗೆ ಮೋಕ್ಷಸಾಧನವಾದ ''ಪ್ರಶಾಂತ'' ಎಂಬ ಹೆಸರಿನ ವಿದ್ಯೆಯನ್ನು ಉಪದೇಶ ಮಾಡಿದ್ದಾನೆ ಎಂಬ ಮಾತನ್ನೂ ಶ್ರೀಮದಾಚಾರ್ಯರು ತಾ.ನಿರ್ಣಯದಲ್ಲಿ ಹೇಳಿದ್ದಾರೆ.[3]

---

19.2 ''ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾ ಬುದ್ಧರೂಪಿಣಾ ।
ಬೌದ್ಧಶಾಸ್ತ್ರಮಸತ್ ಪ್ರೋಕ್ತಂ ನಗ್ನನೀಲಪಟಾದಿಕಮ್ ॥''
(ಪದ್ಮಪುರಾಣ ಉತ್ತರಖಂಡ ಅ-236 ಶ್ಲೋ-6)

19.3 ''ಸಂವತ್ಸರಾಣಾಂ ತು ಸಹಸ್ರಕೇ ಗತೇ ಪ್ರಾಪ್ತೇಷು ಚ ದ್ವಾಮಖಿಲೇಷು ಸತ್ಸು ।
ದಗ್ಧಾಃ ಪುರಾ ಯೇ ತ್ರಿಪುರಂ ಘ್ನತೈವ ರುದ್ರೇಣ ಜಾತಾಃ ಪೃಥಿವೀತಲೇ ತೇ ॥
ಅದರ್ಶನಂ ಸರ್ವಮುನೀಂದ್ರವೃಂದ್ಯೈಃ ಸತ್ಯೈವ ಸಜ್ಞಾನಮಹಾನಿದಾನೇ ।
ವ್ಯಾಸೇ ಪ್ರಯಾತೇಽಪಿ ಸುತತ್ತ್ವವಿದ್ಯಾ ತತ್ಸಂಪ್ರದಾಯಾದಪಿ ತೈರವಾಪ್ತಾ ॥
ಉತ್ಪಾದಿತತ್ವಾತ್ತು ದುರಾಗಮಾನಾಂ ತತ್ಸಂಪ್ರದಾಯಸ್ಯ ಚ ನಾಶಿತತ್ವಾತ್ ।
ಪ್ರಚಾರಿತತ್ವಾಚ್ಚ ಸದಾಗಮಾನಾಂ ಪಾಪಾ ಅಪಿ ಜ್ಞಾನಮವಾಪುರೇತತ್ ॥
ಶುನಾ ಪುರೋಡಾಶಮಿವಾವಲೀಢಂ ವೇದಶ್ರುತಿಂ ವಾಽಂತ್ಯಜನೈರವಾಪ್ತಾಮ್ ।
ಅನಂತದುಃಖಾಪ್ತಿಸುಯೋಗ್ಯದೈತ್ಯೈರ್ವಿದ್ಯಾಮವಾಪ್ತಾಂ ತು ನ ಸೇಹಿರೇ ಸುರಾಃ ॥
ನಾಪಾಗ್ಗತಿಃ ಕ್ವಾಪಿ ಸುವೇದಿನಾಂ ಭವೇತ್ಪ್ರಾಪ್ಯಂ ಸುಖಂ ನಿತ್ಯಮವಶ್ಯಮೇಭಿಃ ।
ಪ್ರಾಪ್ಯಂ ತಮೋಽಂಧಂ ತ್ವಸುರೈರ್ನ ಮುಕ್ತಿಃ ಕದಾಚಿದಾಪ್ಯಾ ತದಚಿಂತಯನ್ಸುರಾಃ ॥
ಜ್ಞಾನಪ್ರದಾನಾಯ ಸತಾಂ ತದನ್ಯಜ್ಞಾನಪ್ರಣಾಶಾಯ ಚ ವಿಷ್ಣುನೈತೇ ।

ಕ್ಲೃಪ್ತಾಸ್ತತಸ್ತೇ ಸವಿರಿಂಚಶರ್ವಾ ವಿಜ್ಞಾಪಯಾಮಾಸುರುಪೇತ್ಯ ವಿಷ್ಣುಮ್ ॥
ಕ್ಷೀರೋದಧೇರುತ್ತರತೀರವಿಷ್ಠಿತೈರಭಿಷ್ಟುತಃ ಸುಷ್ಟುತಿಭಿಃ ಪುರುಷ್ಟುತಃ ।
ಪ್ರದಾಯ ತೇಷಾಮಭಯಂ ರಮಾಪತಿಃ ಕ್ಷಣಾದಭೂಚ್ಚಾರುತಮಾಕೃತಿಶ್ಶಿಶುಃ ॥
ಯಸ್ತ್ರೈಪುರಾಣಾಂ ಪ್ರಥಮೋಽತ್ರ ಜಾತಶ್ಶುದ್ಧೋದನೇತ್ಯೇವ ಜಿನೇತಿ ಚೋಕ್ತಃ ।
ಕ್ಷೇತ್ರೇ ಗಯಾಖ್ಯೇಽಸ್ಯ ಶಿಶುಂ ಪ್ರಜಾತಂ ಸಂಪ್ರಾಸ್ಯ ದೂರೇಽತ್ರ ಬಭೂವ ವಿಷ್ಣುಃ ॥
ಅಜಾನಮಾನಾ ಸ್ವಶಿಶುಂ ಗತಂ ತಂ ಶಿಶುಂ ಹರಿಂ ವೀಕ್ಷ್ಯ ನಿಜಂ ಸ್ಮ ಮೇನಿರೇ ।
ತೇಷಾಂ ತದಾ ವೈದಿಕಕರ್ಮ ವೀಕ್ಷ್ಯ ಸಮ್ಮಾಹಸತ್ತದ್ವಪುಷೈವ ಕೇಶವಃ ॥
ತಂ ಜಾತಮಾತ್ರಂ ಪ್ರಹಸಂತಮೀಕ್ಷ್ಯ ಸುವಿಸ್ಮಿತೈಃ ಪೃಷ್ಟ ಉವಾಚ ವಿಷ್ಣುಃ ।
ಬುದ್ಧೋಽಹಮಿತ್ಯೇವ ಸ ನಿತ್ಯಬೋಧಾಜ್ಜಗಾದ ಚೈಷಾಮಥ ಬುದ್ಧದರ್ಶನಮ್ ॥
ತಥಾಽಪ್ಯವಿಶ್ವಾಸಮವೇಕ್ಷ್ಯ ತೇಷಾಂ ಸಸ್ಮಾರ ದೇವಾನಖಿಲಾನ್ ಜನಾರ್ದನಃ ।
ವಿಜ್ಞಾಯ ತೇ ತಸ್ಯ ಮನೋಗತಂ ನಿಜಾನ್ ಪ್ರಚಿಕ್ಷುಪುರ್ಹೇತಿಗಣಾನಮುಷ್ಮಿನ್ ॥
ಸ ಜಾತಮಾತ್ರಃ ಶಿವಪೂರ್ವಕಾಣಾಂ ಶೂಲಾದಿಹೇತೀರಖಿಲಾ ನಿಗೀರ್ಯ ।
ದೈತ್ಯಾತಿಮೋಹಾಯ ನಿಜಂ ಚ ಚಕ್ರಂ ಸ್ವಮುಕ್ತಮಾಶ್ವೇವ ವಶೀ ಸಮಗ್ರಹೀತ್ ॥
ತದಾಸನತ್ವೇನ ವಿಧಾಯ ತಸ್ಮಿನ್ ಸಮಾಸ್ಥಿತಂ ದೇವಗಣಾಃ ಪ್ರಣೇಮುಃ ।
ಜಗ್ಮುಃ ಸ್ವಧಾಮಾನಿ ವಚಾಂಸಿ ಚಾಸ್ಯ ಸ್ವೀಚಕ್ರುರಾಶ್ವೇವ ಜಿನಾದಿದೈತ್ಯಾಃ ॥
ತೇ ಜ್ಞಾನಧರ್ಮಾವಪಹಾಯ ಪಾಪಾ ವಿಮೋಹಿತಾ ದೇವವರೇಣ ಸರ್ವೇ ।
ಜಗ್ಮುಸ್ತಮೋಽಂಧಂ ಕ್ಷಣಿಕಂ ಸಮಸ್ತಂ ಜ್ಞಾನಂ ನ ಸಚ್ಚೇತಿ ದೃಢಂ ಸ್ಮರಂತಃ ॥
ನಾರಾಯಣೋಽಪ್ರಾಪ್ಯ ಸುರೇಂದ್ರವೃಂದಂ ವೃತ್ತಂ ಚ ತೇಷಾಮಖಿಲಂ ನಿಗದ್ಯ ।
ಪೃಷ್ಟಶ್ಚ ತೈರಾಹ ನಿಜಂ ಹೃದಿಸ್ಥಂ ಬೌದ್ಧಾಗಮಾರ್ಥಂ ಸ್ವತಿಬಂಧಮೋಚನಮ್
ಕ್ಷಣಾದಯಃ ಕ್ಷಣಿಕಾಸ್ತದ್ವಿಶೇಷಾ ಯತಃ ಪ್ರಯಾಂತ್ಯೇವ ನಿಸರ್ಗತೋಽಖಿಲಾಃ ।
ತತಃ ಸ್ಥಿರತ್ವೇಽಪಿ ವಿಶೇಷಸಂಶ್ರಯಾದುಕ್ತಂ ಕ್ಷಣಸ್ಥಾಯಿ ಮಯಾ ಸಮಸ್ತಮ್ ॥
ತದ್ವಾನ್ವಿಶೇಷಶ್ಚ ಯತೋ ನ ಭಿನ್ನೌ ಸದಾ ಸ್ವನಿರ್ವಾಹಕಶಕ್ತಿಯುಕ್ತೌ ।
ಅತಃ ಕ್ಷಣಸ್ಥಾಯಿ ಸಮಸ್ತಮೇತತ್ ಸ್ಥಿರಾತ್ಮಕಂ ಚೇತಿ ಹಿ ನಾಸ್ತಿ ಭೇದಃ ॥
ಜ್ಞೋಽಹಂ ಸದೈಕಃ ಪರಮೋ ಮಯ್ಯೈತತ್ಸದಾಽಸನೀಯಂ ಹಿ ಯತೋಽಸ್ವತಂತ್ರಮ್ ।
ಜ್ಞಾನಾತ್ಮಕಂ ವಿಶ್ವಮತೋ ಮಯೋಕ್ತಂ ಜಡಸ್ವರೂಪಂ ಚ ಕಿಮು ಸ್ಮ ಚೇತನಮ್ ॥
ಶಂಶೀಲಕೋಽಹಂ ಯತ ಏವ ಚೋಚ್ಚಃ ಶುನಾಮಕಸ್ತದ್ಧಿ ಮಯಾ ನಿಧೇಯಮ್ ।
ಶೂನ್ಯಾಭಿಧಂ ದೋಷವಿರುದ್ಧರೂಪೋ ದೋಷೋಜ್ಝಿತೋಽಸ್ಯಸ್ತ್ವಖಿಲಾದನಾಮಾ ॥
ಏನ್ನೈವ ಸಾಧ್ಯಂ ತ್ವಸದೇವನಾಮತಸ್ತ್ವಭಾವ ಏನ್ನೈವ ಭವೇದ್ಯತಸ್ತತ್ ।
ಇತ್ಯಾದಿ ಬೋದ್ಧವ್ಯಮಿದಂ ಸಮಸ್ತಂ ಮಯೋದಿತಂ ಕ್ವಾಪಿ ನ ಹೇಯಮಸ್ತಿ ॥
ಇತ್ಯಾದಿ ದೇವಾನ್ಪ್ರತಿಬೋಧಯಂಶ್ಚ ದೇವೈಸ್ಸಹೋವಾಸ ಸ ಬುದ್ಧದೇವಃ ।
ಗತ್ವಾ ಸ್ವಧಾಮಾಪ್ಯಪರೇಣ ರೂಪೇಣಾಸ್ತೇ ಪೃಥಕ್ ಚೈಕತನುರ್ಯಥೇಷ್ಟಮ್ ॥
ತತಸ್ತು ಬುದ್ಧೋದಿತಪಕ್ಷಸಂಸ್ಥೋ ಜಿನೋಽಪಿ ಚಕ್ರೇ ಮತಮನ್ಯದೇವ ।
ಬೌದ್ಧೇನ ಜೈನೇನ ಮತೇನ ಚೈವ ದೈತ್ಯಾಂಶಕಾಃ ಪ್ರೀತಿಮಗುಸ್ಸಮಸ್ತಾಃ ॥
ಪ್ರಶಾಂತವಿದ್ಯೇತ್ಯಭಿಧಂ ತಥಾಽನ್ಯದ್ ಬುದ್ಧೋಕ್ತಶಾಸ್ತ್ರಂ ತ್ರಿದಶಾ ಅವಾಪ್ಯ ।
ತೋಷಂ ಯಯುರ್ವೇದಸಮಸ್ತಸಾರಂ ಯಾಮಾಶ್ರಿತಾನಾಮಚಿರೇಣ ಮುಕ್ತಿಃ ॥"

(ಮ.ಭಾ.ತಾ.ನಿರ್ಣಯ ಅ-32 ಶ್ಲೋ-136 ರಿಂದ 158)

## 20. ಭೂತ-ಪಿಶಾಚಗಳನ್ನು ನಂಬಬಹುದೇ? ಮಾಯ-ಮಾಟ ಇವುಗಳನ್ನೂ ನಂಬಬಹುದೇ?

ಭೂತ-ಪಿಶಾಚ ಇವುಗಳ ಹೆಸರಿನಲ್ಲಿ ದುಡ್ಡು ಮಾಡಿಕೊಳ್ಳುವುದಕ್ಕೆ ಏನೇನೋ ಆಟಗಳನ್ನು ತೋರಿಸುತ್ತಿದ್ದರೆ ಅವುಗಳನ್ನು ನಂಬಬೇಕು ಎಂದು ಹೇಳುವುದಿಲ್ಲ. ಕಿಂತು ವಸ್ತುಸ್ಥಿತಿಯಲ್ಲಿ ಭೂತ-ಪಿಶಾಚಗಳು ಶಾಸ್ತ್ರದ ದೃಷ್ಟಿಯಲ್ಲಿ ಇವೆಯೋ? ಇಲ್ಲವೋ? ಎಂದು ಕೇಳಿದರೆ ಶಾಸ್ತ್ರವು ಅವಶ್ಯವಾಗಿ ಅವುಗಳನ್ನು ಪ್ರತಿಪಾದನೆ ಮಾಡಿದೆ. ಅನೇಕ ಪುರಾಣಗಳಲ್ಲಿ, 'ದೇವಾದಿವದಪಿ ಲೋಕೇ' ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ''ಭೂತ-ಪಿಶಾಚಗಳು ಇವೆ. ಅವುಗಳಿಗೆ ಅತೀಂದ್ರಿಯವಾದ ಅದ್ಭುತವಾದ ಶಕ್ತಿಯಿದೆ. ಸಾಮಾನ್ಯವಾದ ಭೂತ-ಪಿಶಾಚಗಳಿಗೇ ಇಂತಹ ಶಕ್ತಿಯಿರುವಾಗ ಇನ್ನು ದೇವತೆಗಳಿಗೆ, ದೇವೋತ್ತಮನಾದ ಭಗವಂತನಿಗೆ ಎಂತಹ ಶಕ್ತಿಯಿರಬೇಕು?'' ಎಂಬುದಾಗಿ ಭೂತ-ಪಿಶಾಚಗಳ ದೃಷ್ಟಾಂತ ಕೊಡುತ್ತಾರೆ.[1] ಮತ್ತು ಭೂತ-ಪಿಶಾಚಗಳ ವಿಷಯದಲ್ಲಿ ಅನೇಕವಿಧಜನರ ಅನುಭವಗಳೂ ಇವೆ. ಆದ್ದರಿಂದ ಆ ವಿಧವಾದ ಅದ್ಭುತಶಕ್ತಿ ಇದೆ.[2]

---

20.1 ಅ) ॥ ಓಂ **ದೇವಾದಿವದಪಿ ಲೋಕೇ** ॥ (ಬ್ರಹ್ಮಸೂತ್ರ)

''ನ ಚ ಕರ್ತುರೀಶ್ವರಸ್ಯಾದೃಷ್ಟಿವಿರೋಧಃ । ದೇವಾದಿವತ್ ಅದೃಶ್ಯತ್ವಶಕ್ತಿಯೋಗಾತ್ । **ಲೋಕೇऽಪಿ ಪಿಶಾಚಾದೀನಾಂ ತಾದೃಶೀ ಶಕ್ತಿರ್ದೃಷ್ಟಾ** । ಕಿಮ್ವೀಶ್ವರಸ್ಯ ।''

(ಬ್ರಹ್ಮಸೂತ್ರಭಾಷ್ಯ ಅ-2, ಪಾ-1, ಅಧಿ-8, ಸೂ-26)

ಆ) ''ದುರ್ಘಟಾ ಶಕ್ತಿರಪಿ ಹಿ ಪಿಶಾಚಾನಾಂ ಹಿ ದೃಶ್ಯತೇ ।
ದೇವಾನಾಂ ಕಿಮು ಕಿಮ್ವೇವಂ ಪರಮಸ್ಯ ಹರೇಃ ಪ್ರಭೋಃ ॥
ಇತಿ ಬ್ರಹ್ಮತರ್ಕೋಕ್ತೇರಿತಿ ಭಾವಃ ॥'' (ಶೇಷವಾಕ್ಯಾರ್ಥಚಂದ್ರಿಕಾ-ಅಭಿಮಾನ್ಯಧಿಕರಣ)

ಇ) ''ವ್ಯಾಪಕಾನಾಂ ಸದೇಹಾನಾಮಪಿ **ಪಿಶಾಚಾದಿವತ್** ಅಂತರ್ಧಾನಶಕ್ತಿಯೋಗಾತ್ ಅದೃಶ್ಯತ್ವೋಪಪತ್ತೇಃ ॥ ಅನುಪಲಂಭಃ ಅನೇಕತ್ರ ಯುಗಪತ್ಸನ್ನಿಧಾನಂ ಚ ಶಕ್ತಿ-ವಿಶೇಷಾತ್ ಉಪಪದ್ಯತೇ **ಪಿಶಾಚಾದಿವತ್** ॥'' (ನ್ಯಾಯಸುಧಾ - ಅಭಿಮಾನ್ಯಧಿಕರಣ)

20.2 ''ನ ಚ ಪಿಶಾಚಾದಯೋऽಪಿ ನ ಸಂತಿ । ಮಂತ್ರೌಷಧಾದಿನಾ ಅಸ್ಮದಾದಿಭಿರಪಿ ಉಪಲಭ್ಯಮಾನತ್ವಾತ್ । ಅರ್ಥಕ್ರಿಯಯಾ ಸಂವಾದೇನ ಚ ಪ್ರಾಮಾಣ್ಯೋಪ-ಪತ್ತೇಃ । ವಕ್ಷ್ಯತಿ ಚ ಸೂತ್ರಕಾರೋ 'ದೇವಾದಿವದಿ' ತ್ಯುಕ್ತ್ವಾ ತತ್ರಾಪಿ ವಿಪ್ರತಿಪನ್ನಂ ಪ್ರತಿ 'ಅಪಿ ಲೋಕ' ಇತಿ ॥'' (ನ್ಯಾಯಸುಧಾ - ಅಭಿಮಾನ್ಯಧಿಕರಣ)

ಆದರೆ ಕೆಲವರು ಅವುಗಳ ಹೆಸರಿನಲ್ಲಿ ಸುಳ್ಳು ಕೆಲಸಗಳನ್ನು ಮಾಡುತ್ತಾರೆ. ಅವುಗಳನ್ನು ಸರಿಯಾಗಿ ವಿಚಾರ ಮಾಡಿ, ಪರೀಕ್ಷೆ ಮಾಡಿ ನಂಬಬೇಕು. ಮಾಯಾ-ಮಾಟಗಳಿಂದ ನಾನಾ ವಿಧವಾದ ದುಷ್ಪರಿಣಾಮಗಳಾಗುವ ಸಾಧ್ಯತೆಯಿದೆ. ಆ ರೀತಿ ಆಗಿದ್ದರೆ ಅದಕ್ಕೆ ಪ್ರತಿಯಾಗಿ ಮಂತ್ರಗಳನ್ನು, ಯೋಗ್ಯ ದೇವತೋಪಾಸನೆಯನ್ನು ಮಾಡಿ ಪರಿಹಾರ ಮಾಡಿಕೊಂಡರೆ ತಪ್ಪೇನಿಲ್ಲ.

**21. ಭಗವಂತನು ಸರ್ವಶಬ್ದವಾಚ್ಯನಾಗಿದ್ದಾನೆ ಎನ್ನುವುದಾದರೆ, 'ದುಃಖೀ' 'ಬದ್ಧ' ಮೊದಲಾದ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆಯೇ ?**

ಈ ವಿಷಯವನ್ನು ಶ್ರೀಮದಾಚಾರ್ಯರು ತಮ್ಮ ಮಾಂಡೂಕಭಾಷ್ಯದಲ್ಲಿ ಹಾಗೂ ಅನುವ್ಯಾಖ್ಯಾನದಲ್ಲಿ ವಿವರವಾಗಿ ತಿಳಿಸಿದ್ದಾರೆ.[1]

ಭಗವಂತನು ಸರ್ವಶಬ್ದವಾಚ್ಯನೆಂದಮೇಲೆ 'ದುಃಖೀ' 'ಬದ್ಧ' ಮೊದಲಾದ ಶಬ್ದಗಳಿಂದಲೂ ವಾಚ್ಯನೇ ಆಗಿದ್ದಾನೆ.

ಹಾಗಾದರೆ ಪರಮಾತ್ಮನೂ ನಮ್ಮಂತೆ ದುಃಖವುಳ್ಳವನಾಗಿದ್ದಾನೆಯೇ? ಬಂಧವುಳ್ಳವನಾಗಿದ್ದಾನೆಯೇ? ಎಂಬ ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರ ಹಾಗೂ ವ್ಯಾಖ್ಯಾನಕಾರರ ಮಾತುಗಳನ್ನು ನೋಡಿದಾಗ ಉತ್ತರ ಸಿಗುತ್ತದೆ. ಒಬ್ಬ ವ್ಯಕ್ತಿಯಲ್ಲಿ ಬುದ್ಧಿಯಿದೆ ಎಂದರೆ ಅವನು ಬುದ್ಧಿಗೆ ಆಶ್ರಯ ಎಂದರ್ಥ. ಹಾಗೆ ದುಃಖೀ ಎಂದರೆ ದುಃಖವುಳ್ಳವನು ಎಂದರ್ಥ. ಜೀವನಲ್ಲಿ ಆಧಾರ-ಆಧೇಯಭಾವ ಸಂಬಂಧದಿಂದ ದುಃಖವಿದೆ (ದುಃಖಾನುಭವವುಳ್ಳವನಾಗಿದ್ದಾನೆ ಜೀವ). ಆದ್ದರಿಂದ ಜೀವವನ್ನು ದುಃಖೀ ಎನ್ನುವುದು. ಆದರೆ ಭಗವಂತನಲ್ಲಿ ಹಾಗಲ್ಲ. ಒಬ್ಬ ವ್ಯಕ್ತಿಯಲ್ಲಿ ಹಣವಿದೆ ಎಂದರೆ ಅವನ ದೇಹದಲ್ಲಿ ಹಣವಿದೆ ಅಥವಾ ಅವನ

---

21.1 ''ದುಃಖಿಬದ್ಧಾವರಾದ್ಯಾಸ್ತು ತದಧೀನತ್ವಹೇತುತಃ । ಶಬ್ದಾ ಬ್ರಹ್ಮಣಿ ವರ್ತಂತೇ ...''
(ಅನುವ್ಯಾಖ್ಯಾನ)

''ಕಾರ್ಯಕಾರಣಬಂಧಸ್ಯ ತದಧೀನತ್ವತೋ ವಿಭುಃ । ವಿಶ್ವಾದಿರೂಪೋ ಭಗವಾನ್ ಬದ್ಧ ಇತ್ಯುಚ್ಯತೇ ಶ್ರುತೌ । ಕುತೋ ಬಂಧಃ ಪರಸ್ಯಾಸ್ಯ ಬಂಧೇಶಸ್ಯ ಚಿದಾತ್ಮನಃ ॥ ॥ಇತಿ ಚ॥ 'ಸ ಬದ್ಧಃ ಸ ದುಃಖೀ ಬಂಧಯತಿ ಸ ದುಃಖಯತೀತಿ । ಸ ಜೀವಃ ...' ಇತಿ ಕೌಷಾರವಶ್ರುತಿಃ ॥'' (ಮಾಂಡೂಕಭಾಷ್ಯ)

''ಬಂಧಸಂಬಂಧೀ ಬದ್ಧ ಇತ್ಯುಚ್ಯತೇ । ಸಂಬಂಧಶ್ಚ ಆಧಾರ-ಆಧೇಯಭಾವೋ ಜೀವೇ । ಘರೌ ಸ್ವಸ್ವಾಮಿಭಾವಃ । ಅತಃ ಶಬ್ದಶಕ್ತ್ಯೈವ ಅಯಮರ್ಥಃ ಸಿದ್ಧ ಇತಿ ಜ್ಞೇಯಮ್ ॥'' (ವಾದಿರಾಜಯತಿವಿರಚಿತಾ - ಪ್ರಕಾಶಿಕಾ ವ್ಯಾಖ್ಯಾ)

ಕೈಯಲ್ಲಿಯೇ ಹಣವಿದೆ ಎಂದಲ್ಲ. ಕಿಂತು ಅವನ ಮನೆಯಲ್ಲಿ ಅಥವಾ ಅವನ Bank Accountನಲ್ಲಿ ಹಣವಿದ್ದರೂ ಆ ಹಣಕ್ಕೆ ಅವನು ನಿಯಾಮಕ (ಸ್ವಾಮೀ) ಎಂದರ್ಥ. ಹಾಗೆ ಭಗವಂತನಲ್ಲಿ ದುಃಖವಿಲ್ಲ-ದಿದ್ದರೂ ನಮ್ಮ ಪೂರ್ವಕರ್ಮಗಳಿಗೆ ಅನುಸಾರವಾಗಿ ನಮಗೆ ದುಃಖವನ್ನು ಕೊಡುತ್ತಾನೆ. ಅರ್ಥಾತ್ ದುಃಖವನ್ನು ನಿಯಮನ ಮಾಡುತ್ತಾನೆ. ಹೀಗೆ ನಿಯಮ್ಯ-ನಿಯಾಮಕಭಾವ ಸಂಬಂಧದಿಂದ ದುಃಖವುಳ್ಳವನಾದ್ದರಿಂದ (ದುಃಖಕ್ಕೆ ನಿಯಮಾಕನಾದ್ದರಿಂದ) ಪರಮಾತ್ಮನಿಗೆ ದುಃಖೀ ಎಂದು ಕರೆಯುವುದು.

ಅದರಂತೆಯೇ ಜೀವನು ಆಧಾರ-ಆಧೇಯಭಾವ ಸಂಬಂಧದಿಂದ ಬಂಧವುಳ್ಳವನಾದ್ದರಿಂದ (ಬಂಧಕ್ಕೆ ಒಳಪಟ್ಟವನಾದ್ದರಿಂದ) ಬದ್ಧ ಎಂದು ಕರೆಸಿಕೊಂಡರೆ, ನಮ್ಮ ಕರ್ಮಾನುಸಾರವಾಗಿ ನಮಗೆ ಬಂಧವನ್ನು ಕೊಡುವವನಾದ್ದರಿಂದ (ಬಂಧ ನಿಯಾಮಕನಾದ್ದರಿಂದ) ಪರಮಾತ್ಮನೂ ಬದ್ಧ ಎಂದು ಕರೆಸಿಕೊಳ್ಳುತ್ತಾನೆ. ಹೊರತು ಜೀವನಿಗೆ ದುಃಖ-ಬಂಧಗಳು ಇರುವಂತೆ ಭಗವಂತನಿಗೂ ಇವೆ ಎಂಬ ಅರ್ಥದಲ್ಲಿ ಅಲ್ಲ.

**22. ಯೋಗಾರೂಢ ಎಂಬ ಶಬ್ದಕ್ಕೆ ಏನರ್ಥ?**

ಯೋಗಾರೂಢ ಎಂದರೆ ಅಪರೋಕ್ಷಜ್ಞಾನಿ ಎಂದರ್ಥ.[1]

''ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ'' (ಗೀತಾ 6-3) ಎಲ್ಲಿಯವರೆಗೆ ಅಪರೋಕ್ಷಜ್ಞಾನವಾಗುವುದಿಲ್ಲ ಅಲ್ಲಿಯವರೆಗೆ ನಾನಾವಿಧ ಶುಶ್ರೂಷೆಗಳನ್ನು, ಅಂತರ್ಯಾಮಿ ಭಗವಂತನ ಪೂಜೆಯನ್ನು ಮಾಡುತ್ತಿರಬೇಕು. ಬಡವರ ಸೇವೆ, ಅಧಮರ ಸೇವೆ, ಮಧ್ಯಮರ ಸೇವೆ, ಉತ್ತಮರ ಸೇವೆ ಹೀಗೆ ನಾನಾಪ್ರತೀಕಗಳಲ್ಲಿ ಭಗವಂತನ ಸೇವೆಯನ್ನು ಮಾಡುತ್ತಾ ಪರೋಪಕಾರ ಮಾಡುತ್ತಿರಬೇಕು. ಅಪರೋಕ್ಷಜ್ಞಾನಕ್ಕಾಗಿ ಪ್ರಯತ್ನಿಸುತ್ತಿರಬೇಕು.

ಯಾವಾಗ ಯೋಗಾರೂಢನಾಗುತ್ತಾನೆ, (ಅಪರೋಕ್ಷಜ್ಞಾನಿಯಾಗುತ್ತಾನೆ) ಆಗ ತನ್ನಿಷ್ಟಕ್ಕೆ ತಾನು ಹಿಮಾಲಯಾದಿಗಳಿಗೆ ಹೋಗಿ ಕೇವಲ ಭಗವದ್‌ಭಕ್ತಿ

---

22.1 ''ಯೋಗಾರೂಢಸ್ಯ ಸಂಪೂರ್ಣೋಪಾಯಸ್ಯ । ಅಪರೋಕ್ಷಜ್ಞಾನಿನ ಇತ್ಯರ್ಥಃ ।'' (ಗೀತಾಭಾಷ್ಯ ಅ-6 ಶ್ಲೋ-3)

ಧ್ಯಾನಾದಿಗಳನ್ನು ಮಾಡುತ್ತಾ ಸಾಧನೆ ಮಾಡಿಕೊಳ್ಳಬೇಕು. ಉತ್ತಮರ ಸೇವೆಯನ್ನು ಮಾತ್ರ ಬಿಡಬಾರದು ಎಂಬುವುದು ಗೀತೆಯ ಅಭಿಪ್ರಾಯ.[2]

**23. ಒಳಮನಸ್ಸು ಹೊರಮನಸ್ಸುಗಳಲ್ಲಿ ಹೊರಮನಸ್ಸು ಬಹಳ ಚಂಚಲವಾದದ್ದು ಎಂದಮೇಲೆ ಹೇಗೆ ಏಕಾಗ್ರತೆ ಬರಬೇಕು?**

ಇದಕ್ಕೆ ಶ್ರೀಕೃಷ್ಣಪರಮಾತ್ಮನೇ ಗೀತೆಯಲ್ಲಿ ಉತ್ತರ ನೀಡಿದ್ದಾನೆ.[1]

**''ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ । ''**

ಮನಸ್ಸು ಬಾಹ್ಯವಿಷಯಗಳಲ್ಲಿ ಎಷ್ಟು ಸಲ ಹೋಗುತ್ತದೆ ಅಷ್ಟು ಸಲ ಅದನ್ನು ಭಗವಂತನಲ್ಲಿ ಎಳೆದು ಎಳೆದು ತಂದರೆ, ಮನಸ್ಸು ಹೊರಹೋಗುವುದನ್ನು ಬಿಡುತ್ತದೆ. ಮತ್ತು ಎಷ್ಟು ಪದಾರ್ಥಗಳ ಚಿಂತೆ ನಮಗೆ ಇದೆ ಅಷ್ಟು ಏಕಾಗ್ರತೆ ಕಡಿಮೆ ಆಗುತ್ತದೆ. ಇತರ ಪದಾರ್ಥ(ವಿಷಯ)ಗಳ ಬಗ್ಗೆ ವೈರಾಗ್ಯ ಬೆಳೆದರೆ ಅವುಗಳ ಚಿಂತೆ ಕಡಿಮೆಯಾಗುತ್ತದೆ.

---

22.2 ''ಸಂಪೂರ್ಣೋಪಾಯೋ ಯೋಗಾರೂಢಃ ।
ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ ।
ಯೋಗಾರ್ಥಿನಾ ತು ಸಾ ಕಾರ್ಯಾ ಯೋಗಸ್ಥೇನ ಹರೌ ಸ್ಥಿತಿಃ ॥
ತೇನಾಪಿ ಸ್ವೋತ್ತಮಾನಾಂ ತು ಕಾರ್ಯಾಽಸ್ತೈರಖಿಲೇಷ್ವಪಿ ।
ಶಕ್ತಿತಃ ಕರಣೀಯೇತಿ ವಿಶೇಷೋಽ ಸಿದ್ಧಸಿದ್ಧಯೋಃ ॥
ಪ್ರಾಪ್ತೋಪಾಯಸ್ತು ಸಿದ್ಧಃ ಸ್ಯಾತ್ ಪ್ರೇಪ್ಸುಃ ಸಾಧಕ ಉಚ್ಯತೇ ।
ತಸ್ಯ ಪ್ರಾಣ್ಯುಪಕಾರೇಣ ಸಂತುಷ್ಟೋ ಭವತೀಶ್ವರಃ ॥
ಸಿದ್ಧೋಪಾಯೇನ ವಿಷ್ಣೋಸ್ತು ಧ್ಯಾನವ್ಯಾಖ್ಯಾರ್ಚನಾದಿಕಮ್ ।
ಕಾರ್ಯಂ ನಾನ್ಯತ್ತಸ್ಯ ತೇನ ತುಷ್ಟೋ ಭವತಿ ಕೇಶವಃ ॥
ಇತಿ ಪ್ರವೃತ್ತಿವಚನಾನ್ನ ವಿರೋಧಃ ।''
(ಗೀತಾ ತಾತ್ಪರ್ಯ ಅ-6 ಶ್ಲೋ-3)

23.1 ''ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥''
(ಭಗವದ್ಗೀತಾ ಅ-6, ಶ್ಲೋ.35)
''ಏತಸ್ಯ ಯೋಗಸ್ಯ ಸ್ಥಿರಾಂ ಸ್ಥಿತಿಂ ನ ಪಶ್ಯಾಮಿ ಮನಸಶ್ಚಲತ್ವಾತ್ । ಉಕ್ತಂ ಚ -
ಮನಸಶ್ಚಂಚಲತ್ವಾದ್ಧಿ ಸ್ಥಿತಿರ್ಯೋಗಸ್ಯ ವೈ ಸ್ಥಿರಾ ॥
ವಿನಾಽಭ್ಯಾಸಾನ್ನ ಶಕ್ಯಾ ಸ್ಯಾದ್ ವೈರಾಗ್ಯಾದ್ವಾ ನ ಸಂಶಯಃ ॥
ಇತಿ ವ್ಯಾಸಯೋಗೇ ॥''
(ಗೀತಾಭಾಷ್ಯ ಅ-6, ಶ್ಲೋ.35)

ಪುರಂದರದಾಸರು ಮಾಡಿದ್ದು ಇದನ್ನೇ, ನೂರೆಂಟು ಪದಾರ್ಥಗಳಿದ್ದರೆ ಅವುಗಳ ರಕ್ಷಣೆಯ ಚಿಂತೆ, ಉಪಭೋಗದ ಚಿಂತೆ ಇರುತ್ತದೆ. ಪದಾರ್ಥಗಳಿರುವಾಗ ಅವುಗಳನ್ನೇಕೆ ವ್ಯರ್ಥಮಾಡಬೇಕೆಂದು ಭೋಗ ಮಾಡುತ್ತಾನೆ. ಅವುಗಳ ರಕ್ಷಣೆಗಾಗಿ ಚಿಂತಿಸುತ್ತಾನೆ. ಪದಾರ್ಥಗಳೇ ಇಲ್ಲವಾದರೆ ಅರ್ಥಾತ್ ಅವುಗಳ ಬಗ್ಗೆ ವೈರಾಗ್ಯವಿದ್ದರೆ ಅವುಗಳ ಚಿಂತೆಯೂ ಕಡಿಮೆಯಾಗುತ್ತದೆ. ಆ ರೀತಿ ಪದಾರ್ಥಗಳನ್ನೇ ಪೂರ್ಣವಾಗಿ ಬಿಡಲು ಸಾಧ್ಯವಿಲ್ಲದಿದ್ದರೂ ಅವುಗಳ ಮೇಲಿನ ಅಭಿಮಾನ ಬಿಟ್ಟರೆ (ವೈರಾಗ್ಯ ತಂದುಕೊಂಡರೆ) ಅವುಗಳ ಚಿಂತೆ ಕಡಿಮೆಯಾಗಿ ಏಕಾಗ್ರತೆ ಬರುತ್ತದೆ.

ಅದಕ್ಕಾಗಿಯೇ ಒಂದು ದೃಷ್ಟಾಂತ ಹೇಳುವುದುಂಟು. ಒಬ್ಬ ವ್ಯಕ್ತಿ ವಿಚಾರ ಮಾಡಿದ. ಎಲ್ಲಿಯಾದರೂ ಹೋಗಬೇಕೆಂದರೆ ಬಾಗಿಲಿನವರೆಗೆ ಹೋಗಬೇಕು. ಅದಕ್ಕೆ ಉಪಾಯವಾಗಿ ತಾನು ಎಲ್ಲಿದ್ದಾಗ ಹೋಗ-ಬೇಕೆನಿಸುತ್ತದೆ ಅಲ್ಲಿಂದಲೇ ಹೊರಹೋಗುವುದಕ್ಕೆ ಮನೆ ತುಂಬ ಹತ್ತಾರು ಬಾಗಿಲುಗಳನ್ನು ಮಾಡಿಸಿದ. ಗೃಹಪ್ರವೇಶಕ್ಕೆ ಬಂದ ಜನರೆಲ್ಲ ''ಇಂತಹ ಮನೆ ಎಲ್ಲೂ ಕಂಡಿಲ್ಲ'' ಎಂದು ಹೊಗಳಿ ಹೋದರು. ರಾತ್ರಿಯಾದಾಗ ಇವನಿಗೆ ಚಿಂತೆ ಪ್ರಾರಂಭವಾಯಿತು. ಆರನೇ ಬಾಗಿಲು ಹಾಕಿದೆಯೇ ? ಎಂದು ನೋಡಿಬಂದ. ಮತ್ತೆ ಎಂಟನೇ ಬಾಗಿಲನ್ನು ನೋಡಿಬಂದ. ಮತ್ತೆ ಹತ್ತನೇ ಬಾಗಿಲು, ಹನ್ನೊಂದನೇ ಬಾಗಿಲು ಹೀಗೆ ಬಾಗಿಲುಗಳನ್ನು ನೋಡಿ ಬರುವುದರಲ್ಲಿಯೇ ಸೂರ್ಯ ಉದಯಿಸಿದ್ದ. ಇಡೀ ರಾತ್ರಿ ನಿದ್ರೆಯಿಲ್ಲ. ಆಗ ಅವನಿಗೆ ತಿಳಿಯಿತು ''ಹೊರಹೋಗಲು ಎಷ್ಟು ರೀತಿ ದಾರಿ ಮಾಡುತ್ತೇವೆ (ಅವಕಾಶ ನೀಡುತ್ತೇವೆ) ಅಷ್ಟು ಚಿಂತೆ ಹೆಚ್ಚು'' ಎಂದು.

ಅದರಂತೆ ನಮ್ಮ ಮನಸ್ಸನ್ನು ಎಷ್ಟು ರೀತಿ ಹೊರಹೋಗಲು ಬಿಡುತ್ತೇವೆ (ದಾರಿ ಮಾಡುತ್ತೇವೆ) ಅಷ್ಟು ಚಿಂತೆ ಹೆಚ್ಚಾಗುತ್ತದೆ. ವೈರಾಗ್ಯವಿದ್ದರೆ ಅರ್ಥಾತ್ ಪದಾರ್ಥಗಳ ಮೇಲೆ ಅಭಿಮಾನವನ್ನು ಬಿಟ್ಟಿದ್ದರೆ, ಅಲ್ಲಿ ನಿಶ್ಚಿಂತೆಯಿಂದ ನಿದ್ರೆ ಮಾಡುವಂತೆ ಇಲ್ಲಿ (ನಿಶ್ಚಿಂತೆಯಿಂದ) ಏಕಾಗ್ರತೆ-ಯಿಂದ ಧ್ಯಾನ ಮಾಡಬಹುದು.

**24. ಹುಬ್ಬಿನ ಮಧ್ಯದಲ್ಲಿ ನೋಡಬೇಕು ಎಂದು ಗೀತೆಯಲ್ಲಿ ಕೃಷ್ಣ ಹೇಳಿದ್ದಾನೆ. ಹೃದಯದಲ್ಲಿರುವ ಭಗವಂತನನ್ನು ನೋಡಬೇಕು ಎಂದು ಕೆಲವರು ಹೇಳುತ್ತಾರೆ. ಇದು ಹೇಗೆ ? (ಯಾವುದು ಸರಿ?)**

ಹುಬ್ಬಿನ ಮಧ್ಯದಲ್ಲಿ ನೋಡಿ ಏಕಾಗ್ರತೆಯನ್ನು ಸಂಪಾದಿಸಿಕೊಳ್ಳಬೇಕು ಎಂದು ಕೃಷ್ಣ ಹೇಳಿದ್ದಾನೆಯೇ ಹೊರತು ಹುಬ್ಬಿನ ಮಧ್ಯವನ್ನೇ ಚಿಂತನ ಮಾಡಬೇಕು ಎಂದು ಹೇಳಿಲ್ಲ.

ಚಿಂತನ ಮಾಡುವುದು ಮಾತ್ರ ಹೃದಯದಲ್ಲಿ ಇರುವ ಭಗವಂತನನ್ನು.

**25. ವಿಶ್ವನಾಮಕ ಪರಮಾತ್ಮನು ಜಾಗ್ರದವಸ್ಥೆಯಲ್ಲಿ ಜೀವನನ್ನು ಕಣ್ಣಿನಲ್ಲಿ ಕರೆತರುತ್ತಾನೆ ಎಂದಿದೆ. ಅಂದರೆ ಹೃದಯದಲ್ಲಿರುವ ಜೀವನನ್ನೇ ಕರೆತರುತ್ತಾನೆ ಎಂದರ್ಥವೋ? ಅಥವಾ ಹೃದಯದಲ್ಲಿ ಜೀವನು ಇದ್ದರೂ ಅವನ ಅಂಶವನ್ನು ಕರೆತರುತ್ತಾನೆ ಎಂದರ್ಥವೋ?**

'ಹೃದಯದಲ್ಲಿ ಜೀವನು ಇದ್ದರೂ ಅವನ ಅಂಶವನ್ನು ಕಣ್ಣಿನೊಳಗೆ ಕರೆದುಕೊಂಡು ಹೋಗುತ್ತಾನೆ ವಿಶ್ವ' ಎಂಬುದಾಗಿ ಬೃಹದಾರಣ್ಯಭಾಷ್ಯ ಮೊದಲಾದ ಗ್ರಂಥಗಳಲ್ಲಿ ಶ್ರೀಮದಾಚಾರ್ಯರು ತಿಳಿಸಿದ್ದಾರೆ.[1]

---

25.1 ''ಹೃದಯೇ ಸಂಸ್ಥಿತೋ ಜೀವೋ ವಿಶೇಷೇಣ ಹರಿಸ್ತಥಾ ।
ಚಕ್ಷುರಾದಿಷು ರೂಪಾಣಿ ಜಾಗ್ರತ್ಕಾಲೇತಯೋಃ ಸದಾ ॥
ಬಹೂನಿ ಸಂತಿತಾನ್ಯೇವ ಯದ್ಯೈಕೀಭಾವಮಾಪ್ನುಯುಃ ।
ಹೃದಯಸ್ಥೇನ ರೂಪೇಣ ತದಾ ಜೀವೋ ನ ಕಿಂಚನ ॥
ಜಾನಾತೀತಿ ವಿದುಃ ಪ್ರಾಜ್ಞಾಸ್ತದಾ ವಿಷ್ಣೋಃ ಸ್ವತೇಜಸಾ ॥''
(ಬೃಹದಾರಣ್ಯ ಭಾಷ್ಯ ಅ-6, ಬ್ರಾ-4)

''ಏಕೀಭವತೀತಿ ॥ ಜೀವೇಶ್ವರೌ ವಿಶೇಷೇಣ ಹೃದಯಸ್ಥೌ ತಯೋರಂಶಾಸ್ತು ಚಕ್ಷುರಾದಿಷು ಸ್ಥಿತಾಃ ॥'' (ಬೃಹದಾರಣ್ಯ ಭಾವಬೋಧ - ಖಂಡಾರ್ಥ 6-4)

''ನನು ಜಾಗ್ರದವಸ್ಥಾಯಾಂ ಜೀವೋ ದಕ್ಷಿಣಾಕ್ಷಿಸ್ಥಃ ಸ್ವಪ್ನಾವಸ್ಥಾಯಾಂ ಕಂಠದೇಶಸ್ಥಃ ಸುಪ್ತೌ ತು ಹೃದಯಸ್ಥಃ । ಜಾಗ್ರದಾದ್ಯವಸ್ಥಾಪ್ರೇರಕವಿಶ್ವತೈಜಸಪ್ರಾಜ್ಞಾನಾಂ ದಕ್ಷಿಣಾಕ್ಷ್ಯಾದಿಷು ಸ್ಥಿತತ್ವಾತ್ । ಯಥೋಕ್ತಂ - ದಕ್ಷಿಣಾಕ್ಷಿಮುಖೇ ವಿಶ್ವ ಇತ್ಯಾದಿ । ತಥಾ ಚ ಹೃತ್ಕರ್ಣಿಕಾಮೂಲಗತಭಗವದ್ರೂಪೇ ಜೀವಃ ಸರ್ವದಾ ಪ್ರತಿಷ್ಠಿತಃ । ಸುಪ್ತೌ ಹೃತ್ಕರ್ಣಿಕಾಗ್ರಗತಹರೌ ಪ್ರವಿಶತೀತಿ ಕಥಮುಕ್ತಮ್ । ಕಥಂ ವಾ ಹೃದಯವ್ಯಾಪ್ತ ಪ್ರದೇಶಪರಿಮಿತಭಗವದ್ರೂಪಸ್ಯ ಸರ್ವದಾ ಜೀವಸ್ಥಾನತ್ವಮಿತಿ ಚೇನ್ನ । ಹೃದಿಸ್ಥಮೇವ ಸರ್ವದಾ ಜೀವಸ್ವರೂಪಂ, ಹೃದಿ ಹ್ಯೇಷ ಆತ್ಮಾ ಇತ್ಯಾದಿಶ್ರುತೇಃ । ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹೀತಿ ಸೂತ್ರಾಚ್ಚ । ಜಾಗರಿತಾ-ದಾವಪ್ಯಕ್ಷ್ಯಾದಿಷು ವಿಶೇಷಸನ್ನಿಹಿತಂ ಭವತಿ ದೀಪಪ್ರಕಾಶವತ್ । ಯಥೋಕ್ತಂ - ಗುಣಾದ್ವಾಲೋಕವದಿತಿ ॥''
(ಬೃಹದಾರಣ್ಯ ಭಾವಬೋಧ - ಭಾಷ್ಯಾರ್ಥ 6-1)

**26. ವಿಶ್ವ ಹಾಗೂ ತೈಜಸರ 19 ಮುಖಗಳ ರೂಪವನ್ನು ಮಾಂಡೂಕೋಪನಿಷತ್ ತಿಳಿಸಿದೆ. ಆದರೆ ಪ್ರಾಜ್ಞನ ರೂಪವನ್ನು ತಿಳಿಸಿಲ್ಲ. ಆದ್ದರಿಂದ ಪ್ರಾಜ್ಞನಾಮಕ ಭಗವಂತನ ರೂಪವೇನು?**

ವಿಶ್ವ-ತೈಜಸರ ರೂಪಗಳನ್ನು ತಿಳಿಸಿದಂತೆ ಪ್ರಾಜ್ಞನ ರೂಪವನ್ನು ಮಾಂಡೂಕೋಪನಿಷತ್ ಸ್ಪಷ್ಟವಾಗಿ ತಿಳಿಸಿಲ್ಲ. ಆದರೆ ಉಪನಿಷತ್ತಿನ ಕೆಲವು ವ್ಯಾಖ್ಯಾನಕಾರರ ವಚನಗಳಿಗೆ ಅನುಗುಣವಾಗಿ ಹಾಗೂ ಇತರ ಅನೇಕ ಗ್ರಂಥಗಳಿಗೆ ಅನುಗುಣವಾಗಿ ಹೇಳುವುದಾದರೆ, ಪ್ರಾಜ್ಞನಾಮಕ ಪರಮಾತ್ಮ ಎಂದರೆ ಬಿಂಬರೂಪಿಯಾದ ಭಗವಂತನೇ.[1] ಹೊರತು ಬೇರೆ ಅಲ್ಲ.

ಅಂದಮೇಲೆ ಆ ಆ ಜೀವಸ್ವರೂಪ ಹೇಗಿರುತ್ತದೆಯೋ, ಬಿಂಬರೂಪಿಯಾದ (ಪ್ರಾಜ್ಞನಾಮಕ) ಭಗವಂತನೂ ಹಾಗೆಯೇ ಇರುತ್ತಾನೆ. ವಿಶ್ವ ತೈಜಸರಂತೆ

---

26.1 **ವಿವರಣೆ :-** 'ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ ।
ಮಿತೇರಪೀತೇರ್ವಾ ।' (ಮಾಂಡೂಕೋಪನಿಷತ್)

**''ಸ್ವಾತ್ಮನ್ಯಂತರ್ಗಮಯತಿ ಮಾನಮಂತರ್ಗತಿಃ ಸ್ಮೃತಾ ।**
**ಜೀವಮಂತರ್ಗತಂ ಕೃತ್ವಾ ತಜ್‌ಜ್ಞಾನಲಯಕೃತ್ ಯತಃ ॥ ಪ್ರಾಜ್ಞೋ..........''**

ಎಂಬುದಾಗಿ ಮಾಂಡೂಕೋಪನಿಷದ್ಭಾಷ್ಯದಲ್ಲಿ (ತೃತೀಯ ಖಂಡ) ಆಚಾರ್ಯರು ತಿಳಿಸಿದಂತೆ, ಮತ್ತು **''ಅಂಗುಷ್ಠಪ್ರಮಾಣಕೇ ಹೃತ್ಕರ್ಣಿಕಾಗ್ರ ಅಂಗುಷ್ಠಪ್ರಮಾಣಕಃ ಪ್ರಾಜ್ಞಃ ಸುಷುಪ್ತೌ ಸರ್ವಜೀವಾನಾಂ ಪ್ರವೇಶಾಧಿಕರಣಃ ಸನ್ ಪ್ರತಿಷ್ಠತೇ ।''** ಎಂಬುದಾಗಿ ಗೂಢಕರ್ತೃಕಾಟಿಪ್ಪಣಿಯಲ್ಲಿ ತಿಳಿಸಿದಂತೆ ಸುಷುಪ್ತಿಕಾಲದಲ್ಲಿ ಜೀವನು ಪ್ರಾಜ್ಞನಲ್ಲಿ ಪ್ರವೇಶ ಮಾಡುತ್ತಾನೆ ಎಂದು ತಿಳಿದುಬರುತ್ತದೆ.

**''ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ ।**
**ಪ್ರವಿಶಂತಿ ಸುಷುಪ್ತೌ ತು ಪ್ರಬುಧ್ಯಂತೇ ತತಸ್ತಥಾ ॥''**

ಎಂಬುದಾಗಿ ಬೃಹದಾರಣ್ಯಭಾಷ್ಯದಲ್ಲಿ ಆಚಾರ್ಯರು ತಿಳಿಸಿದಂತೆ, ಮತ್ತು **''ತತಃ ಪ್ರಾಜ್ಞಾಪರ ನಾಮಕಸ್ಯ ಅಗ್ರೇಶಸ್ಯ ಅತ್ಯಂತಂ ಸಮೀಪೇ ಸ್ಥಿತೋ ಜೀವಃ ತೇಜಸಿ ಅಂತರ್ಗತೋ ಭವತಿ ।'' ''ಸುಷುಪ್ತೌ ತು ಕರ್ಣಿಕಾಮೂಲಂ ವಿಹಾಯಾಗ್ರಂ ಗಚ್ಛತಿ । ತತ್ರಸ್ಥಾಗ್ರೇಶಸ್ತು ತದಾನೀಮೇವಾಧಾರಃ ।''** ಎಂಬುದಾಗಿ ವಿಷ್ಣುತೀರ್ಥರು ತಮ್ಮ ಷೋಡಶೀ (ಸ್ವಪ್ನ-ಪ್ರಕರಣ) ಗ್ರಂಥದಲ್ಲಿ ತಿಳಿಸಿದಂತೆ ಸುಷುಪ್ತಿಕಾಲದಲ್ಲಿ ಜೀವನು ಅಗ್ರೇಶನಲ್ಲಿ ಪ್ರವೇಶ ಮಾಡುತ್ತಾನೆ ಎಂದು ತಿಳಿದುಬರುತ್ತದೆ. ಅರ್ಥಾತ್ ಇದರಿಂದ ಪ್ರಾಜ್ಞ ಹಾಗೂ ಅಗ್ರೇಶ ಇಬ್ಬರೂ ಒಂದೇ ಎಂದು ತಿಳಿಯುತ್ತದೆ. **''ಪ್ರಾಜ್ಞಾಪರನಾಮಕಸ್ಯ ಅಗ್ರೇಶಸ್ಯ''** ಎಂಬುದಾಗಿ ವಿಷ್ಣುತೀರ್ಥರು ಸ್ಪಷ್ಟವಾಗಿಯೇ ಹೇಳಿದ್ದಾರೆ.

''ಸ್ಥೂಲಾಂಗುಷ್ಠಪ್ರಮಾಣೇನ ಬಿಂಬಮೂರ್ತಿರ್ವಿರಾಜತೇ ।
**ಸ ಏವ ಪರಮಾತ್ಮಾಽಪಿ ಹ್ಯಗ್ರೇಶ ಇತಿ ನಾಮಕಃ ॥**
ಪ್ರಾಜ್ಞಃ ಸ ಸರ್ವಜೀವಾನಾಂ ಸುಷುಪ್ತ್ಯಾದಿಪ್ರದೋಽನಿಶಮ್ ॥''

ಅವನದು ಒಂದೇ ಆಕಾರವಲ್ಲ. ಉದಾಹರಣೆಗೆ- ಜೀವನ ಸ್ವರೂಪ ಕುದುರೆಯಾಗಿದ್ದರೆ ಅವನ ಬಿಂಬರೂಪಿಯೂ ಕುದುರೆಯ ಆಕಾರದಲ್ಲಿರು-ತ್ತಾನೆ. ಜೀವನ ಸ್ವರೂಪ ಆನೆಯಾಗಿದ್ದರೆ ಅವನ ಬಿಂಬರೂಪಿಯೂ ಆನೆಯ ಆಕಾರದಲ್ಲಿರುತ್ತಾನೆ. ಹೀಗೆ ಬಿಂಬರೂಪಿಯಾದ ಪರಮಾತ್ಮನ ಆಕಾರ ಒಂದೇ ಆಗಿಲ್ಲ. ಅವರವರ ಸ್ವರೂಪಕ್ಕೆ ಅನುಗುಣವಾಗಿ ಅವನ ಆಕಾರಗಳು. ಹೀಗಾಗಿ ವಿಶ್ವ-ತೈಜಸರಂತೆ ಬಿಂಬರೂಪಿಯ ಆಕಾರ ಅರ್ಥಾತ್ ಪ್ರಾಜ್ಞನಾಮಕ ಭಗವಂತನ ಆಕಾರ ನಿಗದಿತವಲ್ಲ ಎಂಬ ಕಾರಣದಿಂದಾಗಿ ಮಾಂಡೂಕೋಪನಿಷತ್ತು ಪ್ರಾಜ್ಞನ ರೂಪವನ್ನು ಹೇಳಲಿಲ್ಲ. ಒಟ್ಟಿನಲ್ಲಿ ಪ್ರಾಜ್ಞನ ರೂಪ ಎಂದರೆ ಅವರವರ ಬಿಂಬರೂಪವೇ ಎಂದು ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯ.

**27. ಕೆಲವರಲ್ಲಿ ದೇವರು ಪ್ರವೇಶ ಮಾಡುತ್ತಾನೆ ಎಂದು ಹೇಳುತ್ತಾರೆ. ಅದು ಸತ್ಯವೇ? ಅಂತಹ ಸಣ್ಣ ಮನುಷ್ಯರಲ್ಲೂ ದೇವರು (ಪ್ರವೇಶಿಸಲು ಸಾಧ್ಯವೇ?) ಹೇಗೆ ಪ್ರವೇಶಿಸುತ್ತಾನೆ?**

ದೇವರು ಎಲ್ಲೆಡೆ ವ್ಯಾಪ್ತನಾದದ್ದರಿಂದ (ಎಲ್ಲರಲ್ಲಿಯೂ ಇರುವುದರಿಂದ) ಇಂತಹ ಸಾಮಾನ್ಯಜನರಲ್ಲೂ ಇದ್ದೇ ಇದ್ದಾನೆ. ಅಂದಮೇಲೆ ಹೊಸದಾಗಿ ಪ್ರವೇಶಿಸುವುದೇನಿದೆ? ಅರ್ಥಾತ್ ದೇವರು ಎಷ್ಟೇ ದೊಡ್ಡವನಾದರೂ ಎಲ್ಲೆಡೆ ಇರುವವನಾದ್ದರಿಂದ ಈ ಸಾಮಾನ್ಯರಲ್ಲಿ ಪ್ರವೇಶಿಸುವುದು ದೊಡ್ಡ ವಿಷಯವೇನಲ್ಲ. ಆದರೂ ವಿಶೇಷವಾಗಿ ತನ್ನ ಅಭಿವ್ಯಕ್ತಿಯನ್ನು ಮಾಡಿ ಕಾರ್ಯ ಮಾಡಬಹುದೇ? ಎಂಬುವುದು ಈ ಪ್ರಶ್ನೆಯ ಅಭಿಪ್ರಾಯ.

ಅದಕ್ಕೆ ಭೂತ-ಪಿಶಾಚಗಳ ಉತ್ತರದಲ್ಲಿ ಹೇಳಿದಂತೆ ದೇವರಾಗಲೀ ವಾಯುದೇವರಾಗಲೀ ಅಥವಾ ದೇವತೆಗಳಾಗಲೀ ಸಾಮಾನ್ಯರಲ್ಲಿ ಪ್ರವೇಶ ಮಾಡಿ ಕಾರ್ಯ ಮಾಡುವ ಈ ತಥ್ಯ ಸತ್ಯ. ಪುರಾಣಗಳಲ್ಲಿ ಅಂತಹ ಕಥೆಗಳನ್ನು ಕೇಳುತ್ತೇವೆ. ಅಷ್ಟೇಕೆ ಶ್ರೀಮದಾಚಾರ್ಯರು ಅವತರಿಸುವ ಸಂದರ್ಭದಲ್ಲಿ ದೇವರೇ ಒಬ್ಬ ಹುಚ್ಚನಲ್ಲಿ ಪ್ರವೇಶ ಮಾಡಿ, ಅವನು ಧ್ವಜಸ್ತಂಭವನ್ನು ಹತ್ತಿ ತುದಿಯಲ್ಲಿ ನಿಂತು ನರ್ತನೆ ಮಾಡುತ್ತಾ -

---

ಎಂಬುದಾಗಿ 'ಮುಕ್ತಿತತ್ವ' ಎಂಬ ಗ್ರಂಥದಲ್ಲಿ **(ಪೂರ್ಣಪ್ರಜ್ಞಸಂಶೋಧನ ಮಂದಿರದಿಂದ ಪ್ರಕಾಶಿತವಾಗಿದೆ)** ಪ್ರಾಜ್ಞ-ಅಗ್ರೇಶ-ಬಿಂಬರೂಪಿ ಎಲ್ಲರೂ ಒಂದೇ ಎಂಬುದಾಗಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಈ ಎಲ್ಲ ಪ್ರಮಾಣಗಳನ್ನು ಅವಲೋಕಿಸಿದರೆ 'ಪ್ರಾಜ್ಞನಾಮಕ ಪರಮಾತ್ಮನೇ ಬಿಂಬರೂಪಿ' ಎಂಬ ವಿಚಾರವು ಸ್ಪಷ್ಟವಾಗುತ್ತದೆ.

**"ಉತ್ಪತ್ಸ್ಯತೇ ಜಗತಿ ವಿಶ್ವಜನೀನವೃತ್ತಿಃ ವಿಶ್ವಜ್ಞ ಏವ ಭಗವಾನ್ ಅಚಿರಾದಿಹೇತಿ ।"**

"ಸರ್ವಜ್ಞರಾದ ವಾಯುದೇವರೇ ಇಲ್ಲಿ ಅವತಾರ ಮಾಡಲಿದ್ದಾರೆ" ಎಂಬ ಆದೇಶವನ್ನು ಸಾರಿದ ಘಟನೆಯನ್ನು ನಾರಾಯಣಪಂಡಿತಾಚಾರ್ಯರು ತಮ್ಮ ಸುಮಧ್ವವಿಜಯದಲ್ಲಿ ಉಲ್ಲೇಖಿಸುತ್ತಾರೆ.[1] ಇದೇ ರೀತಿ ವಾಯು-ದೇವರು-ದೇವತೆಗಳು ಪ್ರವೇಶ ಮಾಡಿ ಕಾರ್ಯ ಮಾಡಿದ್ದನ್ನು ಪುರಾಣಗಳಲ್ಲಿ ಕಾಣುತ್ತೇವೆ. ಆದ್ದರಿಂದ ದೇವರು ಪ್ರವೇಶ ಮಾಡುವ ವಿಷಯ ಸತ್ಯ.

ಆದರೆ ದೇವರು ಪ್ರವೇಶಿಸಿದ್ದಾನೆ ಎಂದು ಸುಳ್ಳು ಹೇಳಿ ಮೋಸ ಮಾಡುತ್ತಿದ್ದರೆ ಅದನ್ನು ಸರಿಯಾಗಿ ಪರೀಕ್ಷೆ ಮಾಡಿ ವಿಶ್ವಾಸ ಮಾಡಬೇಕು.

**28. ಕನಸುಗಳು ಹಿಂದಿನ ಜನ್ಮಗಳ ಸಂಸ್ಕಾರಗಳ ಫಲ ಎಂದು ಹೇಳುತ್ತಾರೆ. ಈ ಜನ್ಮದ ಸಂಸ್ಕಾರಗಳಿಗೂ ಸಂಬಂಧವಿದೆಯೇ? ಮತ್ತು ಈ ಜನ್ಮದ ಘಟನೆಗಳಿಗೆ ಏನಾದರೂ ಸಂಬಂಧವಿದೆಯೇ?**

ಕನಸು(ಸ್ವಪ್ನ)ಗಳು ಸಂಸ್ಕಾರಗಳಿಂದಲೇ ಆಗುವವು ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ.[1] ಉಪನಿಷತ್ತೂ ಹೇಳುತ್ತದೆ.—

---

27.1 "**ತತ್ಪ್ರೀತಯೇ ರಜತಪೀಠಪುರಾಧಿವಾಸೀ**
**ದೇವೋ ವಿವೇಶ ಪುರುಷಂ** ಶುಭಸೂಚನಾಯ ।
ಪ್ರಾಪ್ತೇ ಮಹಾಯ ಮಹಿತಾಯ ಮಹಾಜನೌಘೇ
ಕೋಲಾಹಲೇನ ಸುಕುತೂಹಲಿನಿ ಪ್ರವೃತ್ತೇ ॥"
"ಆವಿಷ್ಟವಾನಕುಶಲಂ ಪುರುಷಂ ಪ್ರಕೃತ್ಯಾ
ಪ್ರತ್ಯಾಯಯನ್ ನಿಜಜನಾನ್ ನಿತರಾಮನೃತ್ಯತ್ ।
ಉತ್ತುಂಗಕೇತುಶಿಖರೇ ಸ ಕೃತಾಂಗಹಾರೋ
ರಂಗಾಂತರೇ ನಟ ಇವಾಖಿಲವಿಸ್ಮಯಾತ್ಮಾ ॥"
(ಸುಮಧ್ವವಿಜಯ ಸರ್ಗ-2, ಶ್ಲೋ-6/7)

**ಅಭಿಪ್ರಾಯ** :- ವಾಯುದೇವರು ಅವತರಿಸುವ ಶುಭವಾರ್ತೆಯನ್ನು ಸೂಚಿಸಿ, ಅಂತಹ ಸಜ್ಜನರನ್ನು ಸಂತೋಷಪಡಿಸುವುದಕ್ಕಾಗಿ ರಜತಪೀಠಪುರವಾಸಿಯಾದ ಅನಂತೇಶ್ವರ(ನಾರಾಯಣ)ನು ಉತ್ಸವಕ್ಕಾಗಿ ಸೇರಿದ್ದ ಜನರಲ್ಲಿನ ಒಬ್ಬ ಪುರುಷನಲ್ಲಿ ಪ್ರವೇಶಮಾಡಿದನು.

28.1 "ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।
ಸ್ವಪ್ನಕಾಲೇ ದರ್ಶಯತಿ ....." (ಅನುವ್ಯಾಖ್ಯಾನ - 3.2.1)

**'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ'** ಎಂದು.[2] ಆದ್ದರಿಂದ ಕನಸು ಸಂಸ್ಕಾರದ ಫಲ ಎನ್ನುವುದು ಸತ್ಯ. ಆದರೆ ಆ ಜನ್ಮದ ಸಂಸ್ಕಾರ, ಈ ಜನ್ಮದ ಸಂಸ್ಕಾರ ಎಂಬ ನಿಯಮವಿಲ್ಲ. ಇದೇ ಜನ್ಮದ ಸಂಸ್ಕಾರಗಳಿಂದಲೂ ಕನಸು ಬೀಳಬಹುದು. ಜನ್ಮಾಂತರದ ಸಂಸ್ಕಾರಗಳಿಂದಲೂ ಕನಸು ಬೀಳಬಹುದು. ಈ ಜನ್ಮದಲ್ಲಿ ಎಷ್ಟೋ ಘಟನೆಗಳನ್ನು ನೋಡಿರುತ್ತೇವೆ. ಅವುಗಳ ಸಂಸ್ಕಾರಗಳು ಮನಸ್ಸಿನಲ್ಲಿ ಕೂತಿರುತ್ತವೆ. ಅವೆಲ್ಲವನ್ನೂ ಕನಸಿನಲ್ಲಿ ನೋಡುತ್ತೇವೆ. ಬೇರೆ ಬೇರೆ ವ್ಯಕ್ತಿಗಳನ್ನು, ಪ್ರದೇಶಗಳನ್ನು ನೋಡಿರುತ್ತೇವೆ. ಆದರೆ ಆ ಬೇರೆ ಬೇರೆ ವ್ಯಕ್ತಿಗಳನ್ನು, ಪ್ರದೇಶಗಳನ್ನು ದೇವರು ಜೋಡಿಸುತ್ತಾನೆ. ಈ ಜನ್ಮದ ಅಥವಾ ಜನ್ಮಾಂತರದ ಸಂಸ್ಕಾರಗಳಿರಬಹುದು. ಅವುಗಳನ್ನು ಜೋಡಿಸಿ ದೇವರು ನಮಗೆ ಕನಸಿನಲ್ಲಿ ತೋರಿಸುತ್ತಾನೆ.

ಇದೊಂದು ಅದ್ಭುತವಾದ ಲೀಲೆ ಎಂಬುದಾಗಿ ವೇದವ್ಯಾಸರು **'ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ'** ಎಂಬ ಸೂತ್ರದಲ್ಲಿ[3] ತಿಳಿಸಿದ್ದಾರೆ. ಇದೊಂದು ದೇವರ ಅದ್ಭುತ ಮಹಿಮೆ. ಈ ಜನ್ಮದ-ಜನ್ಮಾಂತರಗಳ ಸಂಸ್ಕಾರಗಳನ್ನು ಭಗವಂತ ಬಹಳ ವಿಚಿತ್ರವಾಗಿ ಜೋಡಿಸುತ್ತಾನೆ. ಹೇಗೆ ಜೋಡಿಸುತ್ತಾನೆ ಎನ್ನುವುದು ಗೊತ್ತಾಗುವುದಿಲ್ಲ. ಅದು ಭಗವಂತನ ಅದ್ಭುತವಾದ ಸೃಷ್ಟಿ. ''ಇಂತಹ ಸ್ವಪ್ನವನ್ನು ಕಾಣಬೇಕು'' ಎಂದು ಇಚ್ಛಿಸಿ ಮಲಗಿದರೆ ಕಾಣುವುದಿಲ್ಲ. ಅಂದರೆ ಅದು ನಮ್ಮ ಅಧೀನವಲ್ಲ. ಭಗವಂತನ ಇಚ್ಛೆಯಂತೆ ಆಗುತ್ತವೆ. ಅರ್ಥಾತ್ ಭಗವಂತನೇ ಅದಕ್ಕೆ (ನಿಯಾಮಕ) ನಿಮಿತ್ತಕಾರಣ.

ಇನ್ನು ಈ ಜನ್ಮಕ್ಕೆ ಸಂಬಂಧಪಟ್ಟಂತೆ ಕೆಲವು ಸೂಚನೆಗಳನ್ನು ಕೊಡುತ್ತದೆ ಕನಸು. ಸ್ವಪ್ನದಲ್ಲಿ ಕಂಡಂತೆಯೇ ಆಗಬೇಕು ಎಂದಿಲ್ಲ. ಕೆಲವು ಸಲ ಸ್ವಪ್ನಗಳು ಶುಭ-ಅಶುಭಗಳಿಗೆ ಸೂಚಕವಾಗುತ್ತವೆ.

**'ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ'**

ಎಂದು ಹೇಳಿದಂತೆ ಕಪ್ಪು ಮನುಷ್ಯ, ಕಪ್ಪು ಹಲ್ಲು ಹೀಗೆ ವಿಕೃತವಾದವುಗಳನ್ನು ನೋಡಿದರೆ ಅದು ಅಶುಭಸೂಚಕ. ಶ್ರೇಷ್ಠನಾದ, ಸುಲಕ್ಷಣಗಳಿಂದ

---

28.2 'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।'
'ಅದೃಷ್ಟಾದಶ್ರುತಾದ್ಭಾವಾನ್ನ ಭಾವ ಉಪಜಾಯತೇ ।
ಇತಿ ಶ್ರುತಿಪುರಾಣೋಕ್ತೇ .......' (ಅನುವ್ಯಾಖ್ಯಾನ 3.2.1)

28.3 ''ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ'' (ಬ್ರಹ್ಮಸೂತ್ರ 3.2.1)

**''ಉತ್ತಸ್ಥೌತೇ ಜಗತಿ ವಿಶ್ವಜನೀನವೃತ್ತಿಃ ವಿಶ್ವಜ್ಞ ಏವ**
**ಭಗವಾನ್ ಅಚಿರಾದಿಹೇತಿ ।''**

''ಸರ್ವಜ್ಞರಾದ ವಾಯುದೇವರೇ ಇಲ್ಲಿ ಅವತಾರ ಮಾಡಲಿದ್ದಾರೆ'' ಎಂಬ ಆದೇಶವನ್ನು ಸಾರಿದ ಘಟನೆಯನ್ನು ನಾರಾಯಣಪಂಡಿತಾಚಾರ್ಯರು ತಮ್ಮ ಸುಮಧ್ವವಿಜಯದಲ್ಲಿ ಉಲ್ಲೇಖಿಸುತ್ತಾರೆ.[1] ಇದೇ ರೀತಿ ವಾಯು-ದೇವರು-ದೇವತೆಗಳು ಪ್ರವೇಶ ಮಾಡಿ ಕಾರ್ಯ ಮಾಡಿದ್ದನ್ನು ಪುರಾಣಗಳಲ್ಲಿ ಕಾಣುತ್ತೇವೆ. ಆದ್ದರಿಂದ ದೇವರು ಪ್ರವೇಶ ಮಾಡುವ ವಿಷಯ ಸತ್ಯ.

ಆದರೆ ದೇವರು ಪ್ರವೇಶಿಸಿದ್ದಾನೆ ಎಂದು ಸುಳ್ಳು ಹೇಳಿ ಮೋಸ ಮಾಡುತ್ತಿದ್ದರೆ ಅದನ್ನು ಸರಿಯಾಗಿ ಪರೀಕ್ಷೆ ಮಾಡಿ ವಿಶ್ವಾಸ ಮಾಡಬೇಕು.

**28. ಕನಸುಗಳು ಹಿಂದಿನ ಜನ್ಮಗಳ ಸಂಸ್ಕಾರಗಳ ಫಲ ಎಂದು ಹೇಳುತ್ತಾರೆ. ಈ ಜನ್ಮದ ಸಂಸ್ಕಾರಗಳಿಗೂ ಸಂಬಂಧವಿದೆಯೇ? ಮತ್ತು ಈ ಜನ್ಮದ ಘಟನೆಗಳಿಗೆ ಏನಾದರೂ ಸಂಬಂಧವಿದೆಯೇ?**

ಕನಸು(ಸ್ವಪ್ನ)ಗಳು ಸಂಸ್ಕಾರಗಳಿಂದಲೇ ಆಗುವವು ಎಂದು ಶ್ರೀಮದಾಚಾರ್ಯರು ಹೇಳಿದ್ದಾರೆ.[1] ಉಪನಿಷತ್ತೂ ಹೇಳುತ್ತದೆ.—

---

27.1 ''**ತತ್ಪ್ರೀತಯೇ ರಜತಪೀಠಪುರಾಧಿವಾಸೀ**
**ದೇವೋ ವಿವೇಶ ಪುರುಷಂ ಶುಭಸೂಚನಾಯ ।**
ಪ್ರಾಪ್ತೇ ಮಹಾಯ ಮಹಿತಾಯ ಮಹಾಜನೌಘೇ
ಕೋಲಾಹಲೇನ ಸುಕುತೂಹಲಿನಿ ಪ್ರವೃತ್ತೇ ॥''
''ಆವಿಷ್ಟವಾನಕುಶಲಂ ಪುರುಷಂ ಪ್ರಕೃತ್ಯಾ
ಪ್ರತ್ಯಾಯಯನ್ ನಿಜಜನಾನ್ ನಿತರಾಮಸ್ವತ್ವತ್ ।
ಉತ್ತುಂಗಕೇತುಶಿಖರೇ ಸ ಕೃತಾಂಗಹಾರೋ
ರಂಗಾಂತರೇ ನಟ ಇವಾಖಿಲವಿಸ್ಮಯಾತ್ಮಾ ॥''
(ಸುಮಧ್ವವಿಜಯ ಸರ್ಗ-2, ಶ್ಲೋ-6/7)

**ಅಭಿಪ್ರಾಯ** :- ವಾಯುದೇವರು ಅವತರಿಸುವ ಶುಭವಾರ್ತೆಯನ್ನು ಸೂಚಿಸಿ, ಅಂತಹ ಸಜ್ಜನರನ್ನು ಸಂತೋಷಪಡಿಸುವುದಕ್ಕಾಗಿ ರಜತಪೀಠಪುರವಾಸಿಯಾದ ಅನಂತೇಶ್ವರ(ನಾರಾಯಣ)ನು ಉತ್ಸವಕ್ಕಾಗಿ ಸೇರಿದ್ದ ಜನರಲ್ಲಿನ ಒಬ್ಬ ಪುರುಷನಲ್ಲಿ ಪ್ರವೇಶಮಾಡಿದನು.

28.1 ''ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।
ಸ್ವಪ್ನಕಾಲೇ ದರ್ಶಯತಿ .....'' (ಅನುವ್ಯಾಖ್ಯಾನ - 3.2.1)

**'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ'** ಎಂದು.[2] ಆದ್ದರಿಂದ ಕನಸು ಸಂಸ್ಕಾರದ ಫಲ ಎನ್ನುವುದು ಸತ್ಯ. ಆದರೆ ಆ ಜನ್ಮದ ಸಂಸ್ಕಾರ, ಈ ಜನ್ಮದ ಸಂಸ್ಕಾರ ಎಂಬ ನಿಯಮವಿಲ್ಲ. ಇದೇ ಜನ್ಮದ ಸಂಸ್ಕಾರಗಳಿಂದಲೂ ಕನಸು ಬೀಳಬಹುದು. ಜನ್ಮಾಂತರದ ಸಂಸ್ಕಾರಗಳಿಂದಲೂ ಕನಸು ಬೀಳಬಹುದು. ಈ ಜನ್ಮದಲ್ಲಿ ಎಷ್ಟೋ ಘಟನೆಗಳನ್ನು ನೋಡಿರುತ್ತೇವೆ. ಅವುಗಳ ಸಂಸ್ಕಾರಗಳು ಮನಸ್ಸಿನಲ್ಲಿ ಕೂತಿರುತ್ತವೆ. ಅವೆಲ್ಲವನ್ನೂ ಕನಸಿನಲ್ಲಿ ನೋಡುತ್ತೇವೆ. ಬೇರೆ ಬೇರೆ ವ್ಯಕ್ತಿಗಳನ್ನು, ಪ್ರದೇಶಗಳನ್ನು ನೋಡಿರುತ್ತೇವೆ. ಆದರೆ ಆ ಬೇರೆ ಬೇರೆ ವ್ಯಕ್ತಿಗಳನ್ನು, ಪ್ರದೇಶಗಳನ್ನು ದೇವರು ಜೋಡಿಸುತ್ತಾನೆ. ಈ ಜನ್ಮದ ಅಥವಾ ಜನ್ಮಾಂತರದ ಸಂಸ್ಕಾರ-ಗಳಿರಬಹುದು. ಅವುಗಳನ್ನು ಜೋಡಿಸಿ ದೇವರು ನಮಗೆ ಕನಸಿನಲ್ಲಿ ತೋರಿಸುತ್ತಾನೆ.

ಇದೊಂದು ಅದ್ಭುತವಾದ ಲೀಲೆ ಎಂಬುದಾಗಿ ವೇದವ್ಯಾಸರು **'ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ'** ಎಂಬ ಸೂತ್ರದಲ್ಲಿ[3] ತಿಳಿಸಿದ್ದಾರೆ. ಇದೊಂದು ದೇವರ ಅದ್ಭುತ ಮಹಿಮೆ. ಈ ಜನ್ಮದ-ಜನ್ಮಾಂತರಗಳ ಸಂಸ್ಕಾರಗಳನ್ನು ಭಗವಂತ ಬಹಳ ವಿಚಿತ್ರವಾಗಿ ಜೋಡಿಸುತ್ತಾನೆ. ಹೇಗೆ ಜೋಡಿಸುತ್ತಾನೆ ಎನ್ನುವುದು ಗೊತ್ತಾಗುವುದಿಲ್ಲ. ಅದು ಭಗವಂತನ ಅದ್ಭುತವಾದ ಸೃಷ್ಟಿ. ''ಇಂತಹ ಸ್ವಪ್ನವನ್ನು ಕಾಣಬೇಕು'' ಎಂದು ಇಚ್ಛಿಸಿ ಮಲಗಿದರೆ ಕಾಣುವುದಿಲ್ಲ. ಅಂದರೆ ಅದು ನಮ್ಮ ಅಧೀನವಲ್ಲ. ಭಗವಂತನ ಇಚ್ಛೆಯಂತೆ ಆಗುತ್ತವೆ. ಅರ್ಥಾತ್ ಭಗವಂತನೇ ಅದಕ್ಕೆ (ನಿಯಾಮಕ) ನಿಮಿತ್ತಕಾರಣ.

ಇನ್ನು ಈ ಜನ್ಮಕ್ಕೆ ಸಂಬಂಧಪಟ್ಟಂತೆ ಕೆಲವು ಸೂಚನೆಗಳನ್ನು ಕೊಡುತ್ತದೆ ಕನಸು. ಸ್ವಪ್ನದಲ್ಲಿ ಕಂಡಂತೆಯೇ ಆಗಬೇಕು ಎಂದಿಲ್ಲ. ಕೆಲವು ಸಲ ಸ್ವಪ್ನಗಳು ಶುಭ-ಅಶುಭಗಳಿಗೆ ಸೂಚಕವಾಗುತ್ತವೆ.

**'ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ'**

ಎಂದು ಹೇಳಿದಂತೆ ಕಪ್ಪು ಮನುಷ್ಯ, ಕಪ್ಪು ಹಲ್ಲು ಹೀಗೆ ವಿಕೃತವಾದವುಗಳನ್ನು ನೋಡಿದರೆ ಅದು ಅಶುಭಸೂಚಕ. ಶ್ರೇಷ್ಠನಾದ, ಸುಲಕ್ಷಣಗಳಿಂದ

---

**28.2** 'ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।'
'ಅದೃಷ್ಟಾದಶ್ರುತಾದ್ಭಾವಾನ್ನ ಭಾವ ಉಪಜಾಯತೇ ।
ಇತಿ ಶ್ರುತಿಪುರಾಣೋಕ್ತೇಃ .......' (ಅನುವ್ಯಾಖ್ಯಾನ 3.2.1)

**28.3** ''ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ'' (ಬ್ರಹ್ಮಸೂತ್ರ 3.2.1)

ಕೂಡಿದ, ಸದಾಚಾರಿಯಾದ ವ್ಯಕ್ತಿಯನ್ನು ನೋಡಿದರೆ ಅದು ಶುಭಸೂಚಕ. ಅಥವಾ **"ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ"** ಎಂದು ಹೇಳಿದಂತೆ ಕಾಮ್ಯಕರ್ಮಗಳನ್ನು ಮಾಡುವಾಗ ಸ್ವಪ್ನದಲ್ಲಿ ಸುಮಂಗಲಸ್ತ್ರೀದರ್ಶನವಾದರೆ ಅದು ಶುಭಸೂಚಕ. ಹೀಗೆ ಶುಭ-ಅಶುಭಸೂಚನೆಗಳನ್ನು ತಿಳಿಸಿದ್ದಾರೆ. ಅದು ಈ ಜನ್ಮದಲ್ಲಿಯೇ ಆಗುವ ಶುಭ-ಅಶುಭಗಳಿಗೆ ಸೂಚಕವಾಗುತ್ತದೆ ಎನ್ನುವ ಕಾರಣಕ್ಕೆ ಅದರ ಸಂಬಂಧ ಈ ಜನ್ಮಕ್ಕೂ ಇದೆ.

**29. ಕೆಲವೊಮ್ಮೆ ಸ್ವಪ್ನದಲ್ಲಿ (ಕನಸಿನಲ್ಲಿ) ಅಶುಭಸೂಚನೆ ಬಂದರೆ ಏನು ಮಾಡಬೇಕು?**

ಅಶುಭಸೂಚಕವಾದ ಕನಸು (ಸ್ವಪ್ನ) ಬಿದ್ದರೆ ಬಹಳ ಗಾಬರಿಗೊಂಡು ದುಃಖಪಡಬೇಕಾಗಿಲ್ಲ. ಹಾಗಾದಲ್ಲಿ ಪ್ರಾತಃಕಾಲದಲ್ಲಿ ಗಜೇಂದ್ರಮೋಕ್ಷ-ವನ್ನು ಹೇಳಿಕೊಳ್ಳಬೇಕು.[1]

**"ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ"**

ಎಂದು ಹೇಳಿದಂತೆ ದುಃಸ್ವಪ್ನವನ್ನು ಕಳೆಯುವ (ಭಗವಂತನ) ವಿಷ್ಣುಸಹಸ್ರ ನಾಮಸ್ತೋತ್ರವನ್ನು ಪಾರಾಯಣ ಮಾಡಿದರೆ, ದುಃಸ್ವಪ್ನದಿಂದ ಬರುವ ಬಾಧೆ ಪರಿಹಾರವಾಗುತ್ತದೆ. ದುಃಸ್ವಪ್ನದಿಂದ ಏನೇ ಅಶುಭಸೂಚನೆ ಇದ್ದರೂ ಸಹ ಆ ಭಗವಂತನ ಆರಾಧನೆಯಿಂದ ಅದು ಪರಿಹಾರವಾಗುತ್ತದೆ.

---

29.1 "ಅಥಾನುಕೀರ್ತಯಂತ್ಯೇತಚ್ಛ್ರೇಯಸ್ಕಾಮಾ ದ್ವಿಜಾತಯಃ ।
ಶುಚಯಃ ಪ್ರಾತರುತ್ಥಾಯ **ದುಃಸ್ವಪ್ನಾದ್ಯುಪಶಾಂತಯೇ ॥"**

(ಭಾಗವತ ಸ್ಕಂ.8, ಅ-4, ಶ್ಲೋ.15)

"ಶ್ರೇಯಸ್ಕಾಮಾಃ ಪುರುಷಾರ್ಥಕಾಮಾಃ ದ್ವಿಜಾತಯೋ ಬ್ರಾಹ್ಮಣವರ್ಯಾಃ ಪ್ರಾತ-ರುತ್ಥಾಯ ಶುಚಯಃ ಸಂತೋ ದುಃಸ್ವಪ್ನಾದೀನಾಂ **ದುಃಸ್ವಪ್ನಪ್ರಭೃತ್ಯಪಾಯಾನಾಂ ಉಪ-ಶಾಂತಯೇ ನಾಶಾಯ** ಯಥಾವದ್ಭಕ್ತಿಪೂರ್ವಕಮಿತ್ಯರ್ಥಃ । **ಏತತ್ ಗಜೇಂದ್ರ-ಮೋಕ್ಷಣಸ್ತೋತ್ರಂ ಅನುಕೀರ್ತಯಂತಿ ॥"** (ಛಲಾರೀ ವ್ಯಾಖ್ಯಾನ)

"..... ಪ್ರಾತರುತ್ಥಾಯ ಶುಚಯ: ಶೌಚಾಚಮನಾದಿನಾ ನಿರ್ಮಲಾಃ ಸಂತೋ **ದುಃಸ್ವಪ್ನಾದ್ಯುಪಶಾಂತಯೇ** ಏತತ್ ಗಜೇಂದ್ರಮೋಕ್ಷಣರೂಪಂ ಹರಿಚರಿತಂ **ಅನುಕೀರ್ತಯಂತಿ** ಪಠಂತಿ ॥" (ಲಿಂಘೇರೀ ವ್ಯಾಖ್ಯಾನ)

**30. ದೇವರಲ್ಲಿ ವೈರಾಗ್ಯವನ್ನು ಬೇಡುವುದೆಂದರೆ ಏನರ್ಥ? ಕೇವಲ 'ಭೂಮಿ ಸಂಪತ್ತುಗಳನ್ನು ಬೇಡಬಾರದು' ಎಂದರ್ಥವೋ? ಅಥವಾ ಬೇರೆ ಏನಾದರೂ ಇದೆಯೇ?**

ದೇವರಲ್ಲಿ ವೈರಾಗ್ಯವನ್ನು ಬೇಡುವುದೆಂದರೆ ಕೇವಲ ಭೂಮಿ-ಸಂಪತ್ತು ಇವುಗಳನ್ನು ಬೇಡಬಾರದು ಎಂದಷ್ಟೇ ಅಲ್ಲ. ಕಿಂತು ''ಎಲ್ಲ ವಿಧ ವೈಷಯಿಕ ಸುಖಗಳಲ್ಲಿ ಆಸಕ್ತಿಯನ್ನು ಕಳೆದುಬಿಡು'' ಎಂದು ಪ್ರಾರ್ಥಿಸುವುದು.

ಅದು ಸಂಪತ್ತಾಗಿರಬಹುದು, ಭೂಮಿಯಿರಬಹುದು, ಕೇಳುವ ದುಷ್ಟಗೀತೆಗಳಿರಬಹುದು, ದಿನವಿಡೀ ನೋಡುವ ದುಷ್ಟ ಚಿತ್ರಗಳಿರಬಹುದು ಅಥವಾ ತಿನ್ನುವ ದುಷ್ಟ (ಅಭಕ್ಷ್ಯ) ಪದಾರ್ಥಗಳಿರಬಹುದು. ಅವುಗಳಲ್ಲಿ ಮನಸ್ಸು ಹೋಗದಂತೆ ಮಾಡು ಎಂಬುದಾಗಿ ಪ್ರಾರ್ಥಿಸಬೇಕು. ಪರಮ ವಿರಕ್ತಶಿಖಾಮಣಿಗಳಾದ ಶ್ರೀವಾದಿರಾಜಸ್ವಾಮಿಗಳೂ ಸಹ ತಮ್ಮ ಪ್ರಾರ್ಥನಾದಶಕಸ್ತೋತ್ರದಲ್ಲಿ (ಶ್ಲೋ.2)

**'ಅಯೋಗ್ಯವಿಷಯೇ ಸ್ವಾಮಿನ್ ಸರ್ವಥಾ ನ ಮನೋ ಭವೇತ್ ।**
**ಚಾಂಚಲ್ಯಂ ಮೂಲತಚ್ಛಿಂದಿ ದುರಾಶಾಂ ಹರ ದೂರತಃ ॥'**

ಎಂಬುದಾಗಿ ಇಂತಹ ವೈರಾಗ್ಯವನ್ನೇ ಪ್ರಾರ್ಥಿಸಿದ್ದಾರೆ. ವೈರಾಗ್ಯವನ್ನು ಬೇಡುವುದು ಎಂದರೇನು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಕೆಟ್ಟ ಕಥೆಗಳನ್ನು ಓದುವ, ದುಷ್ಟಚಿತ್ರಗಳನ್ನು ಹಾಗೂ ಪರಸ್ತ್ರೀಯರನ್ನು ನೋಡುವ, ಗೀತೆಗಳನ್ನು ಕೇಳುವ, ಹಬ್ಬ-ಹರಿದಿನಗಳನ್ನೂ ನೋಡದೇ ನಿಷಿದ್ಧ ಆಹಾರಗಳನ್ನು ತಿನ್ನುವ ಹವ್ಯಾಸ(ಚಟ)ಗಳಿರುತ್ತವೆ. ಈ ರೀತಿಯಾಗಿ ನಾನಾವಿಧ ಇಂದ್ರಿಯಗಳಿಂದ ಮಾಡುವ ಏನೇನು ಕೆಟ್ಟ ಕೆಲಸಗಳಿವೆ ಅವೆಲ್ಲವನ್ನು ಬಿಡುವುದೂ ವೈರಾಗ್ಯದಲ್ಲಿ ಸೇರುತ್ತದೆ. ಹೊರತು ಕೇವಲ ಬೆಳ್ಳಿ-ಬಂಗಾರ ಬಿಡುವುದಲ್ಲ.

ಗೃಹಸ್ಥನು ವೈರಾಗ್ಯದಿಂದಿರಬೇಕು ಎಂದರೆ ಏನರ್ಥ? ಎಲ್ಲ ಪದಾರ್ಥ-ಗಳನ್ನೂ ಬಿಡಬೇಕೆಂದಲ್ಲ. ಎಲ್ಲ ಪದಾರ್ಥಗಳನ್ನೂ ಬಿಡಲು ಸಾಧ್ಯವಿಲ್ಲದ ಕಾರಣ ''ಆ ನಾನಾವಿಧ ವೈಷಯಿಕ ಸುಖಗಳಲ್ಲಿ - ಪದಾರ್ಥಗಳಲ್ಲಿ ಅತಿಯಾದ ಆಸಕ್ತಿಯನ್ನು (ಮಮತೆಯನ್ನು) ಬಿಡಬೇಕು'' ಎಂದರ್ಥ. ಹೊರತು ಎಲ್ಲವನ್ನೂ ಬಿಟ್ಟು ಬೀದಿಗೆ ಇಳಿಯಬೇಕು ಎಂದರ್ಥವಲ್ಲ. ತಾನು

ಏನೇ ವಿಹಿತವಾದ ಭೋಗವನ್ನು ಮಾಡುತ್ತಿದ್ದರೂ ಅದು ಭಗವಂತನ ಆಜ್ಞೆ/ ಅನುಗ್ರಹ ಎಂದು ತಿಳಿದು ಭೋಗಮಾಡಿದರೂ, ಅವುಗಳಲ್ಲಿ ಅತಿಯಾದ ಮೋಹವನ್ನು ಬಿಡಬೇಕು. ''ಅವುಗಳನ್ನು ಸಂಪಾದನೆ ಮಾಡಿದರೇನೇ ಜೀವನದ ಕೃತಾರ್ಥತೆ. ಇದಕ್ಕೂ ಹೆಚ್ಚಿನದನ್ನು ನಾನು ಏನು ಮಾಡಬೇಕಿದೆ'' ಎನ್ನುವ ಭಾವನೆಯನ್ನು ಬಿಟ್ಟರೆ ಅದು ವೈರಾಗ್ಯ. ಅದನ್ನು ಪ್ರಾರ್ಥಿಸಬೇಕು.

**31. ಆರೋಗ್ಯಕ್ಕೆ ಹಾನಿಕರ ಎಂಬ ದೃಷ್ಟಿಯಲ್ಲಿ ಗುಟಕಾ ತಿನ್ನುವುದನ್ನು ಬಿಡಬಹುದು. ಆದರೆ 'ನ ಪಲಾಂಡುಂ ಭಕ್ಷಯೀತ' (ಈರುಳ್ಳಿ ತಿನ್ನಬಾರದು) ಎಂದು ನಿಷೇಧಿಸಿದಂತೆ 'ನ ಗುಟಕಾಂ ಭಕ್ಷಯೀತ' ಎಂಬುದಾಗಿ ಶಾಸ್ತ್ರವು ಗುಟಕಾವನ್ನು ಪ್ರತ್ಯೇಕವಾಗಿ ನಿಷೇಧಿಸಿದೆಯೇ?**

'ನ ಪಲಾಂಡುಂ ಭಕ್ಷಯೀತ' ಎಂಬುದಾಗಿ ಈರುಳ್ಳಿ(ಉಳ್ಳಾಗಡ್ಡಿ)ಯನ್ನು ಪ್ರತ್ಯೇಕವಾಗಿ ನಿಷೇಧಿಸಿದಂತೆ 'ನ ಗುಟಕಾಂ ಭಕ್ಷಯೀತ' (ಗುಟಕಾವನ್ನು ತಿನ್ನಬಾರದು) ಎಂದು ಶಾಸ್ತ್ರವು ಗುಟಕಾವನ್ನು ಪ್ರತ್ಯೇಕವಾಗಿ ನಿಷೇಧಿಸದಿದ್ದರೂ ಸಹ ಆರೋಗ್ಯಕ್ಕೆ ಹಾನಿಕರವಾದ, ಕಾಮಕ್ರೋಧಗಳನ್ನು ಉದ್ರೇಕಗೊಳಿಸುವ ಭೋಜ್ಯಗಳನ್ನು ಸಾಮಾನ್ಯವಾಗಿ ನಿಷೇಧಿಸಿದೆ.

**'ಶರೀರಮಾದ್ಯಂ ಖಲು ಧರ್ಮಸಾಧನಮ್'** ಎಂದು ಹೇಳಿದಂತೆ ಧರ್ಮಕ್ಕೆ ಸಾಧನವಾದದ್ದು ಶರೀರ. **'ಜೀವನ್ ಭದ್ರಾಣಿ ಪಶ್ಯತಿ'** ಎಂಬ ಉಕ್ತಿಯಂತೆ ಎಲ್ಲಿಯವರೆಗೆ ಬದುಕಿರುತ್ತಾನೆ ಅಲ್ಲಿಯವರೆಗೆ ಮಂಗಲ(ಆರೋಗ್ಯ)ವನ್ನು ಕಾಪಾಡಿಕೊಂಡು ಆಯುಷ್ಯವನ್ನು ಕಾಪಾಡಿಕೊಳ್ಳಬೇಕು ಎನ್ನುವುದು ಶಾಸ್ತ್ರವಿಹಿತ. ಅಂದಮೇಲೆ ಆರೋಗ್ಯಕ್ಕೆ ಹಾನಿಕರವಾಗುವ, ಶರೀರದಲ್ಲಿರುವ ವರ್ಚಸ್ಸನ್ನು ಹಾಳುಮಾಡಿ ಜೀವನವನ್ನು ಕೆಡಿಸುವ ಯಾವುದೇ ವ್ಯಸನ(ಚಟ)ಗಳಿದ್ದರೂ ಸಹ ಅವು ಶಾಸ್ತ್ರನಿಷಿದ್ಧವೇ. ಹೊರತು ಗುಟಕಾಭಕ್ಷಣ ನಿಷೇಧಕ್ಕಾಗಿ ಪ್ರತ್ಯೇಕವಾದ ವಾಕ್ಯ ಬೇಕಾಗಿಲ್ಲ.

ಈರುಳ್ಳಿ(ಉಳ್ಳಾಗಡ್ಡೆ)ಯನ್ನು ನಿಷೇಧಿಸಲು ಕಾರಣವೇನು? ಅದು ಕಾಮಕ್ರೋಧಗಳಿಗೆ ಉತ್ತೇಜಕ ಎನ್ನುವುದೇ ಕಾರಣ. ಅಂದಮೇಲೆ ಆರೋಗ್ಯವನ್ನು ಹಾಳುಮಾಡುವ, ಕಾಮಕ್ರೋಧಗಳನ್ನು ಉದ್ರೇಕ-ಗೊಳಿಸುವ ಎಲ್ಲ ವ್ಯಸನಗಳೂ ಶಾಸ್ತ್ರನಿಷಿದ್ಧವೇ. ಅದರಲ್ಲಿ 'ಈ ಗುಟಕಾ ತಿನ್ನುವುದೂ ಆರೋಗ್ಯಕ್ಕೆ ಹಾನಿಕರ' ಎಂಬುದಾಗಿ ಸ್ಪಷ್ಟವಾಗಿ ಪೂರ್ಣವಾಗಿ ಸಾಬೀತಾದ ಮೇಲೆ ಅದು ಶಾಸ್ತ್ರನಿಷಿದ್ಧವೇ.

**32. ಮುಂದಿನ ಜನ್ಮದಲ್ಲಿ ಮನುಷ್ಯರಾಗಿಯೇ ಹುಟ್ಟುತ್ತೇವೆ ಎಂಬ ನಿರ್ಧಾರ ಇಲ್ಲದಿದ್ದ ಮೇಲೆ, ಇಂದಿನ ಕರ್ಮಗಳ ಫಲವನ್ನು ಜನ್ಮಾಂತರದಲ್ಲಿ ಅನುಭವಿಸುತ್ತೇವೆ ಎಂದು ಹೇಳುವುದು ಹೇಗೆ?**

ಮುಂದಿನ ಜನ್ಮವೇ ಮನುಷ್ಯಜನ್ಮ ಆಗಬೇಕಿಲ್ಲ. ಮುಂದೆ ಬರುವ ಅನೇಕ ಜನ್ಮಗಳಲ್ಲಿ ಯಾವಾಗ ಮನುಷ್ಯಜನ್ಮ ಬರುತ್ತದೆಯೋ ಆವಾಗ ಆ ಜನ್ಮದಲ್ಲಿ ಅನುಭವಿಸಬೇಕಾದ ಕರ್ಮಫಲಗಳನ್ನು ಅನುಭವಿಸುವುದು. ಇಲ್ಲದಿದ್ದರೆ ಇನ್ನಿತರ ನೀಚಯೋನಿಗಳಲ್ಲಿಯೂ ಸುಖದ ಭೋಗವನ್ನು ಮಾಡಲು ಬಂದೇ ಬರುತ್ತದೆ. ಆಹಾರ-ನಿದ್ರೆ ಮೊದಲಾದ ನಾನಾವಿಧಗ್ರಾಮ್ಯ ಸುಖಗಳನ್ನು ಆ ನೀಚಯೋನಿಗಳಲ್ಲಿಯೂ ಜೀವನು ಅನುಭವಿಸುತ್ತಾನೆ. ಅದರಂತೆ ದುಃಖಗಳನ್ನೂ ಅನುಭವಿಸುತ್ತಾನೆ.

ಮನುಷ್ಯದೇಹದಿಂದಲೇ ಅನುಭವಿಸಬೇಕಾದ ಸುಖ-ದುಃಖಗಳಿದ್ದರೆ ಮನುಷ್ಯಜನ್ಮ ಬರುವವರೆಗೆ ಕಾಯಬೇಕು. ಬೇರೆ ಉಪಾಯವಲ್ಲ. ಮುಂದೆ ಮನುಷ್ಯಜನ್ಮ ಬರುವುದೇ ಇಲ್ಲ ಎಂದು ಹೇಳಲಾಗುವುದಿಲ್ಲ.

**33. ಪರಮಾತ್ಮನಿಂದಲೇ ಜೀವರಿಗೆ ಎಲ್ಲ ಅವಯವಗಳು ಹುಟ್ಟಿರುವಾಗ ಕಣ್ಣು-ಬಾಯಿಗಳಿಗೆ ಪ್ರಾಶಸ್ತ್ಯವೇಕೆ? ಕಾಲುಗಳಿಗೆ ತಿರಸ್ಕಾರವೇಕೆ?**

ದೇವರಿಂದ ಅರ್ಥಾತ್ ಒಂದೇ ವಸ್ತುವಿನಿಂದ ಹುಟ್ಟಿದ ಮಾತ್ರಕ್ಕೆ ತಾರತಮ್ಯ ಇಲ್ಲ ಎಂದಲ್ಲ. ಜಗತ್ತಿನಲ್ಲಿ ಎಲ್ಲ ವಸ್ತುಗಳೂ ದೇವರಿಂದಲೇ ಹುಟ್ಟಿವೆ. ಅಂದಮಾತ್ರಕ್ಕೆ ಅವುಗಳಲ್ಲಿ ತಾರತಮ್ಯವಿಲ್ಲವೇ?

ಒಬ್ಬನೇ ವ್ಯಕ್ತಿ ಎಲ್ಲವನ್ನೂ ಹುಟ್ಟಿಸಿದ ಮಾತ್ರಕ್ಕೆ ತಾರತಮ್ಯವಿಲ್ಲ ಎನ್ನಲು ಬರುವುದಿಲ್ಲ. ಒಂದೇ ಆಕಳು ಹಾಲನ್ನು ಹುಟ್ಟಿಸುತ್ತದೆ, ಗೋಮೂತ್ರವನ್ನು ಗೋಮಯವನ್ನೂ ಹುಟ್ಟಿಸುತ್ತದೆ. ಹಾಲನ್ನು ಕಾಯಿಸಿ ಆನಂದದಿಂದ ಕುಡಿಯುವಂತೆ, ಗೋಮೂತ್ರವು ಪವಿತ್ರವಾದ ವಸ್ತುವಾದರೂ ಹಾಲಿನಂತೆ ಗೋಮೂತ್ರವನ್ನು ಕಾಯಿಸಿ ಆನಂದದಿಂದ ಏಕೆ ಕುಡಿಯುವುದಿಲ್ಲ? ಕಾಶಿಯಲ್ಲಿರುವ ಮೊಸರು ಭಾರಿ ಉತ್ತಮ ಎಂದು ಮೊಸರನ್ನು ಕತ್ತರಿಸಿ ತಿನ್ನುವಂತೆ ಗೋಮಯವು ಪವಿತ್ರವಾದ ವಸ್ತುವಾದರೂ ಮೊಸರಿನಂತೆ ಗೋಮಯವನ್ನು (ಸಗಣಿಯನ್ನು) ಕತ್ತರಿಸಿ ಏಕೆ ತಿನ್ನುವುದಿಲ್ಲ? ಎಲ್ಲವೂ ಗೋವಿನಿಂದಲೇ ಹುಟ್ಟಿದ್ದಲ್ಲವೇ?

ಅಂದಮೇಲೆ ಒಂದೇ ವಸ್ತುವಿನಿಂದ ಹುಟ್ಟಿದ ಮಾತ್ರಕ್ಕೆ ತಾರತಮ್ಯ ಇಲ್ಲ ಎಂದಲ್ಲ. ತಾರತಮ್ಯ ಇದ್ದೇ ಇರುತ್ತದೆ. ಆದರೆ ವ್ಯತ್ಯಾಸ ಇಷ್ಟೇ. ಗೋವಿನ ಆ ಸೃಷ್ಟಿ ಬುದ್ಧಿಪೂರ್ವಕವಲ್ಲ. ಅದು ನಿಸರ್ಗ. ಆದರೆ ಭಗವಂತನ ಸೃಷ್ಟಿ ಹಾಗಲ್ಲ. ಅದು ಬುದ್ಧಿಪೂರ್ವಕ. ಆ ಆ ವಸ್ತುಗಳನ್ನು ಹುಟ್ಟಿಸುವಾಗ ''ಇದು ಉತ್ತಮವಸ್ತು, ಇದು ಮಧ್ಯಮ, ಇದು ಅಧಮ. ಇವು ಹೀಗಾಗಲಿ'' ಎಂಬ ಬುದ್ಧಿಯಿಂದಲೇ ಭಗವಂತ ಅವುಗಳನ್ನು ಸೃಷ್ಟಿಸಿರುತ್ತಾನೆ. ಆದ್ದರಿಂದಲೇ ಅವುಗಳಲ್ಲಿ (ಅಂಗಾಂಗಗಳಲ್ಲಿ, ಕಣ್ಣು-ಮಣ್ಣುಗಳಲ್ಲಿ ಹೀಗೆ ಎಲ್ಲ ವಸ್ತುಗಳಲ್ಲಿಯೂ) ತಾರತಮ್ಯ ಇದ್ದೇ ಇರುತ್ತದೆ. ತಾರತಮ್ಯವಿಲ್ಲದೇ ಯಾವ ವಸ್ತುವೂ ಇಲ್ಲ.

**34. ದೇವಸ್ಥಾನಗಳಿಗೆ ಹೋದಾಗ ಘಂಟೆಯನ್ನು ಏಕೆ ಬಾರಿಸಬೇಕು? ಅದರ ಉದ್ದೇಶವೇನು?**

ಇದಕ್ಕೆ ಎರಡು-ಮೂರು ರೀತಿಗಳಿಂದ ಉತ್ತರವನ್ನು ತಿಳಿಯಬೇಕು.

1. ಮೊದಲನೆಯದಾಗಿ, ಘಂಟಾನಾದದಿಂದ ಅನೇಕ ದುಷ್ಟಶಕ್ತಿಗಳ ನಿಗ್ರಹವಾಗುತ್ತದೆ ಎಂದಿದ್ದಾರೆ. ಭೂತಪ್ರೇತಾದಿಗಳ ನಿವಾರಣೆ-ಯಾಗುತ್ತದೆ. ಹಾಗೂ ದೇವತೆಗಳ ಆಗಮನವಾಗುತ್ತದೆ ಎಂದು ಹೇಳಿದ್ದಾರೆ.[1] ಈ ದೃಷ್ಟಿಯಿಂದ ಘಂಟಾನಾದವು ಆವಶ್ಯಕ.
2. ಎರಡನೆಯದಾಗಿ, ಲೌಕಿಕವಾದ ಕಾರಣವೆಂದರೆ - ಹಳೆಯ ಕಾಲದ ದೇವಸ್ಥಾನಗಳಲ್ಲಿ ಹಾವು-ಚೇಳು ಮುಂತಾದ ದುಷ್ಟಜಂತುಗಳಿದ್ದರೆ ಅವು ಘಂಟಾನಾದದಿಂದ ಸರಿದು ಹೋಗಲಿ ಎಂಬ ದೃಷ್ಟಿಯಿಂದ ಘಂಟೆಯನ್ನು ಬಾರಿಸುವುದು.

---

34.1 ''ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥
ಅಜ್ಞಾನಾತ್ ಜ್ಞಾನತೋ ವಾಽಪಿ ಕಾಂಸ್ಯಘಂಟಾಂ ನ ವಾದಯೇತ್ ।
ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ ।
ತಸ್ಮಾತ್ ಸರ್ವಪ್ರಯತ್ನೇನ ಘಂಟಾಮಾಚಾಲ್ಯ ವಾದಯೇತ್ ॥
॥ ನ ವಾದಯೇದಿತ್ಯತಃ ಪೂರ್ವಂ ಯದೀತಿ ಶೇಷಃ ॥''

(ಪೂಜಾಕಲ್ಪಲತಾ - ಮಹಾಪೂಜಾ)
(ಶೇಷಾಚಾರ್ಯಸೂನು ಜಯರಾಮಾಚಾರ್ಯ ವಿರಚಿತ)

3. ಮೂರನೆಯದಾಗಿ, ಘಂಟಾನಾದದ ವಾಸ್ತವ ಉದ್ದೇಶವನ್ನು ಐತರೇಯ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಮಾತ್ರ ತಿಳಿಸಿದ್ದಾರೆ.[2]

**''ತದಪೇಕ್ಷಯಾಽನ್ಯನೀಚತ್ವಂ ಘಂಟಾದ್ಯಾಃ ಸ್ವರಿತಾತ್ಮಕಾಃ ।''**

ಘಂಟೆಯನ್ನು ಏಕೆ ಬಾರಿಸಬೇಕು? ಅದರ ಉದ್ದೇಶವೇನು? ಎಂದರೆ ಆಚಾರ್ಯರು ಅದರ ಉದ್ದೇಶವನ್ನು ವಿವರಿಸುತ್ತಾರೆ. ''ಯಾವ ಪರಮಾತ್ಮನ ಎದುರು ನಾವು ಘಂಟೆಯನ್ನು ಬಾರಿಸುತ್ತೇವೆ ಆ ಪರಮಾತ್ಮನಿಗಿಂತಲೂ ಇನ್ನಿತರ ಎಲ್ಲ ಜೀವರೂ ಸಹ ನೀಚರಾಗಿದ್ದಾರೆ. ಅವನ ಅಧೀನರಾಗಿದ್ದಾರೆ. ಪರಮಾತ್ಮನು ಸರ್ವೋತ್ತಮನಾಗಿದ್ದಾನೆ'' ಎಂಬುದನ್ನು ತೋರಿಸಿ-ಕೊಡುವುದಕ್ಕಾಗಿ ವಿಜಯದ ಘಂಟೆ ಅದು.

ಘಂಟೆಯನ್ನು ಯಾರಿಗೆ ಬೇಕಾದವರಿಗೂ ಬಾರಿಸುವ ಅಧಿಕಾರವಿಲ್ಲ. ಘಂಟಾನಾದದಿಂದ ಪರಮಾತ್ಮನು ಮಾತ್ರ ಪ್ರತಿಪಾದ್ಯನಾದ್ದರಿಂದ ಪರಮಾತ್ಮನಿಗೆ ಘಂಟೆಯನ್ನು ಬಾರಿಸಬೇಕು. ಇತರ ದೇವತೆಗಳು ಘಂಟಾನಾದದಿಂದ ಪ್ರತಿಪಾದ್ಯರಾಗಿಲ್ಲ. ಆದ್ದರಿಂದ ಲಕ್ಷ್ಮೀದೇವಿ, ಪ್ರಾಣದೇವರು, ರುದ್ರ, ಗಣಪತಿ ಮೊದಲಾದ ಇತರ ದೇವತೆಗಳಿಗೆ ಬಾರಿಸಿದರೂ ಅವರಲ್ಲಿ ಅಂತರ್ಯಾಮಿಯಾದ ಭಗವಂತನ ವಿವಕ್ಷೆಯಿಂದಲೇ ಬಾರಿಸಬೇಕು. ಅಥವಾ 'ಅವರಿಗಿಂತ ಅಧಮ-ರಾದವರಿಗಿಂತಲೂ ಅವರು ಉತ್ತಮರಾಗಿದ್ದಾರೆ' ಎಂಬ ದೃಷ್ಟಿಯಿಂದ ಬಾರಿಸಬೇಕು. ಹೊರತು ಇವರೇ ಸರ್ವೋತ್ತಮರು ಎಂದು ತಿಳಿದು ಬಾರಿಸಬಾರದು.

ಇದಕ್ಕೊಂದು ಲೌಕಿಕ ಉದಾಹರಣೆ ನೀಡಬೇಕೆಂದರೆ - ಒಂದು ಸಭೆಗೆ ಅಥವಾ ಒಂದು ಕಾರ್ಯಕ್ರಮಕ್ಕೆ ಒಬ್ಬ ಸಾಧಾರಣವ್ಯಕ್ತಿ ಬರುವಾಗ ಶಬ್ದ ಮಾಡದೇ ಸುಮ್ಮನೆ ಬಂದು ಕುಳಿತರೆ ಅದು ಚಂದ. ಆದರೆ ಬರುವಾಗ ಜೋರಾಗಿ ಶಬ್ದ ಮಾಡುತ್ತಾ ಬಂದರೆ, ಹೀಗೇಕೆ ಮಾಡಿದೆ? ಎಂಬುದಾಗಿ ಇದ್ದವರೆಲ್ಲ ಎದ್ದು ಬೈಯುತ್ತಾರೆ. ಆದರೆ ಎಷ್ಟೇ ಜನ ಕುಳಿತಿರಲಿ, ಏನೇ ಸಭೆ (ಕಾರ್ಯಕ್ರಮ) ನಡೆದಿರಲಿ ಒಬ್ಬ ದೊಡ್ಡ ಮಂತ್ರಿ ಅಥವಾ ರಾಜನು ಬರಬೇಕಾದರೆ ಎಷ್ಟೆಲ್ಲ ಶಬ್ದ ಮಾಡಿಕೊಂಡು ಬರುತ್ತಾರಲ್ಲವೇ! ಅದರ ಉದ್ದೇಶವೇನು? ''ಬರುತ್ತಿರುವ ನಾನು ದೊಡ್ಡ ವ್ಯಕ್ತಿ. ಕುಳಿತಿರುವ ನೀವು ಸಣ್ಣವರು'' ಎಂಬುದನ್ನು ತೋರಿಸುವುದಕ್ಕಾಗಿಯೇ ಆ ರೀತಿ ಶಬ್ದ ಮಾಡಿಕೊಂಡು ಬರುವುದು. ಆದರೆ ಶಬ್ದದ ಆ ಅರ್ಥ ಅವರಲ್ಲಿ ಎಷ್ಟು

34.2 (ಐತರೇಯಭಾಷ್ಯ ಪ್ರಘ-2, ಅಧ್ಯಾಯ-1, ಬ್ರಾಹ್ಮಣ-2, ಮಂತ್ರ-11)

ಪ್ರಾಮಾಣಿಕವೋ? ಅಪ್ರಾಮಾಣಿಕವೋ? ಅದು ಬೇರೆ. ಅಂದಮೇಲೆ ಕುಳಿತ ವ್ಯಕ್ತಿಗಳಿಗಿಂತ ನಾನು ದೊಡ್ಡವ ಎಂಬುದನ್ನು ತೋರಿಸುವ ಸಾಮರ್ಥ್ಯ ಇದ್ದರೆ ಮಾತ್ರ ಆ ರೀತಿ ಶಬ್ದ ಮಾಡುತ್ತಾ ಬರಬೇಕು. ಅಂತಹ ಸಾಮರ್ಥ್ಯ ಇಲ್ಲದಿದ್ದರೆ ಸುಮ್ಮನೆ ಬರಬೇಕು.

ದೊಡ್ಡ ಅಧಿಕಾರವಿದ್ದು, ಇದ್ದ ಅಧಿಕಾರವನ್ನು ತೋರಿಸುವುದಕ್ಕಾಗಿ ಕೆಲವರು ಶಬ್ದ ಮಾಡಿಕೊಂಡು ಬರುತ್ತಾರೆ. ಅಧಿಕಾರವಿಲ್ಲದಿದ್ದರೂ ಕೆಲವರು ಹಾಗೆ ಬರುತ್ತಾರೆ. ಆದರೆ ಯಾವಾಗಲೂ ಅನಾದಿಕಾಲದಿಂದ ಅನಂತಕಾಲ-ದವರೆಗೆ ಯಾವುದೇ ದೇಶದಲ್ಲಿ ಯಾವುದೇ ಕಾಲದಲ್ಲಿ ಯಾವುದೇ ವ್ಯಕ್ತಿಗಳ ಮಧ್ಯದಲ್ಲಿ ಕೂಡ ಧೈರ್ಯದಿಂದ ಘಂಟೆಯನ್ನು ಬಾರಿಸುತ್ತಾ ಬರುವ, ಸರ್ವೋತ್ತಮನಾದ ಏಕೈಕ ವ್ಯಕ್ತಿ ಎಂದರೆ ಅದು ಭಗವಂತನು ಮಾತ್ರ. ಹೀಗಾಗಿ 'ಆ ಘಂಟಾನಾದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ನಾರಾಯಣ ಮಾತ್ರ' ಎಂಬುದನ್ನು ತೋರಿಸುವುದಕ್ಕಾಗಿ, ಪರಮಾತ್ಮನ ಸರ್ವೋತ್ತಮತ್ವವನ್ನು ತಿಳಿಸುವುದಕ್ಕಾಗಿ ಘಂಟಾನಾದವನ್ನು ಮಾಡಬೇಕು ಎಂಬುದಾಗಿ ಶ್ರೀಮದಾಚಾರ್ಯರು ಐತರೇಯಭಾಷ್ಯದಲ್ಲಿ ತಿಳಿಸಿದ್ದಾರೆ.

**35. ''ರಕ್ತಸಂಬಂಧಿಗಳಲ್ಲಿ ವಿವಾಹವಾದರೆ ಹುಟ್ಟುವ ಮಕ್ಕಳಲ್ಲಿ ಅಂಗವಿಕಲತೆ ಬರುವ ಸಾಧ್ಯತೆ ಹೆಚ್ಚಾಗಿದೆ'' ಎಂದು ವಿಜ್ಞಾನಿಗಳು ಹೇಳುತ್ತಾರೆ. ಇದಕ್ಕೆ ಶಾಸ್ತ್ರವು ಏನು ಹೇಳುತ್ತದೆ?**

ಇದಕ್ಕೆ ಶಾಸ್ತ್ರದ ಸಮ್ಮತಿಯೂ ಇದೆ. ಬಹಳ ರಕ್ತಸಂಬಂಧ ಇದ್ದಲ್ಲಿ ವಿವಾಹ ಮಾಡಬಾರದು ಎನ್ನುವುದಕ್ಕಾಗಿಯೇ ಶಾಸ್ತ್ರದಲ್ಲಿ ಸಗೋತ್ರವಿವಾಹವನ್ನು ನಿಷೇಧ ಮಾಡಿದ್ದಾರೆ.[1] ಅದಕ್ಕೋಸ್ಕರವಾಗಿಯೇ ಜಾತಕ ಇತ್ಯಾದಿಗಳನ್ನು

35.1 ''ಸಮಾನಪ್ರವರಾಂ ಕನ್ಯಾಮೇಕಗೋತ್ರಾಮಥಾಪಿ ವಾ ।
ವಿವಾಹಯತಿ ಯೋ ಮೂಢಸ್ತಸ್ಯ ವಕ್ಷ್ಯಾಮಿ ನಿಷ್ಕೃತಿಮ್ ॥
ಕಾಮತೋ ವಾ ಸಗೋತ್ರಾಯಾಂ ಜನಿತೋ ಜ್ಞಾನತೋ ಹಿ ಯಃ ।
ತಂ ಚಂಡಾಲೇಷು ನಿಕ್ಷಿಪ್ಯ ಗುರುತಲ್ಪವ್ರತಂ ಚರೇತ್ ॥
ಆಪಸ್ತಂಬಃ -
ಪರಿಣೀಯ ಸಗೋತ್ರಾಂ ತು ಸಮಾನಪ್ರವರಾಂ ತಥಾ ।
ತ್ಯಾಗಂ ಕೃತ್ವಾ ದ್ವಿಜಸ್ತಸ್ಯಾಸ್ತ್ವಬ್ದಕೃಚ್ಛ್ರವ್ರತಂ ಚರೇತ್ ॥
ಪ್ರಜಾಮುತ್ಪಾದಯೇದ್ಯಸ್ತು ಚಾಂದ್ರಾಯಣಮಥಾಚರೇತ್ ।
ವಿವಾಹಮಾತ್ರೇ ಕೃಚ್ಛ್ರಂ ಸ್ಯಾದಪತ್ಯೇ ನೈವ ನಿಷ್ಕೃತಿಃ ॥
ಉತ್ಸೃಜ್ಯ ತಾಂ ತತೋ ಭಾರ್ಯಾಂ ಮಾತೃವತ್ಪರಿಪಾಲಯೇತ್ ।
ಭೋಗತಸ್ತು ಪರಿತ್ಯಜ್ಯ ಪಾಲಯೇಜ್ಜನನೀಮಿವ ॥
ವ್ರತಾಂತೇ ವಿಧಿನಾ ವಹ್ನೌ ಮಿಂದಾಹೋಮೌ ಸಮಾಚರೇತ್ ॥'' (ಸ್ಮೃತಿರತ್ನಾಕರಃ)

ಸರಿಯಾಗಿ ನೋಡಿ, ಗೋತ್ರ ಬಿಟ್ಟಮೇಲೆ, ನಾನಾವಿಧ ಸಾಮ್ಯ ಬಂದಾಗ ಮಾತ್ರ ವಿವಾಹ ಮಾಡಬೇಕು. ಇಲ್ಲದಿದ್ದರೆ ವಿವಾಹ ಮಾಡಬಾರದು ಎನ್ನುವುದರ ಹಿನ್ನಲೆಯಲ್ಲಿ ಈ ಕಾರಣವೂ ಒಂದು ಸೇರಿದೆ.

**36. ವೈಷ್ಣವರು ಕೇದಾರಕ್ಕೆ ಹೋಗಬಾರದು ಎಂದಿದೆ. ಅದಕ್ಕೆ ಕಾರಣವೇನು? ಅದರ ಹಿನ್ನಲೆಯಲ್ಲಿ ದ್ವೇಷ ಇರಬಹುದೇ?**

**'ವೈಷ್ಣವಾನಾಂ ಯಥಾ ಶಂಭುಃ'** ಎಂದು ಭಾಗವತ ಹೇಳುತ್ತದೆ. ಎಲ್ಲ ಪುರಾಣಗಳಲ್ಲಿಯೂ ಪ್ರಾಯಃ ಈ ಮಾತು ಬರುತ್ತದೆ. ರುದ್ರದೇವರು ವೈಷ್ಣವರಿಗೆ ಪರಮಪೂಜ್ಯರಾಗಿದ್ದಾರೆ. ವೈಷ್ಣವರಿಂದ ಪೂಜ್ಯರಾದವರು, ವೈಷ್ಣವರಲ್ಲಿ ಅಗ್ರೇಸರರಾದವರು ಎಂದರೆ ವಾಯುದೇವರ ನಂತರ ರುದ್ರದೇವರೇ ಆಗಿದ್ದಾರೆ ಎಂಬ ದೃಢವಾದ ನಂಬಿಕೆ ವೈಷ್ಣವರಲ್ಲಿ ಇದೆ[1]. ಆದ್ದರಂದ ರುದ್ರದೇವರ ಪೂಜೆ, ಉಪಾಸನೆ, ಮಂತ್ರಜಪ ಎಲ್ಲವನ್ನೂ ಅವಶ್ಯವಾಗಿ ವೈಷ್ಣವರು ಮಾಡಲೇಬೇಕು. ರುದ್ರದೇವರಲ್ಲಿ ಭಕ್ತಿಯನ್ನು ಮಾಡಲೇಬೇಕು. ಅಂತೆಯೇ ಪ್ರಾಚೀನವಾದ ರಾಮೇಶ್ವರ, ವೃದ್ಧಾಚಲ ಮೊದಲಾದ ರುದ್ರದೇವರ ದೇವಸ್ಥಾನಗಳಿಗೆ ಹೋಗಿ ರುದ್ರದೇವರ ದರ್ಶನವನ್ನೂ ಮಾಡಿಕೊಳ್ಳಬೇಕು. ಕೇದಾರಕ್ಕೆ ಮಾತ್ರ ವೈಷ್ಣವರು ಹೋಗಬಾರದು ಎಂದಿದೆ.

ರುದ್ರದೇವರು ಬ್ರಾಹ್ಮಣರೂಪದಲ್ಲಿ ಬಂದು ಭೀಮಸೇನದೇವರ ಜೊತೆಗೆ ವಾಗ್ವಿವಾದವನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಭೀಮಸೇನದೇವರಿಂದ ಪರಾಜಿತರಾದಾಗ **"ತತಃ ಪರಂ ವೇದವಿದಾಮಗಮ್ಯತಾಶಾಪಂ ಪ್ರಾದಾತ್"** "ವೈಷ್ಣವರು ಇನ್ನೆಲ್ಲ ಕ್ಷೇತ್ರಗಳಲ್ಲಿ ನನ್ನ ದರ್ಶನ ಮಾಡಿಕೊಂಡರೂ ಕೇದಾರದಲ್ಲಿ ಮಾತ್ರ ನನ್ನ ದರ್ಶನ ಮಾಡಿಕೊಳ್ಳಬಾರದು" ಎಂಬುದಾಗಿ

---

36.1 "ಚಂದ್ರ ಚೂಡ ಶಿವಶಂಕರ
ಪಾರ್ವತಿ ರಮಣಾ ನಿನಗೆ ನಮೋ ನಮೋ ॥
ಕರಳೊಳು ರುದ್ರಾಕ್ಷಿ ಭಸ್ಮವ
ಧರಿಸಿದ ಪರಮವೈಷ್ಣವನು ನೀನೇ ॥" (ಪುರಂದರದಾಸರು)

**'ಯಥಾ ಶಂಭುಃ ವೈಷ್ಣವೇಷು ಯಥಾ ದೇವೇಷು ಮಾಧವಃ ।'**
(ಬ್ರಹ್ಮವೈವರ್ತ ಪ್ರ.ಖಂಡ ಅ-57, ಶ್ಲೋ-62)

ರುದ್ರದೇವರೇ ಆಜ್ಞೆ ಮಾಡುತ್ತಾರೆ. ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಅದನ್ನು ಕಾಣುತ್ತೇವೆ.[2] ಆದ್ದರಿಂದ ಈ ರೀತಿಯಾಗಿ ರುದ್ರದೇವರದೇ ಆಜ್ಞೆ ಇರುವುದರಿಂದ ವೈಷ್ಣವರು ಕೇದಾರಕ್ಕೆ ಹೋಗುವ ಪದ್ಧತಿ ಇಲ್ಲ. ಹೊರತು ವೈಷ್ಣವರು ಬದರೀನಾರಾಯಣನಲ್ಲಿ ಮಾತ್ರ ಭಕ್ತಿ ಮಾಡಿ ಕೇದಾರನಾಥನಲ್ಲಿ ದ್ವೇಷದಿಂದ ಅಲ್ಲಿಗೆ ಹೋಗುವುದಿಲ್ಲ ಎಂದು ಸರ್ವಥಾ ತಿಳಿಯಬಾರದು.

ವೈಷ್ಣವರಿಗೆ ರುದ್ರದೇವರಲ್ಲಿ ಭಕ್ತಿ ಇರುವುದಕ್ಕಾಗಿಯೇ ರಾಮೇಶ್ವರ-ವೃದ್ಧಾಚಲ ಮೊದಲಾದ ಕ್ಷೇತ್ರಗಳಿಗೆ ಹೋಗಿ ರುದ್ರದೇವರ ದರ್ಶನ ಪಡೆಯುತ್ತಾರೆ. ''ವೈಷ್ಣವರು ಬರಬಾರದು'' ಎಂದು ರುದ್ರದೇವರದೇ ಆಜ್ಞೆ ಇರುವುದರಿಂದ ರುದ್ರದೇವರ ಆ ಆಜ್ಞಾಪರಿಪಾಲನಾದೃಷ್ಟಿಯಿಂದ ಮಾತ್ರ ವೈಷ್ಣವರು ಕೇದಾರಕ್ಕೆ ಹೋಗುವುದಿಲ್ಲ.

**37. 'ಅಪುತ್ರಸ್ಯ ಗತಿರ್ನಾಸ್ತಿ' (ಗರುಡಪುರಾಣ ಅ-2 ಶ್ಲೋ.4) ಎಂದು ಹೇಳಿದ್ದರಿಂದ ಪುತ್ರನನ್ನು ಪಡೆಯದ ವ್ಯಕ್ತಿಗೆ (ಅಂದರೆ ಮಕ್ಕಳಿಲ್ಲದ ಗೃಹಸ್ಥಾಶ್ರಮಿಗೆ ಅಥವಾ ಜೀವನಪೂರ್ತಿ ಬ್ರಹ್ಮಚಾರಿಯಾಗಿಯೇ ಇರುವ ವ್ಯಕ್ತಿಗೆ) ಸದ್ಗತಿ ಇಲ್ಲವೇ?**

'ಪುತ್ರ ಇಲ್ಲದವನಿಗೆ ಸದ್ಗತಿ ಇಲ್ಲ' ಎನ್ನುವುದು ಸಾಮಾನ್ಯವಾದ ನಿಯಮ-ವಾದರೂ ಶ್ರೀಮದಾಚಾರ್ಯರು ಚತುರ್ಥಸ್ಕಂಧ ಭಾಗವತ ತಾತ್ಪರ್ಯದಲ್ಲಿ ಇದಕ್ಕೆ ನಿರ್ಣಯ ಕೊಟ್ಟಿದ್ದಾರೆ.

**''ಅನಪತ್ಯೋಽಪಿ ಸದ್ಧರ್ಮಾ ಲೋಕಜಿನ್ನಾತ್ರ ಸಂಶಯಃ ।''**

''ಮಕ್ಕಳನ್ನು ಪಡೆಯದಿದ್ದರೂ ಸಹ ತಮ್ಮ ವರ್ಣ-ಆಶ್ರಮಗಳಿಗೆ ಉಚಿತವಾದ ಸತ್ಕರ್ಮಗಳನ್ನು (ಶ್ರೇಷ್ಠವಾದ ಧರ್ಮಗಳನ್ನು)

---

36.2 ''ಮಯಾ ಕೇದಾರೇ ವಿಪ್ರರೂಪೀ ಜಿತಶ್ಚ
ರುದ್ರೋಽವಿಶಾಲ್ಲಿಂಗಮೇವಾಶು ಭೀತಃ ।
ತತಃ ಪರಂ ವೇದವಿದಾಮಗಮ್ಯತಾ-
ಶಾಪಂ ಪ್ರಾದಾಚ್ಛಂಕರೋ ವ್ರೀಡಿತೋಽತ್ರ ॥''
(ಮಹಾಭಾರತ ತಾತ್ಪರ್ಯ ನಿರ್ಣಯ ಅ-20, ಶ್ಲೋ.24)

ಆಚರಿಸುತ್ತಿದ್ದರೆ, ಉತ್ತಮವಾದ ಜ್ಞಾನವನ್ನು ಸಂಪಾದಿಸಿದ್ದರೆ ಅವನಿಗೆ ಸದ್ಗತಿ ಆಗೇ ಆಗುತ್ತದೆ. ಅದರಲ್ಲಿ ಸಂಶಯ ಬೇಡ'' ಎಂದು ತಿಳಿಸಿದ್ದಾರೆ.[1]

ಅಂದಮೇಲೆ 'ಮಕ್ಕಳಿಲ್ಲ ಎಂಬ ಕಾರಣಕ್ಕೆ ಏನು ಮಾಡಿದರೂ ವ್ಯರ್ಥ. ಅವನಿಗೆ ದುರ್ಗತಿಯಾಗುತ್ತದೆ' ಎಂಬ ತಿಳುವಳಿಕೆ ತಪ್ಪು.

ಯಾರು ಗೃಹಸ್ಥಾಶ್ರಮದಿಂದ ಇದ್ದು ಮಕ್ಕಳನ್ನು ಪಡೆದು ಆ ಮಕ್ಕಳಿಂದ ಶ್ರಾದ್ಧಾದಿಗಳನ್ನು ಮಾಡಿಸಿಕೊಳ್ಳುತ್ತಾರೆ ಅವರಿಗೆ ಸದ್ಗತಿಯಾಗುತ್ತದೆ ಎನ್ನುವುದೂ ಸರಿಯೇ. ಆದರೆ ಅದು ಇಲ್ಲ ಎಂದ ಮಾತ್ರಕ್ಕೆ ಬೇರೆ ಮಾರ್ಗವೇ ಇಲ್ಲ ಎಂದು ತಿಳಿಯಬಾರದು. ಮಕ್ಕಳನ್ನು ಪಡೆಯದಿದ್ದರೂ ಸತ್ಕರ್ಮಾನುಷ್ಠಾನದಿಂದ, ಜ್ಞಾನಪ್ರಾಪ್ತಿಯಿಂದ ಸದ್ಗತಿ ಆಗುತ್ತದೆ ಎಂದು ಶ್ರೀಮದಾಚಾರ್ಯರು ತಿಳಿಸಿಕೊಟ್ಟಿದ್ದಾರೆ.[2]

---

37.1 ''ಅನಪತ್ಯೋಽಪಿ ಸದ್ಧರ್ಮಾ ಲೋಕಜಿನ್ನಾತ್ರ ಸಂಶಯಃ ।''

(ಭಾಗವತತಾತ್ಪರ್ಯ (ವಾಮನಪುರಾಣವಚನ) 4-13-33)

''ಅತ್ರ ಅಪತ್ಯಾಪ್ತ್ಯೈ ಪುತ್ರಕಾಮೇಷ್ಟೌ ಕೃತಾಯಾಂ ದೇವಾ ಹವಿರ್ಗ್ರಹೀಷ್ಯಂತೀತ್ಯುಕ್ತ್ವಾಽನಪತ್ಯಸ್ಯ ಹವಿರ್ದೇವಾ ನ ಗೃಹಿಷ್ಯಂತೀತಿ । ತತಶ್ಚ ತಸ್ಯ ಸ್ವರ್ಗಾದಿಲೋಕಪ್ರಾಪ್ತಿರ್ನಾಸ್ತೀತಿ ಪ್ರತೀಯತೇಽತೋಽತ್ರ ವಿವಕ್ಷಿತಂ ತಾತ್ಪರ್ಯಂ ಪ್ರಮಾಣೇನೈವಾಹ ॥ ಅನಪತ್ಯೋಽಪ್ಲೀತಿ॥

**ಸದ್ಧರ್ಮಾ ಸ್ವವಿಹಿತಧರ್ಮಾನುಷ್ಠಾತಾ, ಲೋಕಜಿತ್ ಉತ್ತಮಲೋಕಂ ಪ್ರಾಪ್ನೋತಿ ।''**

(ಯಾದವಾರ್ಯರಚಿತಾ - ಭಾವಪ್ರಕಾಶಿಕಾ ವ್ಯಾಖ್ಯಾ)

37.2 ''ಅತೋಽನ್ಯಥಾ ಸುತಾನೃತೇ ವ್ರಜಂತಿ ಸದ್ಗತಿಂ ನರಾ: ।
ಯಥೈವ ಧರ್ಮಭೂಷಣೋ ಜಗಾಮ ಸಂಧ್ಯಕಾಸುತ: ॥''

(ಮ.ಭಾ.ತಾ. ನಿರ್ಣಯ ಅ-12 ಶ್ಲೋ-18)

''**ಅತೋಽನ್ಯಥೇತ್ಯತ್ರ** । ಅತಃ = ಸ್ವಸ್ಯ ಸಾಕ್ಷಾತ್ಸಂತಾನಾಭಾವೇಽಪಿ ಸಂತಾನಾರ್ಥಂ ಭಾರ್ಯಾಂ ಪ್ರತಿ ನಿಯೋಗಾಖ್ಯಪುಣ್ಯಕರಣೇನಾಪಿ ಪಾಂಡೋಃ ಸದ್ಗತಿಪ್ರಾಪ್ತಿತಃ ಕಾರಣಾತ್ ಸುತಾನೃತೇ = ಸರ್ವಾತ್ಮನಾ ಸುತಾನೃತೇ । ಉಪಲಕ್ಷಣಂ ಚೈತತ್, ಸುತಾರ್ಥಂ ನಿಯೋಗಾಖ್ಯಪುಣ್ಯಮಪ್ಯೃತೇ । ಅನ್ಯಥಾ = ಪ್ರಬಲಪುಣ್ಯಾಂತರಕರಣೇನಾಪಿ ನರಾಃ ಸದ್ಗತಿಂ ವ್ರಜಂತೀತಿ ಯೋಜನಾ । ಯಥಾ ಸಂಧ್ಯಕಾಸುತಃ = ಸಂಧ್ಯಾವಲೀಸುತಃ ಧರ್ಮಭೂಷಣಃ = ಧರ್ಮಾಂಗದಃ ಸಾಕ್ಷಾತ್ಸಂತಾನಂ ಪಾಂಡುವತ್ಸಂತಾನಾರ್ಥಂ ನಿಯೋಗಂ ಚ ವಿನಾ ಏಕಾದಶೀವ್ರತಂ ತ್ಯಜ ವಾ ಸ್ವಸುತಶಿರೋ ವಾ ದಿಶೇತಿ ಮೋಹಿನ್ಯೋಕ್ತಸ್ವಪಿತ್ರಾ ಪೃಷ್ಟ ಏಕಾದಶೀಂ ಸಭಾರ್ಯಸ್ತ್ವಂ ಚ ನ ತ್ಯಜ ಅಹಂ ಚ ನ ತ್ಯಜಾಮಿ ಮಮ ಶಿರ ಏವ ದಿಶೇತಿ ಏಕಾದಶೀವ್ರತೇ ಪರಮಾದರಾಖ್ಯಪುಣ್ಯಕರಣಾತ್ ಮಾತ್ರಾ ಪಿತ್ರಾ ಚ ಸಹ ಪ್ರಸನ್ನಹರಿಣಾಽಽದಿಷ್ಟವಿಮಾನಸ್ಥಃ ಸನ್ ಸದ್ಗತಿಂ ವೈಕುಂಠಗತಿಂ ಜಗಾಮ । ತಥೇತಿ ಪೂರ್ವೇಣಾನ್ವಯಃ ॥ 18 ॥''

(ಶ್ರೀವಾದಿರಾಜಯತಿ ವಿರಚಿತಾ - ಭಾವಪ್ರಕಾಶಿಕಾ ವ್ಯಾಖ್ಯಾ)

**38. ಸಿದ್ಧಾಂತಗಳ ಚರ್ಚೆಗಳನ್ನು ಏಕೆ ಮಾಡಬೇಕು? ಬ್ರಾಹ್ಮಣಸಮಾಜದ ಏಳಿಗೆಯ ದೃಷ್ಟಿಯಿಂದ ಎಲ್ಲ ವಿಧಸಿದ್ಧಾಂತಗಳ ಪ್ರಭೇದಗಳನ್ನು ಉದಾಸೀನವಾಗಿ ಬಿಟ್ಟು ಚರ್ಚೆ ಮಾಡದೇ ಸುಮ್ಮನೆ ಇರುವುದು ಒಳ್ಳೆಯದಲ್ಲವೇ?**

ಬ್ರಾಹ್ಮಣಸಮಾಜದ ಏಳಿಗೆಗಾಗಿ ಎಲ್ಲ ಬ್ರಾಹ್ಮಣರು ಸಂಘಟಿತರಾಗಬೇಕಾದದ್ದು ಅತ್ಯಂತ ಆವಶ್ಯಕವಾದದ್ದು. ದ್ವೇಷ-ಅಸೂಯೆಗಳನ್ನು ಬಿಟ್ಟು ವೈಯಕ್ತಿಕ ಕಲಹಗಳನ್ನು ಮಾಡದೇ ಸಾಮರಸ್ಯದಿಂದ ಇರುವುದು ನೂರಕ್ಕೆ ನೂರರಷ್ಟು ಕರ್ತವ್ಯವಾದ (ಆವಶ್ಯಕವಾದ) ಸಂಗತಿಯಾಗಿದೆ. ಅದು ಸ್ವಾಗತಾರ್ಹವಾದದ್ದು. ಅದಕ್ಕಾಗಿ ಪ್ರತಿಯೊಬ್ಬ ವ್ಯಕ್ತಿಯೂ ಕೂಡ ತನ್ನ ವೈಯಕ್ತಿಕವಾಗಿ ಹಾಗೂ ಸಮುಷ್ಟಿಜೀವನದಲ್ಲಿಯೂ ಕೂಡ ಅದನ್ನು ಸಾಧಿಸುವುದಕ್ಕೆ ಪ್ರಯತ್ನ ಮಾಡಬೇಕು. ಇದರಲ್ಲಿ ಎರಡನೇ ಮಾತಿಲ್ಲ. ನಾನಾರೀತಿಯಿಂದ ನಾವು ಒಗ್ಗಟ್ಟಾದರೆ ಮಾತ್ರ ಇಂದು ಬ್ರಾಹ್ಮಣಸಮಾಜ ಎದುರಿಸುತ್ತಿರುವ ತೊಂದರೆಗಳನ್ನು ಪರಿಹರಿಸಿಕೊಳ್ಳಲು ಸಾಧ್ಯ.

ಆದರೆ ಮುಗ್ಧವಾದ ಮನಸ್ಸಿನಿಂದ ಸತ್ಯದ ಚರ್ಚೆ, ತತ್ವದ ಚರ್ಚೆ ಮಾಡುವುದು ಬೇಡ ಎನ್ನುವುದು ಮಾತ್ರ ಸರಿಯಾದದ್ದಲ್ಲ.

ಒಂದು ರೋಗಕ್ಕೆ ಒಬ್ಬನು ಒಂದು ಔಷಧಿಯನ್ನು ಕಂಡುಹಿಡಿಯುತ್ತಾನೆ. ಆ ಔಷಧಿಯನ್ನು ತೆಗೆದುಕೊಳ್ಳುವುದರಿಂದ ರೋಗವು ಪೂರ್ಣ ಕಡಿಮೆಯಾಗುವುದಿಲ್ಲ. ಅಲ್ಪಸ್ವಲ್ಪ ಕಡಿಮೆ ಆದರೂ ಅನೇಕ ದುಷ್ಪರಿಣಾಮ (ಸೈಡ್ ಎಫೆಕ್ಟ್ಸ್) ಗಳು ಆಗುತ್ತವೆ. ಇನ್ನೊಬ್ಬ ವ್ಯಕ್ತಿ ಇನ್ನೂ ಸಂಶೋಧನೆ ಮಾಡಿ ಹೊಸ ಔಷಧಿಯನ್ನು ಕಂಡುಹಿಡಿಯುತ್ತಾನೆ. ಹೊಸದಾದ ಆ ಔಷಧವನ್ನು ತೆಗೆದುಕೊಳ್ಳುವುದರಿಂದ, ಮೊದಲಿನ ಔಷಧದ ಪ್ರಮಾಣಕ್ಕಿಂತ ದುಷ್ಪರಿಣಾಮಗಳು ಸಾಕಷ್ಟು ಕಡಿಮೆಯಾಗುತ್ತವೆ. ಆದರೂ ಇನ್ನೂ ಸ್ವಲ್ಪ ಲೋಪ-ದೋಷಗಳು ಉಳಿದಿರುತ್ತವೆ. ಮತ್ತೊಬ್ಬ ವ್ಯಕ್ತಿ ಇನ್ನೂ ವಿಶೇಷ ಸಂಶೋಧನೆ ಮಾಡಿ ಯಾವ ವಿಧವಾದ ದುಷ್ಪರಿಣಾಮಗಳೂ ಆಗದಂತೆ, ಯಾವ ಲೋಪ-ದೋಷಗಳೂ ಉಳಿಯದಂತೆ ಮತ್ತೊಂದು ಹೊಸ ಔಷಧಿಯನ್ನು ಕಂಡುಹಿಡಿಯುತ್ತಾನೆ. ಹೀಗೆ ಹೊಸ ಹೊಸ ಸಂಶೋಧನೆ ನಡೆಯುವುದು ಸಮಾಜಕ್ಕೆ, ಆರೋಗ್ಯಕ್ಕೆ ಹಿತಕರವೋ? ಅಹಿತಕರವೋ?

ಒಂದು ರೋಗಕ್ಕೆ ಒಬ್ಬ ವ್ಯಕ್ತಿ ಒಂದು ಔಷಧವನ್ನು ಹೇಳಿದ ಮೇಲೆ ''ಅದನ್ನು ತೆಗೆದುಕೊಂಡರೆ ದುಷ್ಪರಿಣಾಮಗಳು ಆಗುತ್ತವೆ. ಆದ್ದರಿಂದ ಅದು ಸರಿಯಿಲ್ಲ'' ಎಂದು ವಿನಾಕಾರಣ ಚರ್ಚೆ ಏಕೆ ಮಾಡುತ್ತೀರಿ? ಒಬ್ಬ ವ್ಯಕ್ತಿ ಹೇಳಿದ ಮೇಲೆ ಅದನ್ನೇ ನಂಬಿ ಸ್ವಾಗತಿಸೋಣ ಎಂದರೆ, ಆ ರೀತಿ ನಂಬಿ ನಡೆಯಲಿಕ್ಕಾಗುವುದಿಲ್ಲ. ಆ ರೋಗದ ಬಗ್ಗೆ ಎಷ್ಟೆಷ್ಟು ಸಂಶೋಧನೆ-ಚರ್ಚೆ ನಡೆಯುತ್ತದೆ, ಎಷ್ಟೆಷ್ಟು ಒಳ್ಳೆಯ ಔಷಧಿಗಳು ಬರುತ್ತವೆ ಅಷ್ಟು ಒಳ್ಳೆಯದೇ ಸಮಾಜಕ್ಕೆ. ಹಾಗಾದರೆ ಯಾವುದು ತಪ್ಪು? ಮೊದಲು ಕಂಡುಹಿಡಿದ ವ್ಯಕ್ತಿಯನ್ನು ದ್ವೇಷಮಾಡುವುದು, ಹೊಡೆಯುವುದು ತಪ್ಪು. ಅವನನ್ನು ದ್ವೇಷ ಮಾಡಬಾರದು ಅಷ್ಟೇ. ಚರ್ಚೆಯೇ ಮಾಡಬಾರದು ಎಂದಲ್ಲ.

ಅದರಂತೆ ನಮ್ಮ ಸಂಸಾರ ಎಂಬುವುದು ಒಂದು ರೋಗ. ಆ ರೋಗಕ್ಕೆ ಅನೇಕ ದಾರ್ಶನಿಕರು ಅನೇಕ ಔಷಧಿಗಳನ್ನು ಕಂಡುಹಿಡಿದಿದ್ದಾರೆ.

ಅದರಲ್ಲಿ ಯಾವ ಔಷಧಿ ಸರಿಯಾದದ್ದು, ಯಾವ ಔಷಧಿಯಿಂದ ನಮ್ಮ ಸಂಸಾರರೋಗ ನಿಜವಾಗಿ ದೂರವಾಗುತ್ತದೆ, ಯಾವ ಔಷಧಿಯಿಂದ ಯಾವ ವಿಧವಾದ ದುಷ್ಪರಿಣಾಮಗಳೂ (ನರಕಾದ್ಯನರ್ಥಗಳೂ) ಆಗುವುದಿಲ್ಲ, ಅಂತಹ ಉತ್ತಮ ಔಷಧಿ (ದರ್ಶನ) ಯಾವುದು? ಎಂಬುದಾಗಿ ಚರ್ಚೆ ಮಾಡಿ ನಿರ್ಣಯ ಮಾಡಿಕೊಂಡು ನಮ್ಮ ಭವರೋಗದ ಔಷಧಿಯಾದ ಸತ್‌ಸಿದ್ಧಾಂತವನ್ನು ಸ್ವೀಕಾರ ಮಾಡುವುದರಲ್ಲಿ ಏನು ತಪ್ಪಿದೆ?

ಪರಸ್ಪರವಾಗಿ ವೈದ್ಯರು ಜಗಳವಾಡದೇ, ಪ್ರೀತಿಯಿಂದ ಹೊಸ ಹೊಸ ಸಂಶೋಧನೆಯನ್ನು ಸ್ವಾಗತಿಸುವಂತೆ ಸತ್ಯ(ತತ್ತ್ವ)ಸಂಶೋಧಕರನ್ನು ಪ್ರೀತಿಸಬೇಕೇ ಹೊರತು ದ್ವೇಷ ಮಾಡಬಾರದು. ಜಗಳವಾಡಬಾರದು. ಅದನ್ನು ಬಿಟ್ಟು 'ಚರ್ಚೆಯೇ ಬೇಡ' ಎನ್ನುವುದು ಸರಿಯಲ್ಲ. ಅದರಂತೆ ಮೋಕ್ಷಸಾಧನಮಾರ್ಗದಲ್ಲಿದ್ದಾಗ ಶ್ರೀಮದಾಚಾರ್ಯರ ಸಿದ್ಧಾಂತದ ಬಗ್ಗೆ ಪ್ರತಿಪಾದನೆ ಮಾಡುವುದರಲ್ಲಿ ಯಾವ ವಿಧವಾದ ಅನೌಚಿತ್ಯವಿಲ್ಲ. ತಮ್ಮ ತಮ್ಮ ವಿಚಾರಗಳನ್ನು ಮಂಡಿಸುವ ಸ್ವಾತಂತ್ರ್ಯ ಯಾರಿಗಾದರೂ ಇದ್ದೇ ಇದೆ.

**39. ನಾನಾವಿಧ ಹೂಗಳಿಂದ ಆದ ಮಕರಂದದ ರುಚಿ ಹೇಗೆ ಒಂದೇ ರೀತಿಯಿರುತ್ತದೆ ಅದರಂತೆ ಎಲ್ಲರಿಗೂ ಒಂದೇ ಗತಿಯಾಗುತ್ತದೆ ಎಂದು ಹೇಳುವುದು ಯೋಗ್ಯವಲ್ಲವೇ? ಬೇರೆ ಬೇರೆ ರೀತಿಯ ಜನರಿಗೆ ಬೇರೆ ಬೇರೆ ರೀತಿಯ ಗತಿಯಾಗುತ್ತದೆ ಎಂದು ಏಕೆ ಹೇಳುತ್ತೀರಿ?**

'ಸ್ವಭಾವತಃ ವಿಚಿತ್ರರಾದ ಜೀವರಿಗೆ ಅವರವರ ಸ್ವಭಾವಕ್ಕೆ ಅನುಸಾರವಾಗಿ ಬೇರೆ ಬೇರೆ ಗತಿಯಾಗುತ್ತದೆ' ಎಂಬುದಾಗಿ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನೆ. ಅದನ್ನೇ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

ಮೊದಲನೆಯದಾಗಿ, ಈ ಗತಿಗಳನ್ನು ಹೇಳಿದವರು ಶ್ರೀಮದಾಚಾರ್ಯರೇ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಬೇರೆ ಬೇರೆ ಜೀವರಿಗೆ ಬೇರೆ ಬೇರೆಯ ಗತಿಗಳನ್ನು ವೇದಗಳು ಹೇಳುತ್ತವೆ. ಹಾಗೂ ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಗೀತೆಯಲ್ಲಿ ಹೇಳಿದ್ದಾನೆ.[1] ಅದನ್ನೇ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

**''ಈಶ್ವರೋಽಹಮಹಂ ಭೋಗೀ ಸಿದ್ಧೋಹಂ ಬಲವಾನ್ಸುಖೀ ।''**

ಹೀಗೆ ಯಾರು 'ನಾನೇ ಸ್ವತಂತ್ರ' 'ನನಗೆ ಸಮಾನರಾದವರಿಲ್ಲ' 'ನಾನೇ ಮಹಾಪುರುಷ' ಎಂದು ತನ್ನನ್ನು ತಾನೇ ತಿಳಿದುಕೊಂಡು ಯಾರನ್ನೂ ಲೆಕ್ಕಿಸದೇ ಇರುತ್ತಾನೆ ಅಂತಹ, ದೇವರನ್ನು ನಂಬದ ವ್ಯಕ್ತಿಯು,

---

39.1 ''ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥14॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥15॥
ಅನೇಕ ಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥16॥''
''ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥18॥
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥19॥
ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ತು ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥20॥''
(ಭಗವದ್ಗೀತಾ ಅಧ್ಯಾಯ-16)

**"ಆಸುರೀಷ್ವೇವ ಯೋನಿಷು ।**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ॥**

**ಮಾಮಪ್ರಾಪ್ಯೈವ ತು ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥"**

ಕೊನೆವರೆಗೂ ಸದ್ಗತಿಯನ್ನು ಹೊಂದುವುದಿಲ್ಲ. ಅವನನ್ನು ಅಧೋಗತಿಗೆ ಕಳುಹಿಸುತ್ತೇನೆ ಎಂಬುದಾಗಿ ಶ್ರೀಕೃಷ್ಣನೇ ಹೇಳಿದ್ದಾನೆ. ಹೊರತು ಮಧ್ವಾಚಾರ್ಯರೇ ಹೇಳಿದ್ದಲ್ಲ.

ಎರಡನೆಯದಾಗಿ, ಜೇನಿನ ದೃಷ್ಟಾಂತವನ್ನು ಬಹಳ ಚೆನ್ನಾಗಿ ಹೇಳಿದ್ದಾರೆ. ಅಲ್ಲಿ ಎಲ್ಲ ಹೂಗಳ ಮಕರಂದವನ್ನು ಮಾತ್ರ ತಂದಿದ್ದರಿಂದ ಜೇನಿನ ರುಚಿ ಒಂದೇ ಆಗಿದೆ. ಆದರೆ ಆ ಹೂಗಳ ಮಕರಂದವನ್ನು ತರುವ ಜೊತೆಗೆ ಸ್ವಲ್ಪ ಹಾವಿನ ವಿಷ, ಹಲ್ಲಿಯ ವಿಷ ಹೀಗೆ ಅನೇಕ ಹೊಲಸು ಪದಾರ್ಥಗಳನ್ನು ಸೇರಿಸಿ ತಂದಿದ್ದರೆ ಒಂದೇ ಜೇನಿನ ರುಚಿ ಬರುತ್ತಿತ್ತೇನು? ಬರುತ್ತಿರಲಿಲ್ಲ.

ಅವರ ಪ್ರಶ್ನೆಯಲ್ಲಿಯೇ ಉತ್ತರವಿದೆ. ಹೂವಿನ ಮಕರಂದವನ್ನು ಮಾತ್ರ ತಂದಿದ್ದಕ್ಕಾಗಿ ಜೇನಿನ ರುಚಿ ಒಂದಾಗಿದೆ. ಹಾಗೆ ಸಾತ್ವಿಕರಾದ ಜೀವರ ಗತಿ ಒಂದೇ ಆಗಿದೆ. ಆ ಹೂವಿನ ಮಕರಂದದಲ್ಲಿ ಹಾವಿನ ವಿಷ ಬೆರೆತರೆ ಅದು ಜೇನು ಆಗುವುದಿಲ್ಲ. ಹಾಗೆ ಸಾತ್ವಿಕರ ಜೊತೆಗೆ ರಾಜಸ-ತಾಮಸ ಜೀವರನ್ನೂ ಸೇರಿಸಿಬಿಟ್ಟರೆ ಒಂದೇ ಗತಿ ಸಿಗುವುದು ಹೇಗೆ? ಭಿನ್ನ ಭಿನ್ನವಾದ ಗತಿಯೇ ಆಗುವುದು.

**40. ಪರಮಾತ್ಮನು ಪ್ರತ್ಯಕ್ಷವಾಗಿ (ಕಣ್ಣಿಗೆ ಕಾಣುವಂತೆ) ಭೇಟಿಯಾಗಿ ನಮ್ಮ ಎಲ್ಲವಿಧ ಕರ್ಮಗಳನ್ನು ತಿದ್ದಿ, ಸ್ವಯಂ ತಾನೇ ನಮ್ಮನ್ನು ಸನ್ಮಾರ್ಗದಲ್ಲಿ ನಡೆಸಿದ್ದರೆ ಎಷ್ಟು ಒಳ್ಳೆಯದಾಗಿರುತ್ತಿತ್ತು. ಕಣ್ಣಿಗೆ ಕಾಣದಂತೆ ಇದ್ದದ್ದು ತಪ್ಪಲ್ಲವೇ?**

ಪರಮಾತ್ಮನು (ಪ್ರತ್ಯಕ್ಷವಾಗಿ) ಕಣ್ಣಿಗೆ ಕಾಣುವಂತೆ ತ್ರೇತಾಯುಗದಲ್ಲಿ ರಾಮನಾಗಿ ಇದ್ದಾಗಲೇ, ಕಣ್ಣಿಗೆ ಕಾಣುವಂತೆ ದ್ವಾಪರಯುಗದಲ್ಲಿ ಕೃಷ್ಣರೂಪದಿಂದ, ಪರಶುರಾಮರೂಪದಿಂದ, ವೇದವ್ಯಾಸರೂಪದಿಂದ ಇರುವಾಗಲೇ ದುಃಶಾಸನ, ದುರ್ಯೋಧನ ಶಕುನಿ ಮೊದಲಾದ ಎಂತೆಂತಹ ಮಹಾನುಭಾವರು ಆಗಿಹೋದರಲ್ಲವೇ?

**39. ನಾನಾವಿಧ ಹೂಗಳಿಂದ ಆದ ಮಕರಂದದ ರುಚಿ ಹೇಗೆ ಒಂದೇ ರೀತಿಯಿರುತ್ತದೆ ಅದರಂತೆ ಎಲ್ಲರಿಗೂ ಒಂದೇ ಗತಿಯಾಗುತ್ತದೆ ಎಂದು ಹೇಳುವುದು ಯೋಗ್ಯವಲ್ಲವೇ? ಬೇರೆ ಬೇರೆ ರೀತಿಯ ಜನರಿಗೆ ಬೇರೆ ಬೇರೆ ರೀತಿಯ ಗತಿಯಾಗುತ್ತದೆ ಎಂದು ಏಕೆ ಹೇಳುತ್ತೀರಿ?**

'ಸ್ವಭಾವತಃ ವಿಚಿತ್ರರಾದ ಜೀವರಿಗೆ ಅವರವರ ಸ್ವಭಾವಕ್ಕೆ ಅನುಸಾರವಾಗಿ ಬೇರೆ ಬೇರೆ ಗತಿಯಾಗುತ್ತದೆ' ಎಂಬುದಾಗಿ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನೆ. ಅದನ್ನೇ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

ಮೊದಲನೆಯದಾಗಿ, ಈ ಗತಿಗಳನ್ನು ಹೇಳಿದವರು ಶ್ರೀಮದಾಚಾರ್ಯರೇ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಬೇರೆ ಬೇರೆ ಜೀವರಿಗೆ ಬೇರೆ ಬೇರೆಯ ಗತಿಗಳನ್ನು ವೇದಗಳು ಹೇಳುತ್ತವೆ. ಹಾಗೂ ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಗೀತೆಯಲ್ಲಿ ಹೇಳಿದ್ದಾನೆ.[1] ಅದನ್ನೇ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

**"ಈಶ್ವರೋಽಹಮಹಂ ಭೋಗೀ ಸಿದ್ಧೋಹಂ ಬಲವಾನ್‌ಸುಖೀ ।"**

ಹೀಗೆ ಯಾರು 'ನಾನೇ ಸ್ವತಂತ್ರ' 'ನನಗೆ ಸಮಾನರಾದವರಿಲ್ಲ' 'ನಾನೇ ಮಹಾಪುರುಷ' ಎಂದು ತನ್ನನ್ನು ತಾನೇ ತಿಳಿದುಕೊಂಡು ಯಾರನ್ನೂ ಲೆಕ್ಕಿಸದೇ ಇರುತ್ತಾನೆ ಅಂತಹ, ದೇವರನ್ನು ನಂಬದ ವ್ಯಕ್ತಿಯು,

---

39.1 "ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥14॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥15॥
ಅನೇಕ ಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥16॥"
"ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥18॥
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥19॥
ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ತು ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥20॥"
(ಭಗವದ್ಗೀತಾ ಅಧ್ಯಾಯ-16)

**"ಆಸುರೀಷ್ವೇವ ಯೋನಿಷು ।**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ॥**

**ಮಾಮಪ್ರಾಪ್ಯೈವ ತು ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥"**

ಕೊನೆವರೆಗೂ ಸದ್ಗತಿಯನ್ನು ಹೊಂದುವುದಿಲ್ಲ. ಅವನನ್ನು ಅಧೋಗತಿಗೆ ಕಳುಹಿಸುತ್ತೇನೆ ಎಂಬುದಾಗಿ ಶ್ರೀಕೃಷ್ಣನೇ ಹೇಳಿದ್ದಾನೆ. ಹೊರತು ಮಧ್ವಾಚಾರ್ಯರೇ ಹೇಳಿದ್ದಲ್ಲ.

ಎರಡನೆಯದಾಗಿ, ಜೇನಿನ ದೃಷ್ಟಾಂತವನ್ನು ಬಹಳ ಚೆನ್ನಾಗಿ ಹೇಳಿದ್ದಾರೆ. ಅಲ್ಲಿ ಎಲ್ಲ ಹೂಗಳ ಮಕರಂದವನ್ನು ಮಾತ್ರ ತಂದಿದ್ದರಿಂದ ಜೇನಿನ ರುಚಿ ಒಂದೇ ಆಗಿದೆ. ಆದರೆ ಆ ಹೂಗಳ ಮಕರಂದವನ್ನು ತರುವ ಜೊತೆಗೆ ಸ್ವಲ್ಪ ಹಾವಿನ ವಿಷ, ಹಲ್ಲಿಯ ವಿಷ ಹೀಗೆ ಅನೇಕ ಹೊಲಸು ಪದಾರ್ಥಗಳನ್ನು ಸೇರಿಸಿ ತಂದಿದ್ದರೆ ಒಂದೇ ಜೇನಿನ ರುಚಿ ಬರುತ್ತಿತ್ತೇನು? ಬರುತ್ತಿರಲಿಲ್ಲ.

ಅವರ ಪ್ರಶ್ನೆಯಲ್ಲಿಯೇ ಉತ್ತರವಿದೆ. ಹೂವಿನ ಮಕರಂದವನ್ನು ಮಾತ್ರ ತಂದಿದ್ದಕ್ಕಾಗಿ ಜೇನಿನ ರುಚಿ ಒಂದಾಗಿದೆ. ಹಾಗೆ ಸಾತ್ವಿಕರಾದ ಜೀವರ ಗತಿ ಒಂದೇ ಆಗಿದೆ. ಆ ಹೂವಿನ ಮಕರಂದದಲ್ಲಿ ಹಾವಿನ ವಿಷ ಬೆರೆತರೆ ಅದು ಜೇನು ಆಗುವುದಿಲ್ಲ. ಹಾಗೆ ಸಾತ್ವಿಕರ ಜೊತೆಗೆ ರಾಜಸ-ತಾಮಸ ಜೀವರನ್ನೂ ಸೇರಿಸಿಬಿಟ್ಟರೆ ಒಂದೇ ಗತಿ ಸಿಗುವುದು ಹೇಗೆ? ಭಿನ್ನ ಭಿನ್ನವಾದ ಗತಿಯೇ ಆಗುವುದು.

**40. ಪರಮಾತ್ಮನು ಪ್ರತ್ಯಕ್ಷವಾಗಿ (ಕಣ್ಣಿಗೆ ಕಾಣುವಂತೆ) ಭೇಟಿಯಾಗಿ ನಮ್ಮ ಎಲ್ಲವಿಧ ಕರ್ಮಗಳನ್ನು ತಿದ್ದಿ, ಸ್ವಯಂ ತಾನೇ ನಮ್ಮನ್ನು ಸನ್ಮಾರ್ಗದಲ್ಲಿ ನಡೆಸಿದ್ದರೆ ಎಷ್ಟು ಒಳ್ಳೆಯದಾಗಿರುತ್ತಿತ್ತು. ಕಣ್ಣಿಗೆ ಕಾಣದಂತೆ ಇದ್ದದ್ದು ತಪ್ಪಲ್ಲವೇ?**

ಪರಮಾತ್ಮನು (ಪ್ರತ್ಯಕ್ಷವಾಗಿ) ಕಣ್ಣಿಗೆ ಕಾಣುವಂತೆ ತ್ರೇತಾಯುಗದಲ್ಲಿ ರಾಮನಾಗಿ ಇದ್ದಾಗಲೇ, ಕಣ್ಣಿಗೆ ಕಾಣುವಂತೆ ದ್ವಾಪರಯುಗದಲ್ಲಿ ಕೃಷ್ಣರೂಪದಿಂದ, ಪರಶುರಾಮರೂಪದಿಂದ, ವೇದವ್ಯಾಸರೂಪದಿಂದ ಇರುವಾಗಲೇ ದುಃಶಾಸನ, ದುರ್ಯೋಧನ ಶಕುನಿ ಮೊದಲಾದ ಎಂತೆಂತಹ ಮಹಾನುಭಾವರು ಆಗಿಹೋದರಲ್ಲವೇ?

ಅಂದಮೇಲೆ ಆ ಹಿಂದಿನ ಯುಗಗಳಲ್ಲಿಯೇ ಅಂತಹವರು ಆಗಿಹೋದ ಮೇಲೆ ಈ ಕಲಿಯುಗದಲ್ಲಿ ದೇವರು ಪ್ರತ್ಯಕ್ಷವಾಗಿಯೇ ಇದ್ದರೂ ನಾವು ನೂರಕ್ಕೆ ನೂರರಷ್ಟು ಸರಿಯಾಗಿರುತ್ತಿದ್ದೆವು ಎಂಬ ಪೂರ್ಣ ವಿಶ್ವಾಸ ನಮಗೂ ಇಲ್ಲ. ದೇವರಿಗೂ ಇಲ್ಲ.

ಅದರ ತಾತ್ಪರ್ಯ-ಭಗವಂತ ಕೊಡುವ ಫಲ ಬಹಳ ದೊಡ್ಡದಿದೆ. ಸಣ್ಣ ಪುಟ್ಟ ಗೌರವವಲ್ಲ, ಹಣವಲ್ಲ, ಮನೆಯಲ್ಲ. ಅದು ಮೋಕ್ಷ. ಅರ್ಥಾತ್ ಅನಂತ ಸುಖವನ್ನು ಕೊಡುತ್ತಿದ್ದಾನೆ. ಅನಂತಕಾಲದವರೆಗಿನ ಶಾಶ್ವತವಾದ ಸುಖವನ್ನು ಕೊಡಬೇಕಾದರೆ, ಅಷ್ಟು ನಮ್ಮನ್ನು ಪರೀಕ್ಷೆ ಮಾಡಿ ಅನಂತಕಾಲದ ಸಾಧನೆಯನ್ನು ಪರೀಕ್ಷಿಸಿಯೇ ಮೋಕ್ಷವನ್ನು ಕೊಡಬೇಕು ಎಂಬ ಸಂಕಲ್ಪವನ್ನು ಪರಮಾತ್ಮ ಮಾಡಿದ್ದಾನೆ. ಆ ಸಂಕಲ್ಪಕ್ಕೆ ಅನುಸಾರವಾಗಿ ಪರಮಾತ್ಮ ನಮ್ಮಿಂದ ಕಷ್ಟಪೂರ್ವಕವಾಗಿ ಸಾಧನೆಯನ್ನು ಮಾಡಿಸಿ ಅನಂತಸುಖವನ್ನು ಕೊಡುತ್ತಾನೆ. ಆದ್ದರಿಂದ ''ದೇವರು ನಮ್ಮಿಂದ ಸುಲಭಸಾಧನೆಯನ್ನು ಏಕೆ ಮಾಡಿಸುತ್ತಿಲ್ಲ?'' ಎಂದು ಕೇಳಬಾರದು. ಕೊಡಬೇಕಾದ ಫಲ ಸುಲಭವಾದದ್ದಲ್ಲ. ಮಹಾಫಲ ಅದು. ಅದಕ್ಕೆ ತಕ್ಕಂತೆ ಸುಲಭಸಾಧನೆ ಮಾಡಿಸದೇ ಕಷ್ಟಪೂರ್ವಕವಾದ ಸಾಧನೆಯನ್ನು ಮಾಡಿಸುತ್ತಾನೆ.

**41. ''ಅನ್ನದಾತಾ ಸುಖೀ ಭವ'' ಎಂದು (ಊಟದ ನಂತರ) ಹೇಳುವುದು ಯಾರಿಗೆ? ಪರಮಾತ್ಮನು ನಿತ್ಯಸುಖಿಯಾದ್ದರಿಂದ ಅವನಿಗೆ ಹೇಳಲು ಬರುವುದಿಲ್ಲ ಅಲ್ಲವೇ?**

ಸತ್ಯ. ಪರಮಾತ್ಮನು ನಿತ್ಯಸುಖಿಯಾಗಿದ್ದಾನೆ. ಆದ್ದರಿಂದಲೇ 'ಅನ್ನದಾತಾ ಸುಖೀ ಭವ' ಎಂದು ಪರಮಾತ್ಮನಿಗೆ ಹೇಳುವುದು ಅಲ್ಲವೇ ಅಲ್ಲ.

ಹಾಗಾದರೆ ಭೋಜನ ಮಾಡಿಸಿದ ಮನೆಯ ಯಜಮಾನನಿಗೆ ಹೇಳು-ವುದೋ? ಅಡಿಗೆಯನ್ನು ಮಾಡಿದ, ಬಡಿಸಿದ ವ್ಯಕ್ತಿಗೆ ಹೇಳುವುದೋ? ಬೆಳೆಗೆ ಕಾರಣನಾದ ರೈತನಿಗೆ ಹೇಳುವುದೋ? ಎಂದರೆ, ಎಲ್ಲರಿಗೂ ಹೇಳುವುದು ಅದು.

ಅಂದರೆ- ನಮ್ಮ ಬಾಯಿಯಲ್ಲಿ ಅನ್ನ ಬೀಳುವುದಕ್ಕೆ ಯಾರು ಯಾರು ಕಾರಣರಾಗಿದ್ದಾರೆಯೋ ಅವರೆಲ್ಲರಿಗೂ ಸುಖವಾಗಲಿ ಎಂಬ ಚಿಂತನೆ ಅದರಲ್ಲಿದೆ. ಅದರರ್ಥ **'ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ'** ಎಂದು ಹೇಳುವಂತೆ ಬೆಳೆಗಾಗಿ ಭೂಮಿಯನ್ನು ಊಳುವಾಗ ಬಳಸುವ ನಾಲ್ಕು ಕಾಲಿನ ಎತ್ತುಗಳನ್ನು ಓಡಿದು, ಬೆಳೆ ಬೆಳೆಯುವ ರೈತ, ಮನೆಯ

ಯಜಮಾನ, ಅಡಿಗೆ ಮಾಡಿದ ವ್ಯಕ್ತಿ, ಬಡಿಸಿದ ವ್ಯಕ್ತಿ ಹೀಗೆ ಊಟಕ್ಕೆ ಕಾರಣರಾದ ಎಲ್ಲರಿಗೂ ಸುಖವಾಗಲಿ ಎಂದು ತುಂಬುಹೃದಯದಿಂದ ಹಾರೈಸುವ ಚಿಂತನೆ ಅದರಲ್ಲಿ ಮಾಡುವುದು.

**42. ಮೋಕ್ಷಕ್ಕೆ ಹೋದವನು ತಿರುಗಿ ಬರುತ್ತಾನೆ ಎಂದು ಹೇಳುತ್ತಾರೆ. ಅಂದಮೇಲೆ 'ಮೋಕ್ಷವು ಶಾಶ್ವತ' ಎಂದು ಹೇಗೆ ಹೇಳುತ್ತೀರಿ?**

'ಮೋಕ್ಷಕ್ಕೆ ಹೋದವನು ತಿರುಗಿ ಬರುತ್ತಾನೆ' ಎಂಬ ತಿಳುವಳಿಕೆಯೇ ತಪ್ಪು. **'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'** ಎಂದು ಪುನರಾವೃತ್ತಿ ಹೇಳಿದ್ದು ಸ್ವರ್ಗದ ವಿಷಯದಲ್ಲಿ. ಸ್ವರ್ಗಕ್ಕೆ ಹೋದವನು ಪುಣ್ಯವು ಮುಗಿದ ಮೇಲೆ ಮತ್ತೆ ಮರ್ತ್ಯಲೋಕಕ್ಕೆ ಬರುತ್ತಾನೆ ಎಂದು ಹೇಳಿದ್ದುಂಟು.

ಹೊರತು ಮೋಕ್ಷಕ್ಕೆ ಹೋದ ವ್ಯಕ್ತಿಗೆ ಪುನರಾವೃತ್ತಿ ಇಲ್ಲ. **'ಓಂ ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್ ಓಂ'** ಎಂದು ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ[1] ಹಾಗೂ **''ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ''** ಎಂದು ಶ್ರೀಕೃಷ್ಣನು ಗೀತೆಯಲ್ಲಿ ಸ್ಪಷ್ಟವಾಗಿ 'ಮೋಕ್ಷವು ಶಾಶ್ವತ' ಎಂಬ ವಿಚಾರವನ್ನು ತಿಳಿಸಿದ್ದಾರೆ. (ಅ-15 ಶ್ಲೋ-6)

---

42.1 ಅ) **ಓಂ ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್ ಓಂ**

(ಬ್ರಹ್ಮಸೂತ್ರ 4-4-23)

'ನ ಚ ಪುನರಾವರ್ತತೇ ನ ಚ ಪುನರಾವರ್ತತೇ' (ಛಾಂ. ಉ. 8-15-1)

'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ ಸಮಭವತ್'

(ಐ.ಆ. 2-5-1-15) ಇತ್ಯಾದಿಶ್ರುತಿಭ್ಯಃ ॥23॥

(ಬ್ರಹ್ಮಸೂತ್ರಭಾಷ್ಯ)

''ಸಿದ್ಧಾಂತಯತ್ಸೂತ್ರಮುಪನ್ಯಸ್ಯ ತದುಪಾತ್ತಶ್ರುತೀರೇವೋದಾಹರತಿ

**॥ಅನಾವೃತ್ತಿರಿತಿ॥ ನ ಮುಕ್ತಸ್ಯ ಪುನರಾವೃತ್ತಿಃ । 'ನ ಚ ಪುನರಾವರ್ತತ' ಇತಿ ಶ್ರುತೇಃ । ಕಿಂಚ ಮುಕ್ತಸ್ಯ ಸರ್ವಕಾಮಾವಾಪ್ತಿಃ ಶ್ರೂಯತೇ ॥ ಸರ್ವಾನ್ ಕಾಮಾನಿತಿ ॥ ತತಶ್ಚ ನ ತಸ್ಯ ಪುನರಾವೃತ್ತಿಃ । ನ ಹಿ ಕಶ್ಚಿತ್ ಪುಮಾನ್ ಪುನರಾವೃತ್ತಿಕಾಮೋಽಸ್ತೀತಿ ಭಾವಃ ॥''**

(ತತ್ವಪ್ರಕಾಶಿಕಾ - 4-4-23)

ಅ) ''ದೃಷ್ಟ್ವಾ ತಂ ಪರಮಂ ವಿಷ್ಣುಂ ತಲ್ಲೋಕಂ ಪ್ರತಿಪದ್ಯತೇ ।
ನಾವರ್ತತೇ ಪುನಸ್ತಸ್ಮಾತ್ ಕದಾಚಿತ್ ಕೇನಚಿತ್ ಕ್ವಚಿತ್ ॥ ॥ಇತಿ ಚ ॥''

(ಛಾಂದೋಗ್ಯ ಭಾಷ್ಯ ಅ-8 ಖಂ-5)

**43. ಅನರ್ಥವಾಗುತ್ತದೆ, ನರಕವಾಗುತ್ತದೆ ಎಂಬುದಾಗಿ ಭಯವನ್ನು ಹುಟ್ಟಿಸಿ ಧರ್ಮವನ್ನು ಏಕೆ ಮಾಡಿಸಬೇಕು? ಧರ್ಮ ಮಾಡಿಸಲು ಕೇವಲ ಯುಕ್ತಿವಾದ ಸಾಕಲ್ಲವೇ?**

ಯುಕ್ತಿವಾದದಿಂದ ಧರ್ಮ-ನೀತಿ-ಭಕ್ತಿ ಇವುಗಳನ್ನು ತಿಳಿಸುತ್ತಾ ಹೋದರೆ, ತನಗೆ ಅನುಭವವಾಗುವವರೆಗೂ ಧರ್ಮದ ಮೇಲೆ ವಿಶ್ವಾಸವಿಡುವುದಿಲ್ಲ. ಧರ್ಮಗಳನ್ನು ಆಚರಿಸುತ್ತಾ ಹೋದರೆ ಕ್ರಮೇಣ ವಿಶ್ವಾಸ ಬರುತ್ತದೆ.

ಆದ್ದರಿಂದ ಮೊದಲು ಭಯವನ್ನು ಹುಟ್ಟಿಸಿ ತತ್ವಗಳನ್ನು ತಿಳಿಸಬೇಕು. ಧರ್ಮಗಳನ್ನು ಮಾಡಿಸಬೇಕು.

ಅವನೇ ಸೈಂಟಿಫಿಕ್ ಆಗಿ ತಿಳಿದುಕೊಂಡು ಪ್ರವೃತ್ತನಾಗಲಿ ಎನ್ನಬಾರದು. ಮಗು ಬೆಂಕಿಯ ಹತ್ತಿರ ಹೋಗುತ್ತಿರುವಾಗ 'ಅದಕ್ಕೆ ಭಯಪಡಿಸುವುದು ಬೇಡ. ಅದೇ ಸೈಂಟಿಫಿಕ್ ಆಗಿ ತಿಳಿದುಕೊಂಡು ಬೆಂಕಿಯ ಬಳಿ ಹೋಗದಿರಲಿ' ಎಂದು ತಿಳಿದರೆ ಮಗು ಬೆಂಕಿಯಲ್ಲಿ ಬಿದ್ದು ಸತ್ತು ಹೋಗುತ್ತದೆ. ಆದ್ದರಿಂದ ಭಯ ಹುಟ್ಟಿಸುವುದು ಅನಿವಾರ್ಯ. ಭಯ-ಪರಿಪ್ರಶ್ನೆ-ವಿಮರ್ಶೆಗಳ ಸಂಗಮದಿಂದ ಅರಿವನ್ನು ಪಡೆಯುವ ಮನೋಹರ ಸಂಸ್ಕೃತಿ ಭಾರತೀಯರದ್ದು.

**44. ಅಂತಕಾಲದಲ್ಲಿ ಯಾವುದನ್ನು ಸ್ಮರಿಸಿ ಮೃತನಾಗುವನೋ ಆ ಜನ್ಮವನ್ನು ಹೊಂದುತ್ತಾನೆ (ಯಂ ಯಂ ವಾಽಪಿ ಸ್ಮರನ್ ಭಾವಂ......) ಎಂದು ಹೇಳಿದ್ದಾರೆ. ಹಾಗಾದರೆ ಅಂತಕಾಲದಲ್ಲಿ ಭಗವಂತನನ್ನು, ದೇವತೆಗಳನ್ನು ಅಥವಾ ವೈಕುಂಠ, ಸ್ವರ್ಗ ಮೊದಲಾದ ಸ್ಥಳಗಳನ್ನು ಸ್ಮರಿಸಿ ಮೃತರಾದರೆ ಉತ್ತಮಯೋನಿಯನ್ನು, ಆ ಆ ಸ್ಥಳಗಳನ್ನು ಹೊಂದುತ್ತಾರೆಯೇ?**

ನಿಜ.

**''ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥''** ಎಂಬುದಾಗಿ ಶ್ರೀಕೃಷ್ಣನು ಗೀತೆಯಲ್ಲಿ (ಅಧ್ಯಾಯ-8, ಶ್ಲೋ-6) ಈ ವಿಷಯವನ್ನು ತಿಳಿಸಿರುವುದು ನಿಜವೇ. ಅಂದರೆ ಬ್ರಹ್ಮಸಾಕ್ಷಾತ್ಕಾರ ಪಡೆದು, ಮೋಕ್ಷ

ಹೊಂದುವ ಯೋಗ್ಯತೆ ಪಡೆದವನಾಗಿದ್ದರೆ ಆ ವ್ಯಕ್ತಿ ಅಂತಕಾಲದಲ್ಲಿ ಭಗವಂತನ ಸ್ಮರಣೆ ಹಾಗೂ ಗತ್ಯನುಸ್ಮರಣೆ (ಮುಕ್ತನು ತೆರಳುವ ಲೋಕಗಳ ಸ್ಮರಣೆ) ಮಾಡಿದರೆ ವೈಕುಂಠಾದಿ ಲೋಕವನ್ನು ಹೊಂದುವುದು ನಿಶ್ಚಿತ ಎಂದು ಹೇಳಿದ್ದು ಸತ್ಯವೇ.[1]

ಅಲ್ಲದೇ, **'ಸಂತತಂ ಚಿಂತಯೇಽನಂತಂ ಅಂತಕಾಲೇ ವಿಶೇಷತಃ'** ಎಂಬುದಾಗಿ ದ್ವಾದಶಸ್ತೋತ್ರದಲ್ಲಿ ಆಚಾರ್ಯರು ಹೇಳಿದಂತೆ ಅಂತಕಾಲದಲ್ಲಿನ ವಿಷ್ಣುಸ್ಮರಣೆ ಬಹಳ ವಿಶೇಷ ಫಲಪ್ರದ. ಅದರಲ್ಲಿ ಸಂದೇಹವಿಲ್ಲ.

ಆದರೆ ಆ ವಿಧವಾದ ಅಂತಕಾಲೀನ ವಿಷ್ಣುಸ್ಮರಣೆಯು ಎಲ್ಲರಿಗೂ ಬರುವುದಿಲ್ಲ. ಸುಲಭವಾಗಿ ಆಗುವುದಿಲ್ಲ. ಹಾಗೆ ವಿಷ್ಣುಸ್ಮರಣೆ ಆಗಬೇಕಾದರೆ ಬಹಳ ಸಾಧನೆ ಆಗಿರಬೇಕು. ಅಂದರೆ ನಿರಂತರ ಶಾಸ್ತ್ರಶ್ರವಣ, ಮನನ, ಸತತಧ್ಯಾನಾದಿಗಳನ್ನು ಮಾಡಿದ್ದರೆ ಸಾಧ್ಯವಾಗುತ್ತದೆ. ಅಷ್ಟೆಲ್ಲ ಮಾಡಿದ್ದರೂ ಭಗವಂತನ ವಿಸ್ಮೃತಿಯಾಗುತ್ತದೆ. 525 ವರ್ಷಗಳ-ವರೆಗೆ ಅಧ್ಯಯನ ಮಾಡಿದ ಭೀಷ್ಮಾಚಾರ್ಯರಿಗೆ ಅಂತಕಾಲದಲ್ಲಿ ಶ್ರೀಕೃಷ್ಣನೇ ಎದುರಿಗೆ ನಿಂತಿದ್ದರೂ ಕೊನೆಯಕ್ಷಣದಲ್ಲಿ ಹರಿಸ್ಮರಣೆ ಆಗಲಿಲ್ಲ. ಆದ್ದರಿಂದ ಮೋಕ್ಷವಾಗಲಿಲ್ಲ. ಅಂದಮೇಲೆ ಜೀವನವಿಡೀ ಅಧ್ಯಯನಾದಿಗಳಲ್ಲಿಯೇ ಕಳೆದ ಮಹಾನುಭಾವರಿಗೇ ಹಾಗಾಗುವಾಗ ನಮ್ಮಂಥಹ ಅಜ್ಞಾನಿಗಳ ಪಾಡೇನು?

---

44.1 ''ನ ಕೇವಲಂ ಜ್ಞಾನಸಾಮರ್ಥ್ಯೇನ ಏವಂವಿಧೋತ್ಕ್ರಮಣಂ ಯೇನಾತಿಪ್ರಸಂಗಃ, ಕಿಂ ನಾಮ ಸ್ವಹೃದಯಮಾರಭ್ಯ ಯಾ ಬ್ರಹ್ಮಪರ್ಯಂತಾ ಗತಿಃ ತಸ್ಯಾಃ ಶರೀರತ್ಯಾಗ-ಕಾಲೇಽನುಸ್ಮರಣಾಚ್ಚ । ನ ಚೈವಂ ಸತಿ ಜ್ಞಾನಿನಾಮುತ್ಕ್ರಮಣಂ ಜ್ಞಾನಫಲಂ ನ ಭವತಿ । ಗತ್ಯನುಸ್ಮರಣಸ್ಯ ಜ್ಞಾನಶೇಷತ್ವಾತ್ । ನ ಹೀತಿಕರ್ತವ್ಯತಾಮಪೇಕ್ಷಮಾಣೋ ಹೇತುರ-ಹೇತುರ್ಭವತಿ । **ಗತ್ಯನುಸ್ಮೃತಿಶ್ಚ ಕರ್ಮಾವಸಾನಸಮಯ ಏವ ನ ಮರಣಾಂತರೇ** । ''ಜ್ಞಾನಿನಾಂ ಕರ್ಮಯುಕ್ತಾನಾಂ ಕಾಯತ್ಯಾಗಕ್ಷಣೋ ಯದಾ । ವಿಷ್ಣುಮಾಯಾ ತದಾ ತೇಷಾಂ ಮನೋ ಬಾಹ್ಯಂ ಕರೋತಿ ಹಿ'' ॥ ಇತಿ ಸ್ಮೃತೇಃ । ಗತ್ಯನುಸ್ಮರಣಂ ತತ್ಪ್ರಾಪ್ತಿ-ಕಾರಣಮಿತ್ಯೇವ ಕುತಃ । 'ಯಂ ಯಂ ವಾಽಪಿ' ಇತಿ ಸ್ಮೃತೇರೇವ ಇತಿ ಭಾವಃ ।''

(ತತ್ತ್ವಪ್ರಕಾಶಿಕಾ 4-2-17)

ಅಂದಮೇಲೆ ಕೇವಲ ಅಂತಕಾಲದಲ್ಲಿ ಹರಿಸ್ಮರಣೆ ಮಾಡಿದರೆ ಸಾಕು. ಮೋಕ್ಷ ಸಿಗುತ್ತದೆ ಎಂದು ತಿಳಿಯುವುದು ತಪ್ಪು. ಆ ರೀತಿಯ ಅಂತಕಾಲೀನ ಹರಿಸ್ಮರಣೆ ಬರಬೇಕಾದರೆ ನಿರಂತರ ಶಾಸ್ತ್ರಶ್ರವಣ - ಮನನ-ಭಗವದ್ಧ್ಯಾನಗಳ ಸಾಧನೆ ಅತ್ಯಾವಶ್ಯಕ. ಆದ್ದರಿಂದ ಶಾಸ್ತ್ರಾಧ್ಯಯನಾದಿ-ಗಳಲ್ಲಿ ಪ್ರವೃತ್ತರಾಗಬೇಕಾದದ್ದು ಸಾಧಕನ ಮೊದಲ ಕರ್ತವ್ಯ.

★★★

## ಕರ್ಮಗಳು - ಆಚರಣೆ ವಿಭಾಗ

1. **ಅಭಿಷೇಕದ ಮೊದಲು 'ಸಾಲಿಗ್ರಾಮಶಿಲಾಯಾಂ ತು ನಿತ್ಯಂ ಸನ್ನಿಹಿತಃ ಕಲಿಃ' ಎಂದು ಕಲಿಯ ನಿವಾರಣೆಗಾಗಿ ಅಭಿಷೇಕ ಮಾಡುವುದುಂಟು. ಭಗವಂತನ ವಿಶೇಷ ಸನ್ನಿಧಾನವುಳ್ಳ, ಪವಿತ್ರವಾದ ಸಾಲಿಗ್ರಾಮಾದಿಗಳ ಮೇಲೂ ಕಲಿಯ ಬಾಧೆ ಇದೆಯೇ?**

    **ದೇವರ ಮೇಲಿನ ಕಲಿಯನ್ನು ನಾವೇ ತೆಗೆದುಹಾಕುವ ಪ್ರಸಂಗ ಬಂದರೆ ನಮಗೆ ಆಗುವ ಕಲಿಬಾಧೆಯನ್ನು ಅವನು ಹೇಗೆ ಪರಿಹರಿಸುತ್ತಾನೆ?**

    ಕಲಿಯ ಬಾಧೆ ಭಗವಂತನಿಗೆ ಇಲ್ಲ. ಭಗವಂತನು ಎಲ್ಲೆಡೆ ವ್ಯಾಪ್ತನಾದರೂ ಸಾಲಿಗ್ರಾಮದಲ್ಲಿ, ಚೇತನರಲ್ಲಿ ವಿಶೇಷವಾದ ಸನ್ನಿಧಾನವನ್ನು ಇಟ್ಟಿದ್ದಾನೆ. ಅದರಲ್ಲಿಯೂ ಅಚೇತನವಾದ ಸಾಲಿಗ್ರಾಮಾದಿಗಳಿಗಿಂತಲೂ ಹೆಚ್ಚಿನ ಸನ್ನಿಧಾನ ಚೇತನರಲ್ಲಿ (ಜೀವಸ್ವರೂಪದಲ್ಲಿ) ಇದೆ ಎಂದು ಕಪಿಲನಾಮಕ-ನಾದ ಪರಮಾತ್ಮನು ದೇವಹೂತಿಗೆ ಉಪದೇಶಿಸಿದ್ದನ್ನು ತೃತೀಯಸ್ಕಂಧ ಭಾಗವತದಲ್ಲಿ ಕಾಣುತ್ತೇವೆ.

    ಹಾಗಾದರೆ ಸಾಲಿಗ್ರಾಮಕ್ಕೆ ಮಾತ್ರ ಏಕೆ? ಅದಕ್ಕಿಂತಲೂ ವಿಶೇಷ ಸನ್ನಿಧಾನವುಳ್ಳ ನಮಗೆ ಏಕೆ ಕಲಿಯ ಬಾಧೆ? ಆ ಕಲಿಯ ಬಾಧೆ ಪರಿಹಾರಕ್ಕಾಗಿ **'ನಿಖಿಲಕಲಿಕೃತಕಲ್ಮಷಾಪನೋದನಪಟುತರೇ'** ಎಂದು ಹೇಳುವಂತೆ ಭಾಗವತಾದಿಗಳನ್ನು ನಾವು ಏಕೆ ಕೇಳಬೇಕು? ಎಂಬ ಪ್ರಶ್ನೆ ಸಮಾನವಾಗುತ್ತದೆ. ಅದಕ್ಕೆಲ್ಲ ಒಂದೇ ಉತ್ತರ ''ಸಾಲಿಗ್ರಾಮಾದಿಗಳಲ್ಲಿ ವಿಶೇಷ ಸನ್ನಿಧಾನವಿದ್ದರೂ ಕೂಡ ಆ ಸಾಲಿಗ್ರಾಮಾದಿಗಳನ್ನು ಪೂಜಿಸಲು ಹೊರಟ ನಮಗೆ ಆ ಭಗವಂತನ ವಿಶೇಷ ಸಾನ್ನಿಧ್ಯದ ಉಪಯೋಗ ಮಾಡಿಕೊಳ್ಳುವುದಕ್ಕೆ ಪ್ರತಿಬಂಧಕನಾಗಿ ಕಲಿಯು ಇರುತ್ತಾನೆ. ಹೊರತು ದೇವರಿಗೆ ಪ್ರತಿಬಂಧಕನಾಗಿ ಇರುವುದಿಲ್ಲ.

ಆ ಕಡೆ ದೇವರು ಈ ಕಡೆ ನಾವು. ಆ ದೇವರ ಸಾನ್ನಿಧ್ಯದ ಉಪಯೋಗ ಮಾಡಿಕೊಳ್ಳುವುದಕ್ಕೆ ನಮಗೆ ಪ್ರತಿಬಂಧಕನಾಗಿ ಮಧ್ಯದಲ್ಲಿ ಇದ್ದ ಕಲಿಯನ್ನು ತೊಳೆಯುವುದಕ್ಕೆ ಕಲಿನಿವಾರಣಾಮಂತ್ರದಿಂದ ಅಭಿಷೇಕವೇ ಹೊರತು ದೇವರಿಗೆ ಪ್ರತಿಬಂಧಕನಾದ ಕಲಿಯ ನಿವಾರಣೆಗಾಗಿ ಅಲ್ಲ.''

ಒಂದು ಮಣಿಯ ಮೇಲೆ ಹೊಲಸು ಕೂತಿರುತ್ತದೆ. ಭಾರೀ ಪ್ರಕಾಶ-ಮಾನವಾದ ಮಣಿಗೆ (ಮಣಿಯ ಪ್ರಕಾಶಕ್ಕೆ) ಆ ಹೊಲಸು ಪ್ರತಿಬಂಧಕ-ವಾಗಿಲ್ಲ. ಅದು ಪ್ರಕಾಶಮಾನವಾಗಿಯೇ ಇದೆ. ಆದರೆ ಆ ಮಣಿಯ ಮೇಲೆ ಬಿದ್ದ ಹೊಲಸಿನಿಂದ ಅದರ ಉಪಯೋಗ ನಮಗೆ ಆಗುತ್ತಿಲ್ಲ. ಅರ್ಥಾತ್ ಆ ಹೊಲಸು ನಮಗೆ ಪ್ರತಿಬಂಧಕವಾಗಿದೆ ಹೊರತು ಮಣ್ಣಿಗೆ ಅಲ್ಲ. ಅದರಂತೆ ನಮಗೆ ಪ್ರತಿಬಂಧಕವಾದ ಹೊಲಸನ್ನು ಸರಿಸಿ ಉಪಯೋಗ ಮಾಡಿಕೊಳ್ಳುವಂತೆ ಭಗವಂತನು ಜಾಜ್ವಲ್ಯಮಾನನಾಗಿ, ಸ್ವಪ್ರಕಾಶನಾಗಿ ಸಾಲಿಗ್ರಾಮಾದಿಗಳಲ್ಲಿ ಇರುವಾಗಲೂ ಸಹ ಅವನ ಸಾನ್ನಿಧ್ಯದ ಮೇಲೆ ಧೂಲೀರೂಪದಲ್ಲಿ ಆವರಿಸಿರುವ ಕಲಿಯು ನಮಗೆ ಪ್ರತಿಬಂಧಕ-ನಾಗಿರುತ್ತಾನೆ. ಅವನ ನಿವಾರಣೆಗಾಗಿ ಕಲಿನಿವಾರಣಾಮಂತ್ರದಿಂದ ಅಭಿಷೇಕ ಮಾಡುವುದು. ಹೊರತು ಭಗವಂತನಿಗೆ ಪ್ರತಿಬಂಧಕನಾಗಿರುವ ಕಲಿಯ ನಿವಾರಣೆಗಾಗಿ ಅಲ್ಲ.

**2. ದೇವರಪೂಜೆಗಾಗಿ ಹೂವು-ತುಳಸಿಗಳನ್ನು ಬಿಡಿಸುವಾಗ ಒಂದೇ ಪಾತ್ರೆಯಲ್ಲಿ ಹಾಕಿಕೊಂಡು ತರಬಹುದೇ? ಅಥವಾ ವ್ಯತ್ಯಾಸವಿದೆಯೇ?**

ಹೂವು-ತುಳಸಿಗಳನ್ನು ಬೇರೆ ಬೇರೆ ಪಾತ್ರೆಗಳಲ್ಲಿಯೇ ತರಬೇಕು. ಅರ್ಥಾತ್ ಒಂದೇ ಪಾತ್ರೆಯಲ್ಲಿ ಎರಡನ್ನೂ ತರಬಾರದು.

ಹೂವು ತರುವುದರಲ್ಲಿ ಹಾಗೂ ತುಳಸಿ ತರುವುದರಲ್ಲಿ ಬಹಳ ವ್ಯತ್ಯಾಸವಿದೆ. ಹೂವನ್ನು ತರುವಾಗ, ಸ್ನಾನದ ಮೊದಲು ಕೈ-ಕಾಲುಗಳನ್ನು ತೊಳೆದು ಶುದ್ಧನಾಗಿ ತರಬೇಕು. ಆದರೆ ತುಳಸಿಯನ್ನು ತರಬೇಕಾದರೆ, ಸ್ನಾನವನ್ನು ಮಾಡಿದ ನಂತರವೇ ತರುವ ನಿಯಮ.

ಸ್ನಾನ ಮಾಡಿ ತುಳಸಿ ತಂದು ಪೂಜೆಗಾಗಿ ಮತ್ತೊಮ್ಮೆ ಸ್ನಾನ ಮಾಡಬೇಕು. ಅಥವಾ ಯಾವುದೇ ಮೈಲಿಗೆಯ ಸಂಪರ್ಕವಿಲ್ಲದೇ ತುಳಸಿ ಬೆಳೆದಿದ್ದರೆ, ಸ್ನಾನದ ನಂತರ ತುಳಸಿ ತಂದು ಅದೇ ಶುದ್ಧಮಡಿಯಿಂದಲೇ ಪೂಜೆ

ಮಾಡಬಹುದು. ಆದರೆ ಸ್ನಾನ ಮಾಡದೇ ತುಳಸಿಯನ್ನು ತರಬಾರದು. ಆದ್ದರಿಂದ ಸ್ನಾನ ಮಾಡದೇ ಶುದ್ಧವಾಗಿ ಹೂವನ್ನು ತರಬೇಕು.[1] ಸ್ನಾನ ಮಾಡಿಯೇ ತುಳಸಿಯನ್ನು ತರಬೇಕು.[2]

ಹೂವು-ತುಳಸೀ ಎರಡನ್ನೂ ಸೇರಿಸಿ ತರಬಾರದು. ಶುದ್ಧವಾದ ಬೇರೆ ಬೇರೆ ಪಾತ್ರೆಗಳಲ್ಲಿ ತರಬೇಕು. ಹೊರತು ಬಟ್ಟೆಯಲ್ಲಿ ಹಾಕಿ(ಕಟ್ಟಿ)ಕೊಂಡು ಅಥವಾ ಕೈಯಲ್ಲಿಯೇ ಇಟ್ಟುಕೊಂಡು ತರಬಾರದು.[3]

ಹೂವು-ತುಳಸಿಗಳನ್ನು ಕೊಂಡು (ಖರೀದಿಸಿ) ತರಬಾರದು.[4] ತೋಟದಲ್ಲಿ ಅಥವಾ ಮನೆಯಲ್ಲಿ ಬೆಳೆದ ಹೂವು-ತುಳಸಿಗಳನ್ನು ತರಬೇಕು ಎಂದು ಶಾಸ್ತ್ರದಲ್ಲಿ ನಿಯಮ ಹೇಳಿದ್ದಾರೆ.[5]

---

2.1 ''ತಥಾ ಚ ಸ್ನಾತ್ವೈವ ತುಲಸ್ಯಾದೇಃ ಆಹರಣಮ್, ಪುಷ್ಪಾಣಾಂ ತು ಸ್ನಾನಾತ್ ಪೂರ್ವಮೇವ ಆಹರಣಮ್ । ಉಭಯತ್ರ ಪ್ರಮಾಣಂ ತು ತತ್ತತ್ಸಮರ್ಪಣಪ್ರಕರಣೇ ವಕ್ಷ್ಯಾಮಃ ।''

''ಸ್ನಾನಂ ಕೃತ್ವಾ ತು ಯೇ ಕೇಚಿತ್ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ ।
ದೇವತಾಸ್ತನ್ನ ಗೃಹ್ಣಂತಿ ಭಸ್ಮೀಭವತಿ ಕಾಷ್ಠವತ್ ॥
ಇತಿ ಹಾರಿತೇನ ಸ್ನಾತ್ವಾ ಪುಷ್ಪಚಯನನಿಷೇಧಕರಣಾತ್ ।''

2.2 ''ಅಸ್ನಾತ್ವಾ ತುಲಸೀಂ ಛಿತ್ವಾ ಯೇಽರ್ಚಯಂತಿ ಜನಾರ್ದನಮ್ ।
ಅಶುದ್ಧಾ ಸಂಭವೇತ್ ಪೂಜಾ ಪಂಚಗವ್ಯೇನ ಶುದ್ಧ್ಯತಿ ॥''
(ಶೇಷಾಚಾರ್ಯಸೂನು ಜಯರಾಮಾಚಾರ್ಯವಿರಚಿತಾ ಪೂಜಾಕಲ್ಪಲತಾ - ಮಹಾಪೂಜಾ - ಗಂಧಾದಿಸಮರ್ಪಣಮ್)

2.3 ''ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ವಾ ।
ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ ॥''
''ಹಸ್ತಾನೀತಂ ಪಟಾನೀತಂ ಏರಂಡೈರರ್ಕಪರ್ಣಕೈಃ ।
ಯಃ ಪೂಜಯೇದ್ಧರಿಂ ಭಕ್ತ್ಯಾ ಹ್ಯಬ್ದಪುಣ್ಯಂ ವಿನಶ್ಯತಿ ॥''
(ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ - ನಿಷಿದ್ಧಸ್ಥಾನಮ್)

2.4 ''ಸ್ವಾರಾಮ ಉತ್ತಮಾ ಪೂಜಾ ವನಪೂಜಾ ತು ಮಧ್ಯಮಾ ।
ವಿಕ್ರೀತಾ ತು ಕನಿಷ್ಠಾ ಸ್ಯಾತ್ ಯಾಚಮಾನಂ ತು ನಿಷ್ಫಲಮ್ ॥'' (ಸ್ಮೃತಿ-ಆಹ್ನಿಕ)

2.5 ''ಆಹರೇತ್ತುಲಸೀಂ ದೂರ್ವಾಂ ಪುಷ್ಪಾಣ್ಯದ್ಯತನಾನಿ ಚ ।
ಯಥಾ ಕಾಲೋಪಪನ್ನಾನಿ ಸ್ವಾರಾಮ ವನಜಾನ್ಯಪಿ ॥
ಅಕ್ರೀತಾನ್ಯಪ್ರದತ್ತಾನಿ ಚೌರ್ಯಾಲ್ಲಬ್ಧಾನಿ ಯಾನಿ ಚ ।
ಶೂದ್ರಾಹೃತಾನಿ ವಾ ಭೂಮೌ ಪತಿತಾನಿ ತಥೈವ ಚ ॥
ಏರಂಡಾರ್ಕಜಪತ್ರೇಷು ಚಾಹೃತಾನಿ ಕರೇ ತಥಾ ।
ಪಟಾಹೃತಾನಿ ಯಾನಿ ಸ್ಯುಃ ವರ್ಜಯೇತ್ತಾನಿ ಯತ್ನತಃ॥''
(ಪದ್ಯಮಾಲಾ ಶ್ಲೋ - 2, 3, 4)

ಆ ಕಡೆ ದೇವರು ಈ ಕಡೆ ನಾವು. ಆ ದೇವರ ಸಾನ್ನಿಧ್ಯದ ಉಪಯೋಗ ಮಾಡಿಕೊಳ್ಳುವುದಕ್ಕೆ ನಮಗೆ ಪ್ರತಿಬಂಧಕನಾಗಿ ಮಧ್ಯದಲ್ಲಿ ಇದ್ದ ಕಲಿಯನ್ನು ತೊಳೆಯುವುದಕ್ಕೆ ಕಲಿನಿವಾರಣಾಮಂತ್ರದಿಂದ ಅಭಿಷೇಕವೇ ಹೊರತು ದೇವರಿಗೆ ಪ್ರತಿಬಂಧಕನಾದ ಕಲಿಯ ನಿವಾರಣೆಗಾಗಿ ಅಲ್ಲ.''

ಒಂದು ಮಣಿಯ ಮೇಲೆ ಹೊಲಸು ಕೂತಿರುತ್ತದೆ. ಭಾರೀ ಪ್ರಕಾಶ-ಮಾನವಾದ ಮಣಿಗೆ (ಮಣಿಯ ಪ್ರಕಾಶಕ್ಕೆ) ಆ ಹೊಲಸು ಪ್ರತಿಬಂಧಕ-ವಾಗಿಲ್ಲ. ಅದು ಪ್ರಕಾಶಮಾನವಾಗಿಯೇ ಇದೆ. ಆದರೆ ಆ ಮಣಿಯ ಮೇಲೆ ಬಿದ್ದ ಹೊಲಸಿನಿಂದ ಅದರ ಉಪಯೋಗ ನಮಗೆ ಆಗುತ್ತಿಲ್ಲ. ಅರ್ಥಾತ್ ಆ ಹೊಲಸು ನಮಗೆ ಪ್ರತಿಬಂಧಕವಾಗಿದೆ ಹೊರತು ಮಣ್ಣಿಗೆ ಅಲ್ಲ. ಅದರಂತೆ ನಮಗೆ ಪ್ರತಿಬಂಧಕವಾದ ಹೊಲಸನ್ನು ಸರಿಸಿ ಉಪಯೋಗ ಮಾಡಿಕೊಳ್ಳುವಂತೆ ಭಗವಂತನು ಜಾಜ್ವಲ್ಯಮಾನನಾಗಿ, ಸ್ವಪ್ರಕಾಶನಾಗಿ ಸಾಲಿಗ್ರಾಮಾದಿಗಳಲ್ಲಿ ಇರುವಾಗಲೂ ಸಹ ಅವನ ಸಾನ್ನಿಧ್ಯದ ಮೇಲೆ ಧೂಲೀರೂಪದಲ್ಲಿ ಆವರಿಸಿರುವ ಕಲಿಯು ನಮಗೆ ಪ್ರತಿಬಂಧಕ-ನಾಗಿರುತ್ತಾನೆ. ಅವನ ನಿವಾರಣೆಗಾಗಿ ಕಲಿನಿವಾರಣಾಮಂತ್ರದಿಂದ ಅಭಿಷೇಕ ಮಾಡುವುದು. ಹೊರತು ಭಗವಂತನಿಗೆ ಪ್ರತಿಬಂಧಕನಾಗಿರುವ ಕಲಿಯ ನಿವಾರಣೆಗಾಗಿ ಅಲ್ಲ.

**2. ದೇವರಪೂಜೆಗಾಗಿ ಹೂವು-ತುಳಸಿಗಳನ್ನು ಬಿಡಿಸುವಾಗ ಒಂದೇ ಪಾತ್ರೆಯಲ್ಲಿ ಹಾಕಿಕೊಂಡು ತರಬಹುದೇ? ಅಥವಾ ವ್ಯತ್ಯಾಸವಿದೆಯೇ?**

ಹೂವು-ತುಳಸಿಗಳನ್ನು ಬೇರೆ ಬೇರೆ ಪಾತ್ರೆಗಳಲ್ಲಿಯೇ ತರಬೇಕು. ಅರ್ಥಾತ್ ಒಂದೇ ಪಾತ್ರೆಯಲ್ಲಿ ಎರಡನ್ನೂ ತರಬಾರದು.

ಹೂವು ತರುವುದರಲ್ಲಿ ಹಾಗೂ ತುಳಸಿ ತರುವುದರಲ್ಲಿ ಬಹಳ ವ್ಯತ್ಯಾಸವಿದೆ. ಹೂವನ್ನು ತರುವಾಗ, ಸ್ನಾನದ ಮೊದಲು ಕೈ-ಕಾಲುಗಳನ್ನು ತೊಳೆದು ಶುದ್ಧನಾಗಿ ತರಬೇಕು. ಆದರೆ ತುಳಸಿಯನ್ನು ತರಬೇಕಾದರೆ, ಸ್ನಾನವನ್ನು ಮಾಡಿದ ನಂತರವೇ ತರುವ ನಿಯಮ.

ಸ್ನಾನ ಮಾಡಿ ತುಳಸಿ ತಂದು ಪೂಜೆಗಾಗಿ ಮತ್ತೊಮ್ಮೆ ಸ್ನಾನ ಮಾಡಬೇಕು. ಅಥವಾ ಯಾವುದೇ ಮೈಲಿಗೆಯ ಸಂಪರ್ಕವಿಲ್ಲದೇ ತುಳಸಿ ಬೆಳೆದಿದ್ದರೆ, ಸ್ನಾನದ ನಂತರ ತುಳಸಿ ತಂದು ಅದೇ ಶುದ್ಧಮಡಿಯಿಂದಲೇ ಪೂಜೆ

ಮಾಡಬಹುದು. ಆದರೆ ಸ್ನಾನ ಮಾಡದೇ ತುಳಸಿಯನ್ನು ತರಬಾರದು. ಆದ್ದರಿಂದ ಸ್ನಾನ ಮಾಡದೇ ಶುದ್ಧವಾಗಿ ಹೂವನ್ನು ತರಬೇಕು.[1] ಸ್ನಾನ ಮಾಡಿಯೇ ತುಳಸಿಯನ್ನು ತರಬೇಕು.[2]

ಹೂವು-ತುಳಸೀ ಎರಡನ್ನೂ ಸೇರಿಸಿ ತರಬಾರದು. ಶುದ್ಧವಾದ ಬೇರೆ ಬೇರೆ ಪಾತ್ರೆಗಳಲ್ಲಿ ತರಬೇಕು. ಹೊರತು ಬಟ್ಟೆಯಲ್ಲಿ ಹಾಕಿ(ಕಟ್ಟಿ)ಕೊಂಡು ಅಥವಾ ಕೈಯಲ್ಲಿಯೇ ಇಟ್ಟುಕೊಂಡು ತರಬಾರದು.[3]

ಹೂವು-ತುಳಸಿಗಳನ್ನು ಕೊಂಡು (ಖರೀದಿಸಿ) ತರಬಾರದು.[4] ತೋಟದಲ್ಲಿ ಅಥವಾ ಮನೆಯಲ್ಲಿ ಬೆಳೆದ ಹೂವು-ತುಳಸಿಗಳನ್ನು ತರಬೇಕು ಎಂದು ಶಾಸ್ತ್ರದಲ್ಲಿ ನಿಯಮ ಹೇಳಿದ್ದಾರೆ.[5]

---

2.1 ''ತಥಾ ಚ ಸ್ನಾತ್ವೈವ ತುಲಸ್ಯಾದೇಃ ಆಹರಣಮ್, ಪುಷ್ಪಾಣಾಂ ತು ಸ್ನಾನಾತ್ ಪೂರ್ವಮೇವ ಆಹರಣಮ್ । ಉಭಯತ್ರ ಪ್ರಮಾಣಂ ತು ತತ್ತತ್ಸಮರ್ಪಣಪ್ರಕರಣೇ ವಕ್ಷ್ಯಾಮಃ ।''

''ಸ್ನಾನಂ ಕೃತ್ವಾ ತು ಯೇ ಕೇಚಿತ್ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ ।
ದೇವತಾಸ್ತನ್ನ ಗೃಹ್ಣಂತಿ ಭಸ್ಮೀಭವತಿ ಕಾಷ್ಠವತ್ ॥
ಇತಿ ಹಾರಿತೇನ ಸ್ನಾತ್ವಾ ಪುಷ್ಪಚಯನನಿಷೇಧಕರಣಾತ್ ।''

2.2 ''ಅಸ್ನಾತ್ವಾ ತುಲಸೀಂ ಛಿತ್ವಾ ಯೇಽರ್ಚಯಂತಿ ಜನಾರ್ದನಮ್ ।
ಅಶುದ್ಧಾ ಸಂಭವೇತ್ ಪೂಜಾ ಪಂಚಗವ್ಯೇನ ಶುದ್ಧ್ಯತಿ ॥''
(ಶೇಷಾಚಾರ್ಯಸೂನು ಜಯರಾಮಾಚಾರ್ಯವಿರಚಿತಾ ಪೂಜಾಕಲ್ಪಲತಾ - ಮಹಾಪೂಜಾ - ಗಂಧಾದಿಸಮರ್ಪಣಮ್)

2.3 ''ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ವಾ ।
ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ ॥''
''ಹಸ್ತಾನೀತಂ ಪಟಾನೀತಂ ಏರಂಡೈರರ್ಕಪರ್ಣಕೈಃ ।
ಯಃ ಪೂಜಯೇದ್ಧರಿಂ ಭಕ್ತ್ಯಾ ಹ್ಯಬ್ದಪುಣ್ಯಂ ವಿನಶ್ಯತಿ ॥''
(ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ - ನಿಷಿದ್ಧಸ್ಥಾನಮ್)

2.4 ''ಸ್ವಾರಾಮ ಉತ್ತಮಾ ಪೂಜಾ ವನಪೂಜಾ ತು ಮಧ್ಯಮಾ ।
ವಿಕ್ರೀತಾ ತು ಕನಿಷ್ಠಾ ಸ್ಯಾತ್ ಯಾಚಮಾನಂ ತು ನಿಷ್ಫಲಮ್ ॥'' (ಸ್ಮೃತಿ-ಆಹ್ನಿಕ)

2.5 ''ಆಹರೇತ್ತುಲಸೀಂ ದೂರ್ವಾಂ ಪುಷ್ಪಾಣ್ಯದ್ಯತನಾನಿ ಚ ।
ಯಥಾ ಕಾಲೋಪಪನ್ನಾನಿ ಸ್ವಾರಾಮ ವನಜಾನ್ಯಪಿ ॥
ಅಕ್ರೀತಾನ್ಯಪ್ರದತ್ತಾನಿ ಚೌರ್ಯಾಲ್ಲಬ್ಧಾನಿ ಯಾನಿ ಚ ।
ಶೂದ್ರಾಹೃತಾನಿ ವಾ ಭೂಮೌ ಪತಿತಾನಿ ತಥೈವ ಚ ॥
ಏರಂಡಾರ್ಕಜಪತ್ರೇಷು ಚಾಹೃತಾನಿ ಕರೇ ತಥಾ ।
ಪಟಾಹೃತಾನಿ ಯಾನಿ ಸ್ಯುಃ ವರ್ಜಯೇತ್ತಾನಿ ಯತ್ನತಃ॥''
(ಪದ್ಯಮಾಲಾ ಶ್ಲೋ - 2, 3, 4)

ಆ ಕಡೆ ದೇವರು ಈ ಕಡೆ ನಾವು. ಆ ದೇವರ ಸಾನ್ನಿಧ್ಯದ ಉಪಯೋಗ ಮಾಡಿಕೊಳ್ಳುವುದಕ್ಕೆ ನಮಗೆ ಪ್ರತಿಬಂಧಕನಾಗಿ ಮಧ್ಯದಲ್ಲಿ ಇದ್ದ ಕಲಿಯನ್ನು ತೊಳೆಯುವುದಕ್ಕೆ ಕಲಿನಿವಾರಣಾಮಂತ್ರದಿಂದ ಅಭಿಷೇಕವೇ ಹೊರತು ದೇವರಿಗೆ ಪ್ರತಿಬಂಧಕನಾದ ಕಲಿಯ ನಿವಾರಣೆಗಾಗಿ ಅಲ್ಲ.''

ಒಂದು ಮಣಿಯ ಮೇಲೆ ಹೊಲಸು ಕೂತಿರುತ್ತದೆ. ಭಾರೀ ಪ್ರಕಾಶ-ಮಾನವಾದ ಮಣಿಗೆ (ಮಣಿಯ ಪ್ರಕಾಶಕ್ಕೆ) ಆ ಹೊಲಸು ಪ್ರತಿಬಂಧಕ-ವಾಗಿಲ್ಲ. ಅದು ಪ್ರಕಾಶಮಾನವಾಗಿಯೇ ಇದೆ. ಆದರೆ ಆ ಮಣಿಯ ಮೇಲೆ ಬಿದ್ದ ಹೊಲಸಿನಿಂದ ಅದರ ಉಪಯೋಗ ನಮಗೆ ಆಗುತ್ತಿಲ್ಲ. ಅರ್ಥಾತ್ ಆ ಹೊಲಸು ನಮಗೆ ಪ್ರತಿಬಂಧಕವಾಗಿದೆ ಹೊರತು ಮಣಿಗೆ ಅಲ್ಲ. ಅದರಂತೆ ನಮಗೆ ಪ್ರತಿಬಂಧಕವಾದ ಹೊಲಸನ್ನು ಸರಿಸಿ ಉಪಯೋಗ ಮಾಡಿಕೊಳ್ಳುವಂತೆ ಭಗವಂತನು ಜಾಜ್ವಲ್ಯಮಾನನಾಗಿ, ಸ್ವಪ್ರಕಾಶನಾಗಿ ಸಾಲಿಗ್ರಾಮಾದಿಗಳಲ್ಲಿ ಇರುವಾಗಲೂ ಸಹ ಅವನ ಸಾನ್ನಿಧ್ಯದ ಮೇಲೆ ಧೂಲೀರೂಪದಲ್ಲಿ ಆವರಿಸಿರುವ ಕಲಿಯು ನಮಗೆ ಪ್ರತಿಬಂಧಕ-ನಾಗಿರುತ್ತಾನೆ. ಅವನ ನಿವಾರಣೆಗಾಗಿ ಕಲಿನಿವಾರಣಾಮಂತ್ರದಿಂದ ಅಭಿಷೇಕ ಮಾಡುವುದು. ಹೊರತು ಭಗವಂತನಿಗೆ ಪ್ರತಿಬಂಧಕನಾಗಿರುವ ಕಲಿಯ ನಿವಾರಣೆಗಾಗಿ ಅಲ್ಲ.

**2. ದೇವರಪೂಜೆಗಾಗಿ ಹೂವು-ತುಳಸಿಗಳನ್ನು ಬಿಡಿಸುವಾಗ ಒಂದೇ ಪಾತ್ರೆಯಲ್ಲಿ ಹಾಕಿಕೊಂಡು ತರಬಹುದೇ? ಅಥವಾ ವ್ಯತ್ಯಾಸವಿದೆಯೇ?**

ಹೂವು-ತುಳಸಿಗಳನ್ನು ಬೇರೆ ಬೇರೆ ಪಾತ್ರೆಗಳಲ್ಲಿಯೇ ತರಬೇಕು. ಅರ್ಥಾತ್ ಒಂದೇ ಪಾತ್ರೆಯಲ್ಲಿ ಎರಡನ್ನೂ ತರಬಾರದು.

ಹೂವು ತರುವುದರಲ್ಲಿ ಹಾಗೂ ತುಳಸಿ ತರುವುದರಲ್ಲಿ ಬಹಳ ವ್ಯತ್ಯಾಸವಿದೆ. ಹೂವನ್ನು ತರುವಾಗ, ಸ್ನಾನದ ಮೊದಲು ಕೈ-ಕಾಲುಗಳನ್ನು ತೊಳೆದು ಶುದ್ಧನಾಗಿ ತರಬೇಕು. ಆದರೆ ತುಳಸಿಯನ್ನು ತರಬೇಕಾದರೆ, ಸ್ನಾನವನ್ನು ಮಾಡಿದ ನಂತರವೇ ತರುವ ನಿಯಮ.

ಸ್ನಾನ ಮಾಡಿ ತುಳಸಿ ತಂದು ಪೂಜೆಗಾಗಿ ಮತ್ತೊಮ್ಮೆ ಸ್ನಾನ ಮಾಡಬೇಕು. ಅಥವಾ ಯಾವುದೇ ಮೈಲಿಗೆಯ ಸಂಪರ್ಕವಿಲ್ಲದೇ ತುಳಸಿ ಬೆಳೆದಿದ್ದರೆ, ಸ್ನಾನದ ನಂತರ ತುಳಸಿ ತಂದು ಅದೇ ಶುದ್ಧಮಡಿಯಿಂದಲೇ ಪೂಜೆ

ಮಾಡಬಹುದು. ಆದರೆ ಸ್ನಾನ ಮಾಡದೇ ತುಳಸಿಯನ್ನು ತರಬಾರದು. ಆದ್ದರಿಂದ ಸ್ನಾನ ಮಾಡದೇ ಶುದ್ಧವಾಗಿ ಹೂವನ್ನು ತರಬೇಕು.[1] ಸ್ನಾನ ಮಾಡಿಯೇ ತುಳಸಿಯನ್ನು ತರಬೇಕು.[2]

ಹೂವು-ತುಳಸೀ ಎರಡನ್ನೂ ಸೇರಿಸಿ ತರಬಾರದು. ಶುದ್ಧವಾದ ಬೇರೆ ಬೇರೆ ಪಾತ್ರೆಗಳಲ್ಲಿ ತರಬೇಕು. ಹೊರತು ಬಟ್ಟೆಯಲ್ಲಿ ಹಾಕಿ(ಕಟ್ಟಿ)ಕೊಂಡು ಅಥವಾ ಕೈಯಲ್ಲಿಯೇ ಇಟ್ಟುಕೊಂಡು ತರಬಾರದು.[3]

ಹೂವು-ತುಳಸಿಗಳನ್ನು ಕೊಂಡು (ಖರೀದಿಸಿ) ತರಬಾರದು.[4] ತೋಟದಲ್ಲಿ ಅಥವಾ ಮನೆಯಲ್ಲಿ ಬೆಳೆದ ಹೂವು-ತುಳಸಿಗಳನ್ನು ತರಬೇಕು ಎಂದು ಶಾಸ್ತ್ರದಲ್ಲಿ ನಿಯಮ ಹೇಳಿದ್ದಾರೆ.[5]

---

2.1 ''ತಥಾ ಚ ಸ್ನಾತ್ವೈವ ತುಲಸ್ಯಾದೇಃ ಆಹರಣಮ್, ಪುಷ್ಪಾಣಾಂ ತು ಸ್ನಾನಾತ್ ಪೂರ್ವಮೇವ ಆಹರಣಮ್ । ಉಭಯತ್ರ ಪ್ರಮಾಣಂ ತು ತತ್ತತ್ಸಮರ್ಪಣಪ್ರಕರಣೇ ವಕ್ಷ್ಯಾಮಃ ।''

''ಸ್ನಾನಂ ಕೃತ್ವಾ ತು ಯೇ ಕೇಚಿತ್ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ ।
ದೇವತಾಸ್ತನ್ನ ಗೃಹ್ಣಂತಿ ಭಸ್ಮೀಭವತಿ ಕಾಷ್ಠವತ್ ॥
ಇತಿ ಹಾರಿತೇನ ಸ್ನಾತ್ವಾ ಪುಷ್ಪಚಯನನಿಷೇಧಕರಣಾತ್ ।''

2.2 ''ಅಸ್ನಾತ್ವಾ ತುಲಸೀಂ ಛಿತ್ವಾ ಯೇಽರ್ಚಯಂತಿ ಜನಾರ್ದನಮ್ ।
ಅಶುದ್ಧಾ ಸಂಭವೇತ್ ಪೂಜಾ ಪಂಚಗವ್ಯೇನ ಶುಧ್ಯತಿ ॥''
(ಶೇಷಾಚಾರ್ಯಸೂನು ಜಯರಾಮಾಚಾರ್ಯವಿರಚಿತಾ ಪೂಜಾಕಲ್ಪಲತಾ - ಮಹಾಪೂಜಾ - ಗಂಧಾದಿಸಮರ್ಪಣಮ್)

2.3 ''ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ವಾ ।
ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ ॥''
''ಹಸ್ತಾನೀತಂ ಪಟಾನೀತಂ ಏರಂಡೈರರ್ಕಪರ್ಣಕೈಃ ।
ಯಃ ಪೂಜಯೇದ್ಧರಿಂ ಭಕ್ತ್ಯಾ ಹ್ಯಬ್ದಪುಣ್ಯಂ ವಿನಶ್ಯತಿ ॥''
(ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ - ನಿಷಿದ್ಧಸ್ಥಾನಮ್)

2.4 ''ಸ್ವಾರಾಮ ಉತ್ತಮಾ ಪೂಜಾ ವನಪೂಜಾ ತು ಮಧ್ಯಮಾ ।
ವಿಕ್ರೀತಾ ತು ಕನಿಷ್ಠಾ ಸ್ಯಾತ್ ಯಾಚಮಾನಂ ತು ನಿಷ್ಫಲಮ್ ॥'' (ಸ್ಮೃತಿ-ಆಹ್ನಿಕ)

2.5 ''ಆಹರೇತ್ತುಲಸೀಂ ದೂರ್ವಾಂ ಪುಷ್ಪಾಣ್ಯದ್ಯತನಾನಿ ಚ ।
ಯಥಾ ಕಾಲೋಪಪನ್ನಾನಿ ಸ್ವಾರಾಮ ವನಜಾನ್ಯಪಿ ॥
ಅಕ್ರೀತಾನ್ಯಪ್ರದತ್ತಾನಿ ಚೌರ್ಯಾಲ್ಲಬ್ಧಾನಿ ಯಾನಿ ಚ ।
ಶೂದ್ರಾಹೃತಾನಿ ವಾ ಭೂಮೌ ಪತಿತಾನಿ ತಥೈವ ಚ ॥
ಏರಂಡಾರ್ಕಜಪತ್ರೇಷು ಚಾಹೃತಾನಿ ಕರೇ ತಥಾ ।
ಪಟಾಹೃತಾನಿ ಯಾನಿ ಸ್ಯುಃ ವರ್ಜಯೇತ್ತಾನಿ ಯತ್ನತಃ॥''
(ಪದ್ಯಮಾಲಾ ಶ್ಲೋ - 2, 3, 4)

**3. ಸಾಲಿಗ್ರಾಮಾದಿಗಳನ್ನು ಅಥವಾ ಫೋಟೋಗಳನ್ನೂ ಪೆಟ್ಟಿಗೆಯಲ್ಲಿ ಕಟ್ಟಿಡಬೇಕು ಎಂಬ ನಿಯಮವಿದೆಯೇ? ಕಟ್ಟದೇ ಹಾಗೆಯೇ ಇಡಲೂ ಬರುತ್ತದೆಯೇ?**

ಫೋಟೋಗಳಿದ್ದರೆ ಕಟ್ಟಿಡುವ (ಭುಜಂಗಿಸುವ) ಪ್ರಶ್ನೆಯೇ ಇಲ್ಲ. ಸಾಲಿಗ್ರಾಮಾದಿಗಳನ್ನು ಪೆಟ್ಟಿಗೆಯಲ್ಲಿ ಕಟ್ಟಿಡುವ ಪದ್ಧತಿಯೂ ಇದೆ. ಅಥವಾ ಹಾಗೆಯೇ ಒರಸಿಟ್ಟು ಅದರ ಮೇಲೆ ಛವನಿಕಾ(ವಸ್ತ್ರ)ವನ್ನು ಹಾಕಿ, ಮರುದಿನ ಆ ವಸ್ತ್ರವನ್ನು ತೆಗೆದು ಪೂಜಿಸುವ ಪದ್ಧತಿಯೂ ಇದೆ.

**4. ಗರುಡ-ಶೇಷರಿಗೆ ಅಭಿಷೇಕ ಮಾಡಿದ ನೀರನ್ನು ಪ್ರಾಶನ ಮಾಡದೇ ಅರ್ಘ್ಯಪಾತ್ರೆಯಲ್ಲಿ ಹಾಕಬೇಕೋ? ಅಥವಾ ಪ್ರಾಣದೇವರ ತೀರ್ಥದಂತೆ ತೆಗೆದುಕೊಳ್ಳಬೇಕೋ?**

ಗರುಡ-ಶೇಷರಿಗೆ ಅಭಿಷೇಕ ಮಾಡಿದ ನೀರನ್ನು ಗೌರವದಿಂದ ನಮಸ್ಕರಿಸಿ ಅರ್ಘ್ಯಪಾತ್ರೆಯಲ್ಲಿ ಹಾಕಬೇಕು. ಹೊರತು ತೆಗೆದುಕೊಳ್ಳಬಾರದು.[1] ದೇವರ ಹಾಗೂ ಪ್ರಾಣದೇವರ ತೀರ್ಥವನ್ನು ಮಾತ್ರ ತೆಗೆದುಕೊಳ್ಳಬೇಕು.[2]

---

4.1 ''ಯೇ ಭುಂಜಂತ್ಯನ್ಯದೇವಾನಾಮನ್ನಂ ಪತ್ರಜಲಾದಿಕಮ್ )
ಬ್ರಹ್ಮೇಶಾನಾದಿಮುಖ್ಯಾನಾಂ ಗತಿಂ ಗಚ್ಛಂತಿ ನಾರಕೀಮ್ ॥''
(ಬ್ರಹ್ಮಾಂಡ ಅ-16)

''ವಿಷ್ಣುಲಕ್ಷ್ಮೀವಾಯುದೇವಾನ್ ವಿನಾ ದೇವಾಃ ಶಿವಾದಯಃ ।
ಅನ್ಯದೇವಾ ಇತಿ ಪ್ರೋಕ್ತಾಸ್ತೇ ಯೇ ವಿಷ್ಣುಪ್ರಿಯಾ ಅಪಿ ॥''
(ಪ್ರಮಾಣಸಂಗ್ರಹೋದಾಹೃತ ಆಗ್ನೇಯವಚನ)

4.2 ''ವಾಯುಲಕ್ಷ್ಮೀಹರೀಣಾಂ ಚ ತ್ರಯಾಣಾಮರ್ಪಿತಾಶನಮ್ ।
ಗ್ರಾಹ್ಯಮೇವ ಕ್ರಮೇಣ ಸ್ಯಾದ್ ಗ್ರಾಹ್ಯಂ ನಾನ್ಯಾರ್ಪಿತಂ ಕ್ವಚಿತ್ ॥
ಪರಶುಕ್ಲತ್ರಯಸ್ಯ ಸ್ಯಾದ್ದೇವತ್ವಂ ನಾಮೃತಾಂಧಸಾಮ್ ।
ತನ್ನಿವೇದಿತಮನ್ನಾದ್ಯಂ ಭುಂಜೀಯಾನ್ಮುಖ್ಯತೋ ಬುಧಃ ॥
ದೇವದೇವೋ ಯತಃ ಶುದ್ಧೋ ವಾಯುದೇವೋ ಜಗದ್ಗುರುಃ ॥
ಹರಿಪ್ರಿಯಸ್ತತೋ ಗ್ರಾಹ್ಯಮನ್ನಂ ವಾಯ್ವರ್ಪಿತಂ ಬುಧೈಃ ॥'' (ನಾರದೀಯೇ)

**5. ಮಂಗಳಾರತಿ ಮಾಡುವಾಗ ಹಲಗಾರತಿಯ ಮೇಲೆ ಮಂತ್ರಾಕ್ಷತೆಯನ್ನು ಅಥವಾ ತುಳಸಿಯನ್ನು ಏಕೆ ಹಾಕುತ್ತಾರೆ?**

ಹಲಗಾರತಿಯಲ್ಲಿಯೂ ಸಹ ದೇವತೆಗಳ ಚಿಂತನೆ ಮಾಡಬೇಕು ಎಂದಿದೆ. ಹಲಗಾರತಿಯಲ್ಲಿ ಚಂದ್ರ, ಸೂರ್ಯ, ನಾಗ, ಅಗ್ನಿ ಈ ಎಲ್ಲ ದೇವತೆಗಳು ಸನ್ನಿಹಿತರಾಗಿರುತ್ತಾರೆ.[1] ಆ ದೇವತೆಗಳಲ್ಲಿ ಪ್ರಾಣದೇವರು, ಪ್ರಾಣದೇವರಲ್ಲಿ ಭಗವಂತ ಸನ್ನಿಹಿತನಾಗಿರುತ್ತಾನೆ. ಹೀಗೆ ಹಲಗಾರತಿಯಲ್ಲಿ ದೇವತೆಗಳ, ಪ್ರಾಣದೇವರ ಹಾಗೂ ಭಗವಂತನ ವಿಶೇಷ ಸನ್ನಿಧಾನವನ್ನು ಚಿಂತನೆ ಮಾಡಿ ಅವರಿಗೆ ಅಲಂಕಾರ ಮಾಡಬೇಕು. ಹೂವು-ತುಳಸಿ- ಮಂತ್ರಾಕ್ಷತೆಗಳನ್ನು ಹಾಕಬೇಕು. ಆ ದೃಷ್ಟಿಯಿಂದ ಅಲಂಕೃತವಾದ ಹಲಗಾರತಿಯಿಂದಲೇ ಮಂಗಳಾರತಿ ಮಾಡಬೇಕು ಎಂದು ಶಾಸ್ತ್ರದ ವಿಧಿಯಿದೆ.

**6. ದೇವರು ಎಲ್ಲವನ್ನೂ ನಿಯಮದ ಪ್ರಕಾರ ಮಾಡುತ್ತಾನೆ. ನಮ್ಮಲ್ಲಿ ತಪ್ಪಿದ್ದಾಗಲೂ ದೇವರು ನಮಗೆ ಸುಖವನ್ನು ಕೊಡಲು ಸಾಧ್ಯವಿಲ್ಲ. ಅಂದಮೇಲೆ ಘಂಟೆಗಟ್ಟಲೇ ದೇವರೆದುರು ಪ್ರಾರ್ಥನೆ ಮಾಡಿದರೆ ಏನು ಪ್ರಯೋಜನ?**

**ದೇವರು ನಿಯಮ ಬಿಟ್ಟು ಬರುತ್ತಾನೆಯೇ? ಬರುವುದೇ ಆದರೆ ಸತ್ಯಸಂಕಲ್ಪ ಹೇಗೆ ಆಗುತ್ತಾನೆ ?**

ನಾವು ಮಾಡಿರುವ ಕರ್ಮ(ಪಾಪ)ಗಳಿಗೆ ಪರಮಾತ್ಮನ ನಾಮಸ್ಮರಣೆ, ಪ್ರಾರ್ಥನೆ, ಪ್ರಾಯಶ್ಚಿತ್ತಗಳನ್ನು ಮಾಡುವುದರಿಂದ ಆ ವಿಧವಾದ ಪಾಪಗಳ

---

5.1 ''ತತ್ತದಭಿಮಾನಿದೇವತಾಸ್ತತ್ರೈವ ಅನ್ಯತ್ರ -
ಸಪ್ತವಿಂಶತಿನಕ್ಷತ್ರಂ ವಾ ನಾಲಂ ವಾಸುಕಿದೈವತಮ್ ।
ಪಾದಾನಾಮರ್ಕಚಂದ್ರೌಚ ದೀಪಾನಾಮಧಿದೇವತಾಃ ॥
ಪಾದಾನಾಮರ್ಕಸೋಮೌ ಚ ನಾಲಂ ವಾಸುಕಿದೈವತಮ್ ।
ಅಗ್ನಿಶ್ಚ ದೀಪಪಾತ್ರೇ ಚ ಧೂಪಸ್ಯಾಪ್ಯಧಿದೇವತಾ ॥ಇತಿ॥''

''ದೀಪಸ್ತಂಭೇ ಸಪ್ತವಿಂಶತಿನಕ್ಷತ್ರೇಭ್ಯೋ ನಮಃ । ನಾದೇ ವಾಸುಕಿದೇವತಾಯೈ ನಮಃ । ಪಾದೇ ಅರ್ಕಾಯ ನಮಃ । ಧೂಪಪಾತ್ರೇ ಪಾದೇ ಸೋಮಾಯ ನಮಃ । ನಾಲೇ ವಾಸುಕಿದೇವತಾಯೈ ನಮಃ । ಪಾತ್ರೇ ಅಗ್ನಯೇ ನಮಃ । ತಥೈವ ದೀಪಪಾತ್ರೇ ಚ ।''

(ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ - ಘಂಟಾಲಕ್ಷಣಂ)

ಫಲವನ್ನು ದೇವರು ಕಳೆಯುತ್ತಾನೆ ಎಂದು ಶಾಸ್ತ್ರ ತಿಳಿಸುತ್ತದೆ[1] ಹೀಗಾಗಿ ಅದೂ ಒಂದು ಶಾಸ್ತ್ರದ ನಿಯಮದಲ್ಲಿಯೇ ಸೇರುತ್ತದೆ. ಅದು ಪರಮಾತ್ಮನ ನಿಯಮಕ್ಕೆ ಹೊರಗಾದದ್ದೇನಲ್ಲ.

'ಯಾವ ವ್ಯಕ್ತಿ ಕೆಟ್ಟ ಕೆಲಸ ಮಾಡುತ್ತಾನೆ, ಅದಕ್ಕೆ ಪ್ರಾಯಶ್ಚಿತ್ತ ಮಾಡಿ-ಕೊಳ್ಳುವುದಿಲ್ಲ ಅವನಿಗೆ ಕಷ್ಟ ಕೊಡುತ್ತೇನೆ' ಎನ್ನುವುದು ಭಗವಂತನ ನಿಯಮ. ಕೆಟ್ಟ ಕೆಲಸವನ್ನು ಮಾಡಿ ನಂತರ ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡನೆಂದರೆ ಅವನಿಗೆ ದೇವರು ಕಷ್ಟ ಕೊಡುವುದಿಲ್ಲ. ದೇವರ ನಿಯಮಕ್ಕೆ ಏನು ಭಂಗ? ಪ್ರಾಯಶ್ಚಿತ್ತ ಮಾಡದಿದ್ದರೆ ಕಷ್ಟ ಕೊಡುತ್ತೇನೆ ಎಂಬುವುದು ದೇವರ ನಿಯಮವಾದ್ದರಿಂದ, ಪ್ರಾಯಶ್ಚಿತ್ತ ಮಾಡಿಕೊಂಡಾಗ ಕಷ್ಟ ಕೊಡದಿದ್ದರೆ ದೇವರ ನಿಯಮಕ್ಕೆ ಭಂಗವಿಲ್ಲ.

---

6.1 ''ಸರ್ವಾತ್ಮನಾ ಫಲಹ್ರಾಸೋ ಯದಿ ನಾರಬ್ಧಕರ್ಮಣಃ ।
ಸ್ಯಾತ್ಕಾಮ್ಯವಿಧಿವೈಯರ್ಥ್ಯಂ ....'' (ಅನುವ್ಯಾಖ್ಯಾನ)

''ಯಸ್ತ್ವಾಗಮಮಪ್ರಾರಬ್ಧವಿಷಯಂ ವ್ಯಾಖ್ಯಾಯ ಪ್ರಾರಬ್ಧಕರ್ಮಫಲಸ್ಯೇಷದಪಿ ಹ್ರಾಸೋ ನಾಸ್ತೀತಿ ಭ್ರೂಯಾತ್ತಂ ಪ್ರತ್ಯಾಹ ಸರ್ವಾತ್ಮನೇತಿ ॥

ಈಷದಪೀತ್ಯರ್ಥಃ । ಬ್ರಹ್ಮಹತ್ಯಾದಿಕರ್ಮವಿಪಾಕಕ್ಷಯರೋಗಾದಿನಿವೃತ್ಯರ್ಥಾಃ ಪ್ರಾಯಶ್ಚಿತ್ತವಿಧಯೋಽತ್ರ ಕಾಮ್ಯವಿಧಯೋ ವಿವಕ್ಷಿತಾಃ ।

ಅಯಮತ್ರೋತ್ತರಕ್ರಮಃ । (ಗರುಡಪುರಾಣ ಪ್ರೇತಕಾಂಡ ಅ-2 ಶ್ಲೋ-63) 'ಬ್ರಹ್ಮಹಾ ಕ್ಷಯರೋಗೀ ಸ್ಯಾದಿ' ತಿ ಸ್ಮರಣಾತ್ ಕ್ಷಯಾದಿಕಂ ತಾವದ್ಬ್ರಹ್ಮಹತ್ಯಾದೇಃ ಫಲಮ್ । ತತ ಉತ್ಪಾದಿತಕ್ಷಯಾದಿಕಂ ಬ್ರಹ್ಮಹತ್ಯಾದಿಪ್ರಾರಬ್ಧಮೇವ । ತಸ್ಯ ಚ ಪ್ರಾರಬ್ಧಕರ್ಮಫಲಸ್ಯ ಕ್ಷಯಾದೇಃ ಪ್ರಾಯಶ್ಚಿತ್ತಕರಣೇ ನಿವೃತ್ತಿರ್ದೃಶ್ಯತೇ । ತತ್ಕಥಂ ಪ್ರಾರಬ್ಧಕರ್ಮಕಫಲಸ್ಯ ಸರ್ವಥಾಽಪ್ಯನುಪಮರ್ದಃ ।

ಅಥ ಮನ್ಯೇತ । ಪ್ರಾಯಶ್ಚಿತ್ತಂ ನ ಕ್ಷಯನಿವೃತ್ತಿಹೇತುಃ ಕಿಂತು ಭೋಗನಿಮಿತ್ತ-ಕರ್ಮಕ್ಷಯ ಏವೇತಿ । ತದಾ ಪ್ರಾಯಶ್ಚಿತ್ತವಿಧಯೋ ವ್ಯರ್ಥಾಃ ಸ್ಯುಃ । ಗೃಹದಾ-ಹೇಷ್ಟ್ಯಾದಿವತ್ಪ್ರಾಯಶ್ಚಿತ್ತಾನಾಂ ನೈಮಿತ್ತಕತ್ವಂ ಭವಿಷ್ಯತೀತಿ ಚೇನ್ನ । ಕ್ಷಯಾದಿ-ಸಂಯೋಗೇನ ವಿಧೀಯಮಾನಾನಾಮೇಷಾಂ ತದ್ವಿಘಾತಫಲಸಂಭವೇ ಫಲಾಂತರ-ಕಲ್ಪನಾನುಪಪತ್ತೇಃ । ಕಿಂಚಾತ್ರ ನಿಯತಪಶ್ಚಾದ್ಭಾವಿತ್ವಮಸಮಾಹಿತಮೇವ । ತದಿದ-ಮುಕ್ತಂ ಕಾಮ್ಯೇತಿ । ತಥಾಽಪಿ ಬ್ರಹ್ಮಜ್ಞಾನಂ ನ ತದರ್ಥಂ ವಿಹಿತಮಿತಿ ಚೇನ್ನ । ಫಲಶ್ರವಣೇನೈವ ವಿಧಿಕಲ್ಪನಾತ್ ।

ಅನೇನೈವ ನ್ಯಾಯೇನ ಪ್ರಾಯಶ್ಚಿತ್ತಾನಾಂ ಕರ್ಮಕ್ಷಯಹೇತುತ್ವಾಭಾವೋಽಪಿ ನಿರಸ್ತಃ । ತಥಾ ಸತಿ ಪ್ರಾಯಶ್ಚಿತ್ತವಿಧೀನಾಂ ವೈಯರ್ಥ್ಯಾಪತ್ತೇಃ । ನೈಮಿತ್ತಕತ್ವಪಕ್ಷಸ್ಯ ಚ ದೃಷ್ಟಾ-ದೃಷ್ಟಹಾನೋಪಾದಾನಪ್ರಸಂಗೇನ ನಿರಸ್ತತ್ವಾತ್ ॥ (ನ್ಯಾಯಸುಧಾ-ಕಾಮಚಾರಾಧಿಕರಣ)

ಆದ್ದರಿಂದ ದೇವರ ಪ್ರಾರ್ಥನೆ, ನಾಮಸ್ಮರಣೆ, ಪ್ರಾಯಶ್ಚಿತ್ತಾದಿಗಳು ಅವಶ್ಯ ಕರ್ತವ್ಯವಾಗಿದೆ. ಅವುಗಳಿಂದ ನಮ್ಮ ಪಾಪಫಲವನ್ನು ಉಪಮರ್ದ ಮಾಡಿ ನಮ್ಮ ದುಃಖವನ್ನು ಕಡಿಮೆ ಮಾಡುತ್ತಾನೆ. ಇದರಿಂದ ದೇವರ ನಿಯಮಕ್ಕೆ ಯಾವುದೇ ಭಂಗವಿಲ್ಲ.

7. **ಮರಣದ ನಂತರ ನಮ್ಮ ದೇಹವು ಪಂಚಮಹಾಭೂತಗಳಲ್ಲಿ ಸೇರಿಹೋಗುತ್ತದೆ. ಅಂದಮೇಲೆ ಆತ್ಮನಂತೂ ನಿರ್ಗುಣನಾದ್ದರಿಂದ ಅರ್ಥಾತ್ ಸುಖ-ದುಃಖಗಳು ಆತ್ಮನಿಗೆ ಇಲ್ಲವಾದ್ದರಿಂದ ಸ್ವರ್ಗ-ನರಕಗಳಲ್ಲಿ ಸುಖ-ದುಃಖಗಳನ್ನು ಅನುಭವಿಸುವವರು ಯಾರು?**

ಮೊದಲನೆಯದಾಗಿ, ಮರಣದ ನಂತರ ಸ್ವರ್ಗ-ನರಕಗಳಿಗೆ ಹೋದಾಗ ಜೀವನಿಗೆ ಈ ಭೌತಿಕದೇಹವು ಇರದಿದ್ದರೂ ಸಹ ಸ್ವರ್ಗದಲ್ಲಿ ತೇಜೋ-ಮಯಶರೀರ, ನರಕದಲ್ಲಿ ಯಾತನಾಶರೀರ ಇರುತ್ತದೆ[1] ಎಂದು ಹೇಳುವುದರಿಂದ ಸ್ವರ್ಗ-ನರಕಗಳಲ್ಲಿ ಜೀವನಿಗೆ ಶರೀರವೇ ಇಲ್ಲದ ಪರಿಸ್ಥಿತಿ ಬರುವುದಿಲ್ಲ.

ಎರಡನೆಯದಾಗಿ, ಆತ್ಮನು ನಿರ್ಗುಣ ಅರ್ಥಾತ್ ಆತ್ಮನಿಗೆ ಸುಖ-ದುಃಖ-ಗಳು ಇಲ್ಲ ಎಂದು ತಿಳಿದದ್ದೇ ತಪ್ಪು. ಜೀವನಿಗೆ ಸುಖದ ಅನುಸಂಧಾನ, ದುಃಖದ ಅನುಸಂಧಾನ ಅವಶ್ಯವಾಗಿ ಉಂಟು. ಆ ಸುಖದುಃಖಗಳ ಅನುಸಂಧಾನ ಜಡವಾದ ದೇಹಕ್ಕಾಗಲೀ, ಮನಸ್ಸಿಗಾಗಲೀ ಇಲ್ಲ. ಸುಖದುಃಖಗಳು ಮನಸ್ಸಿನಲ್ಲಿದ್ದರೂ ಸಹ ಅದರ ಸ್ವಾಮಿತ್ವಾನುಸಂಧಾನ ಬರುವುದು ಆತ್ಮನಿಗೆ ಮಾತ್ರ.

---

7.1 ''ಯಥಾ ತೃಣಜಲೂಕಾ ಚ ನೋಪಯಾತ್ಯಪಯಾತಿ ಚ ।
ನ ತ್ಯಜೇನ್ಮ್ರಿಯಮಾಣೋಽಪಿ ಪ್ರಾಗ್ದೇಹಾಭಿಮತಿಂ ಜನಃ ॥''
(ಭಾಗವತ ಸ್ಕಂ-4 ಅ-29 ಶ್ಲೋ-78)

''ತಥಾ ಮ್ರಿಯಮಾಣೋಽಪಿ ಜೀವೋ **ಯಾವದನ್ಯಂ ತೇಜೋಮಯಂ ಯಾತನಾ ರೂಪಂ ವಾ ದೇಹಂ** ನ ವಿಂದೇತ ತಾವತ್ಪ್ರಾಗ್ದೇಹಾಭಿಮತಿಂ ಪೂರ್ವತನದೇಹಾಭಿ ಮಾನಂ ನ ತ್ಯಜೇತ್ ।'' (ಯಾದವಾರ್ಯ ಟಿಪ್ಪಣೀ - ಪ್ರಕಾಶಿಕಾ)

''ಕೃತೇ ಸಪಿಂಡೀಕರಣೇ ನರಃ ಸಂವತ್ಸರಾತ್ಪರಮ್ ।
ಪ್ರೇತದೇಹಂ ಪರಿತ್ಯಜ್ಯ **ಭೋಗದೇಹಂ** ಪ್ರಪದ್ಯತೇ ॥''
(ಧರ್ಮಸಿಂಧು - ತೃತೀಯಪರಿಚ್ಛೇದ - ಉತ್ತರಾರ್ಧ)

**"ಅವಿನಾಶೀ ವಾ ಅರೇ ಅಯಮಾತ್ಮಾ ಅನುಚ್ಛಿತ್ತಿಧರ್ಮಾ"**

ಎಂದು ಹೇಳಿದಂತೆ ಆತ್ಮನಲ್ಲಿರುವ ಎಲ್ಲ ಧರ್ಮಗಳೂ ಕೊನೆಯವರೆಗೆ ಇರುವಂತವುಗಳು. ಆದ್ದರಿಂದ ಸ್ವರ್ಗಕ್ಕೇ ಹೋಗಲಿ, ನರಕಕ್ಕೇ ಹೋಗಲಿ. ಸುಖದುಃಖಗಳನ್ನು ಅನುಭವಿಸುವ ಯೋಗ್ಯತೆ, ಅನುಸಂಧಾತೃತ್ವ ಆತ್ಮನಿಗೆ ಇದೆ. ಅದಕ್ಕೊಂದು ಮಾಧ್ಯಮ ಬೇಕು. ಅದು ಶರೀರ. ಆ ಶರೀರಗಳು ಸ್ವರ್ಗ-ನರಕಗಳಲ್ಲಿಯೂ ಇದ್ದೇ ಇರುತ್ತವೆ.

ಆದ್ದರಿಂದ ಮರಣದ ನಂತರ ಈ ಭೌತಿಕದೇಹವು ನಶಿಸಿಹೋದರೂ, ತೇಜೋಮಯ-ಯಾತನಾಶರೀರಗಳಿಂದ ಸ್ವರ್ಗ-ನರಕಗಳಲ್ಲಿ ಆತ್ಮನೇ ಸುಖದುಃಖಗಳನ್ನು ಅನುಭವಿಸುತ್ತಾನೆ.

**8. ಹೆಂಡತಿ ತೀರಿಕೊಂಡಾಗ ಶ್ರಾದ್ಧ-ಪಕ್ಷಾದಿಗಳನ್ನು ಮಗನೇ ಏಕೆ ಮಾಡಬೇಕು? ಮೊದಲಿನಿಂದಲೂ ಅತಿಹೆಚ್ಚಾಗಿ ಅವಳೊಂದಿಗೆ ಇದ್ದವನು ಗಂಡನೇ ಆದ್ದರಿಂದ, ಹೆಂಡತಿ ಮೇಲೆ ಹೆಚ್ಚು ಅಭಿಮಾನವುಳ್ಳ ಗಂಡನೇ ಏಕೆ ಮಾಡಬಾರದು?**

ಹೆಂಡತಿಯ ಮೇಲೆ ತನಗೆ ಬೇಕಾದಷ್ಟು ಪ್ರೀತಿಯಿರಬಹುದು. ಅವಳಿಗೆ ಸದ್ಗತಿ ಆಗಬೇಕೆಂಬ ಇಚ್ಛೆಯೂ ತನಗೆ ಇರಬಹುದು. ಅದಕ್ಕಾಗಿ ಹೆಂಡತಿಯ ಹೆಸರಿನಲ್ಲಿ ಮಗನ ಮೂಲಕ ಬೇಕಾದಷ್ಟು ದಾನ-ಧರ್ಮಗಳನ್ನು ಮಾಡಿಸಲಿ. ತಪ್ಪಿಲ್ಲ.

ಆದರೆ ಯಾವ ಶಾಸ್ತ್ರವು ಶ್ರಾದ್ಧಾದಿಗಳನ್ನು ಮಾಡಬೇಕೆಂದು ವಿಧಿಸುತ್ತಿದೆ ಅದೇ ಶಾಸ್ತ್ರವೇ "ಮಗನಿದ್ದಾಗ ಮಗನೇ ಶ್ರಾದ್ಧಾದಿಗಳನ್ನು ಮಾಡಬೇಕು. ಅದಕ್ಕೆ ಮಗನೇ ಮುಖ್ಯ ಅಧಿಕಾರಿ.[1] ಮಗನಿಲ್ಲದಿದ್ದರೆ ಗಂಡ ಮಾಡಬೇಕು"[2] ಎಂದು ತಿಳಿಸುತ್ತಿರುವುದರಿಂದ ಮಗನಿದ್ದಾಗ ಗಂಡ

---

8.1 "ಪುತ್ರೇಷು ವಿದ್ಯಮಾನೇಷು ನಾನ್ಯೋ ವೈ ಕಾರಯೇತ್ ಸ್ವಧಾಂ' ।
॥ ಇತಿ ಋಷ್ಯಶೃಂಗಸ್ಮರಣಾತ್ ॥
ತತ್ರ ಸುಮಂತುಃ - 'ಮಾತುಃ ಪಿತುಃ ಪ್ರಕುರ್ವೀತ ಶ್ರಾದ್ಧಂ ಯಸ್ತ್ವೌರಸಃ ಸುತಃ ।'
॥ ಇತಿ ॥" (ಸ್ಮೃತಿಮುಕ್ತಾವಲೀ - ಶ್ರಾದ್ಧಾಧಿಕಾರಿನಿರ್ಣಯಃ)

8.2 "ಅನೂಢಯಾಃ ಸ್ತ್ರಿಯಾಃ ಪಿತಾ, ತದಭಾವೇ ಭ್ರಾತ್ರಾದಿಃ ।
ಊಢಾಯಾಃ ತತ್ಪುತ್ರಾಭಾವೇ ಸಪತ್ನೀಪುತ್ರಃ, ತದಭಾವೇ ಪೌತ್ರಪ್ರಪೌತ್ರಾಃ, **ತದಭಾವೇ ಪತಿಃ** ... ।" (ಧರ್ಮಸಿಂಧು - ತೃತೀಯಪರಿಚ್ಛೇದ ಉತ್ತರಾರ್ಧಮ್)

ಶ್ರಾದ್ಧಾದಿಗಳನ್ನು ಮಾಡುವುದು ಸರಿಯಲ್ಲ. ಮಗನೇ ಶ್ರಾದ್ಧಾದಿಗಳನ್ನು ಮಾಡುವುದು ಯೋಗ್ಯ. ಅದೇ ಶಾಸ್ತ್ರವಿಹಿತವೂ ಆಗಿದೆ.

ಮಗನಿಲ್ಲದಿದ್ದರೆ, ಆಗ ಗಂಡನೇ ಶ್ರಾದ್ಧಾದಿಗಳನ್ನು ಮಾಡುವುದು ಸೂಕ್ತ.

**9. ತಾನು ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಿದ್ದರೆ ತನ್ನ ಸುತ್ತಮುತ್ತಲಿನ ದೇಶಗಳಲ್ಲಿ ಸುಭಿಕ್ಷೆಯಾಗುತ್ತದೆ ಎನ್ನುತ್ತಾರೆ. ಇದಕ್ಕೆ ಶಾಸ್ತ್ರದ ಆಧಾರವಿದೆಯೇ?**

ಅವಶ್ಯವಾಗಿ ಶಾಸ್ತ್ರದ ಆಧಾರವಿದೆ. ಗ್ರಂಥಗಳಲ್ಲಿ ಆಧಾರವಿದೆ. ಯಾವನು ದೇವರಪೂಜೆ ಮೊದಲಾದ ಸತ್ಕರ್ಮಗಳನ್ನು ಆಚರಿಸುತ್ತಾ, ಕೇವಲ ಸತ್ಯವನ್ನೇ ಮಾತನಾಡುತ್ತಾ, ಅತ್ಯಂತ ಸಾತ್ವಿಕನಾಗಿರುತ್ತಾನೆ ಅವನು ಮಾಡಿದ ಪುಣ್ಯದಿಂದ ಅವನಿಗೆ ಮಾತ್ರ ಲಾಭವಾಗದೇ ಅವನ ಸುತ್ತಮುತ್ತಲಿರುವ ಎಲ್ಲ ಜನರಿಗೂ ಅದರಿಂದ ಕ್ಷೇಮವಾಗುತ್ತದೆ ಎಂಬ ಮಾತನ್ನು ಅವಶ್ಯವಾಗಿ ಶಾಸ್ತ್ರದಲ್ಲಿ ಹೇಳಿದ್ದಾರೆ.[1]

ಇಂದು ನಾವು ಧರ್ಮಗಳನ್ನು ಬಿಟ್ಟಿದ್ದರಿಂದ ದುರ್ಭಿಕ್ಷೆಯಾಗುತ್ತಿದ್ದರೂ, ಏನಾದರು ಅಲ್ಪಸ್ವಲ್ಪ ಧರ್ಮಗಳನ್ನು ಮಾಡುವುದರಿಂದ ಇಷ್ಟಾದರೂ ಬದುಕುವಂತಾಗಿದೆ. ಎಲ್ಲರೂ ಸಾಯುವ ಪರಿಸ್ಥಿತಿ ಬಂದಿಲ್ಲ ಎಂದಮೇಲೆ ಇನ್ನೂ ಅಲ್ಪಸ್ವಲ್ಪ ಧರ್ಮ ಉಳಿದಿದೆ[2] ಎಂದರ್ಥ. ಅಂತಹ ಪರಿಸ್ಥಿತಿ ಕಲಿಯುಗದ ಕೊನೆಯ ಭಾಗದಲ್ಲಿ ಬರುತ್ತದೆ. ಆಗ ಸ್ವಲ್ಪವೂ ಧರ್ಮವು ಉಳಿದಿರುವುದಿಲ್ಲ. ಆದ್ದರಿಂದ ಎಲ್ಲರ ಸಂಹಾರವನ್ನು ಕಲ್ಕಿಯು ಮಾಡುತ್ತಾನೆ.

---

9.1 ''ಕೃಷ್ಣಾಶ್ರಯೋ ವಸತಿ ಯತ್ರ ಜನೋಽಪಿ ತತ್ರ
ವೃದ್ಧಿರ್ಭವೇತ್ ಕಿಮು ರಮಾಧಿಪತೇಃ ನಿವಾಸೇ ।
ವೃಂದಾವನಂ ಯದಧಿವಾಸತ ಆಸ ಸದ್ಮ್ಯಂಗ್
ಮಾಹೇಂದ್ರಸದ್ಮಸದೃಶಂ ಕಿಮು ತತ್ರ ಪುರ್ಯಾಮ್ ॥''
(ಮ.ಭಾ.ತಾ. ನಿರ್ಣಯ ಅ-14 ಶ್ಲೋ-7)

9.2 ''ತದಾಸ್ತಿಕದರ್ಶನಾನಾಂ ಅನುನ್ಮೂಲಿತತ್ವಾತ್ ।'' (ವಿಷ್ಣುತತ್ವನಿರ್ಣಯ ಟೀಕಾ)

**10. ಅಡಿಗೆಪಾತ್ರೆ, ದೇವರಪಾತ್ರೆ, ಎಂಜಲುಪಾತ್ರೆ ಎಲ್ಲ ಪಾತ್ರೆಗಳನ್ನೂ ಸೇರಿಸಿ ತೊಳೆದು ಮತ್ತೆ ಸ್ವಚ್ಛ ಮಾಡಿ ಇಡಬಹುದೇ?**

ಸರ್ವಥಾ ಹಾಗೆ ಮಾಡಬಾರದು. ಶಾಸ್ತ್ರವು ಇದರ ಬಗ್ಗೆ ಬಹಳ ಸ್ಪಷ್ಟವಾಗಿ ತಿಳಿಸುತ್ತದೆ. ವೃದ್ಧಹಾರೀತಸ್ಮೃತಿಯಲ್ಲಿ ಇದರ ಬಗ್ಗೆ ವಿಸ್ತಾರವಾದ ಮಾತು ಬಂದಿದೆ.[1]

ಶೌಚಕ್ಕೆ ಬಳಸುವ ಪಾತ್ರೆ, ಅಡಿಗೆಪಾತ್ರೆ, ಊಟದ ಪಾತ್ರೆ, ಮನೆಯಿಂದ ಹೊರಗೆ ಹೋಗಿ ತರಕಾರಿ ಮೊದಲಾದ ಪದಾರ್ಥಗಳನ್ನು ತರಲು ಬಳಸುವ ಪಾತ್ರೆ ಹೀಗೆ ಒಂದು ಪಾತ್ರೆಗೆ ಮತ್ತೊಂದು ಪಾತ್ರೆಯ ಸ್ಪರ್ಶವನ್ನೂ ಮಾಡಿಸಬಾರದು ಎಂದಿದೆ. ಅಷ್ಟು 'ಹೈಜನಿಕ್' ಆಗಿ ಆ ಪಾತ್ರೆಗಳ ಸಂರಕ್ಷಣೆಯನ್ನು ಮಾಡಬೇಕು ಎನ್ನುವುದನ್ನು ಶಾಸ್ತ್ರ ಹೇಳಿಕೊಟ್ಟಿದೆ. ಸ್ಪರ್ಶವನ್ನು ಮಾಡಿಸಬಾರದು. ಸ್ಪರ್ಶ ಮಾಡಿಸಿದರೆ ಮತ್ತೆ ತೊಳೆಯಬೇಕು. ಅಗ್ನಿಯಿಂದ ಶುದ್ಧಮಾಡಬೇಕು ಎಂದಿದೆ. ಅಂದಮೇಲೆ ಯಾವುದೋ ಪಾತ್ರೆಯನ್ನು ಯಾವುದೋ ಕಾರ್ಯಕ್ಕೆ ಬಳಸಬಾರದು. ಪಾತ್ರೆಗಳಲ್ಲಿ ಅಷ್ಟು ಶುದ್ಧಿಯಿರಬೇಕು ಎಂಬುದಾಗಿ ಶಾಸ್ತ್ರವು ಸ್ಪಷ್ಟವಾಗಿ ತಿಳಿಸಿದೆ.[2]

---

10.1 ''ಚತುರ್ವಿಧಾನಾಂ ಭಾಂಡಾನಾಂ ಕ್ಷಾಲನಂತು ಸಮಾಚರೇತ್ ।
ಪಾಚಕಾನಿ ಬಹಿಷ್ಠಾನಿ ಜಲಸ್ಯಾಽನಯನಾನಿ ಚ ॥
ಸ್ಥಾಪನಾನಿ ಜಲಾರ್ಥಂ ವಾ ಚತುರ್ವಿಧಮುದಾಹೃತಮ್ ।
ಪೃಥಕ್ ಪೃಥಗುದಂಚಾನಿ ತೇಷು ತೇಷ್ವಪಿ ವಿನ್ಯಸೇತ್ ॥
ನಾನ್ಯೋಽನ್ಯಂ ಸಂಕರಂ ಕುರ್ಯಾತ್ ಭಾಂಡಾನಾಂ ಸರ್ವಕರ್ಮಸು ।
ತಾನಿ ತಾನಿ ಸ್ಪೃಶೇತ್‌ಪಾಣಿಂ ಪ್ರಕ್ಷಾಲ್ಯೈವ ಪುನಃ ಪುನಃ ।
ಸಮ್ಯಕ್ ಪ್ರಕ್ಷಾಲ್ಯ ಭಾಂಡಾನಿ ದಾಹಯೇದ್ವಹ್ನಿಯೈಸ್ತೃಣೈಃ ॥
ಪುನಃ ಪ್ರಕ್ಷಾಲ್ಯ ಸಂತಪ್ಯ ಪಶ್ಚಾತ್ಪಚನಮಾಚರೇತ್ ।
ರಸಭಾಂಡಾನಿ ಸರ್ವಾಣಿ ಕ್ಷಾಲಯೇದುಷ್ಣವಾರಿಣಾ ॥
ಚತುರ್ಭಿಃ ಪಂಚಭಿರ್ದಾರ್ಭ್ಯಾತ್ವಾ ಸ್ರುಕ್‌ಸ್ರುವೌ ಕ್ಷಾಲಯೇತ್ತದಾ ।
ಬಹಿರ್ನ ನಿಷ್ಕ್ರಾಮಯೀತ ಪಾಚಕಾನಿ ಗೃಹಾಂತಿಕಾತ್ ॥
ತಾಭಿರೇವ ತು ದದ್ಯಾತ್ತು ಭುಂಜೀತ ಹಿ ಕಥಂಚನ ।
ದತ್ವಾ ಪಾತ್ರಾಂತರೇ ದದ್ಯಾತ್ಕಾಂಸ್ಯೇ ವಾ ಮಣ್ಮಯೇಽಪಿ ವಾ ॥
ಪುಟೇ ಪಾಣಮಯೇ ವಾಽಪಿ ದದ್ಯಾದತ್ರ ತು ವೈಷ್ಣವೇ ।
ಸ್ರುವಂ ದಾರುಮಯಂ ಕಾಂಸ್ಯಂ ಕುರ್ವೀತಾಯೋಮಯಂ ನ ತು ॥''
(ವೃದ್ಧಹಾರೀತಸ್ಮೃತಿ ಅಧ್ಯಾಯ - 8, ಶ್ಲೋ-89/96 ಸಭಾವದುಷ್ಟಾದಿ ದ್ರವ್ಯಭಾಂಡಾದೀನಾಂ ಸಂಶುದ್ಧಿವರ್ಣನಂ)

10.2 'ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ - ಸ್ತ್ರೀಧರ್ಮ' ದಲ್ಲಿಯೂ ಈ ವೃದ್ಧಹಾರೀತ ಸ್ಮೃತಿಯ ವಚನ(ಶ್ಲೋಕ)ಗಳನ್ನು ಉಲ್ಲೇಖಿಸಿದ್ದಾರೆ.

**11. ಮೊದಲಿನಿಂದ ಮದ್ಯಪಾನ ಬಹಳ ಮಾಡಿ ಮಹಾಭಾರತದಲ್ಲಿ ಅದನ್ನು ಬಹಳ ನಿಷೇಧಿಸಿದ ಕಾರಣ ಈಗ ಬಿಟ್ಟರೆ ಏನಾದರೂ ಉಪಯೋಗವಾಗುತ್ತದೆಯೇ? ಅಥವಾ ಮೊದಲು ಕುಡಿದು ಈ ಜನ್ಮವಂತೂ ಹಾಳಾದ್ದರಿಂದ ಕುಡಿಯುವುದನ್ನು ಹೀಗೆಯೇ ಮುಂದುವರಿಸಬೇಕೇ?**

''ಕುಡಿದು ಈ ಜನ್ಮ ಹಾಳಾದ್ದರಿಂದ ಕುಡಿಯುವುದನ್ನೇ ಮುಂದು-ವರಿಸುವುದು ಸರಿ'' ಎಂದು ಸರ್ವಥಾ ತಿಳಿಯಬಾರದು.

'ಆದದ್ದಾಯಿತು ಇನ್ನಾದರೂ ಒಳ್ಳೇ ದಾರಿ ಹಿಡಿಯೋ ಪ್ರಾಣಿ' ಎಂದು ದಾಸರಾಯರು ಹೇಳಿದಂತೆ ಹಿಂದೆ ಆದದ್ದು ಆಗಿಹೋಗಿದೆ. ಅದರಿಂದ ಬರುವ ಪಾಪ ಬಂದಾಗಿದೆ.

**''ಇಷ್ಟು ಪಾಪವ ಮಾಡಿದ್ದೇ ಸಾಕೋ''**

ಎಂದು ಹೇಳಿದಂತೆ ಪಾಪವನ್ನು ಮಾಡಿದ್ದಾಗಿದೆ. ಹಿಂದೆ ಮಾಡಿದ್ದೇವೆ ಎನ್ನುವುದಕ್ಕೆ ಮುಂದೆಯೂ ಅದನ್ನು ಮುಂದುವರಿಸುವುದು ಬೇಡ. ಅದನ್ನು ಬಿಟ್ಟು, ಮಾಡಿದ ಆ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧವಾದ ರೀತಿಯಲ್ಲಿ ಇದ್ದರೆ (ಸತ್ಕರ್ಮಾನುಷ್ಠಾನ ಮಾಡಿದರೆ) ಅವಶ್ಯವಾಗಿ ಪುಣ್ಯ ಬರುತ್ತದೆ. ಅದರಿಂದ ಉದ್ಧಾರವಾಗುತ್ತದೆ.

**12. ಶಿಖಾ ಬಿಟ್ಟಿದ್ದರೂ ಅದನ್ನು ಕಟ್ಟಿಕೊಳ್ಳದೇ ಸಂಧ್ಯಾವಂದನಾದಿಗಳನ್ನು ಮಾಡಿದರೆ, ಅಥವಾ ಶಿಖೆಯನ್ನೇ ಬಿಡದೇ ಕರ್ಮಗಳನ್ನು ಮಾಡಿದರೆ ಅದರಿಂದ ಪುಣ್ಯ ಬರುತ್ತದೆಯೇ?**

ಯಾರು ಶಿಖೆಯನ್ನು ಬಿಟ್ಟಿರುತ್ತಾರೆ, ಅವರು ಶಿಖೆಯನ್ನು ಕಟ್ಟಿಕೊಳ್ಳದೇ ಕರ್ಮಗಳನ್ನು ಮಾಡಬಾರದು. ಶಿಖೆಯನ್ನು ಕಟ್ಟಿಕೊಂಡೇ ಸಂಧ್ಯಾವಂದನಾದಿಗಳನ್ನು ಮಾಡಬೇಕು.

ಇನ್ನು ''ಶಿಖೆಯನ್ನೇ ಬಿಡದವರು ಸಂಧ್ಯಾವಂದನಾದಿಗಳನ್ನು ಮಾಡ-ಬಾರದು'' ಎಂದು ಹೇಳಿಬಿಟ್ಟರೆ ಇಂದಿನಕಾಲದಲ್ಲಿ ಯಾರೂ ಕರ್ಮಗಳಲ್ಲಿ ಪ್ರವೃತ್ತರಾಗುವುದೇ ಇಲ್ಲದಂತಾಗುತ್ತದೆ.

"ವಿಶಿಖಃ ಅನುಪನೀತಶ್ಚ ಯತ್ಕರೋತಿ ನ ತತ್ ಕೃತಮ್"

ಎಂದು ಶಾಸ್ತ್ರ ಇದ್ದದ್ದು ನಿಜ. ಯಜ್ಞೋಪವೀತ-ಶಿಖೆ ಎಲ್ಲವೂ ಇರಬೇಕೆನ್ನುವುದು ನಿಜ. ಆ ಶಾಸ್ತ್ರದ ಆಜ್ಞೆಯನ್ನು ಈಗಾಗಲೇ ಉಲ್ಲಂಘಿಸಿ ಆಗಿದೆ. ಆ ಒಂದು ತಪ್ಪನ್ನು ಈಗಾಗಲೇ ಮಾಡಿಯಾಗಿದೆ. ಶಿಖೆಯನ್ನು ಬಿಟ್ಟಿಲ್ಲ ಎಂಬ ಒಂದೇ ಒಂದು ಕಾರಣಕ್ಕೆ ಕರ್ಮಗಳನ್ನು ಪೂರ್ಣವಾಗಿ ಬಿಡಬಾರದು. ಕರ್ಮಗಳನ್ನೇ ಬಿಡುವ ದೊಡ್ಡ ತಪ್ಪನ್ನು ಮಾಡಬಾರದು. ಆದ್ದರಿಂದ ಶಿಖೆಯನ್ನು ಬಿಡದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಂಡು, ಅದಕ್ಕಾಗಿ ದೇವರಲ್ಲಿ ಕ್ಷಮೆಯಾಚಿಸಿ ತನ್ನ ವರ್ಣ-ಆಶ್ರಮಗಳಿಗೆ ಉಚಿತವಾದ ಕರ್ಮಗಳನ್ನು ಆಚರಿಸಬೇಕು. ಅದಕ್ಕೆ ಯೋಗ್ಯವಾದ ಫಲವು ಸಿಗುವುದರಲ್ಲಿ ಸಂದೇಹವಿಲ್ಲ.

**13. ಅಲ್ಪಸ್ವಲ್ಪವಾದರೂ ಧರ್ಮಾಚರಣೆ ನಡೆಯುತ್ತಿರುವ ಭಾರತದೇಶದಲ್ಲಿ ಏಕೆ ಹೆಚ್ಚು ಕಷ್ಟವಿದೆ? ಧರ್ಮಗಳನ್ನೇ ಮಾಡದೇ ಸ್ವೇಚ್ಛಾಚಾರದಿಂದ ನಡೆಯುವ ಹೊರದೇಶದಲ್ಲಿ ಏಕೆ ಹೆಚ್ಚು ಸುಖವಿದೆ?**

ಮೊದಲನೆಯದಾಗಿ, "ಹೊರದೇಶದಲ್ಲಿನ ಜನರು ಬಹಳ ಹಣ ಸಂಪಾದಿಸಿ ಐಶಾರಾಮದಿಂದ ಹೆಚ್ಚು ಸುಖದಲ್ಲಿಯೇ ಇದ್ದಾರೆ" ಎಂದು ತಿಳಿದದ್ದು ತಪ್ಪು. ಒಂದು ಸಣ್ಣ ಹಳ್ಳಿಯಲ್ಲಿ ಗಂಡ-ಹೆಂಡತಿ-ಮಕ್ಕಳು ಯಾವ ಆತಂಕ/ ಚಿಂತೆಗಳಿಲ್ಲದೇ ಪ್ರೀತಿಯಿಂದ ಆರಾಮವಾಗಿರುತ್ತಾರೆ. ಅದೇ ದೊಡ್ಡ ದೊಡ್ಡ ದೇಶ/ಊರುಗಳಲ್ಲಿ ವಾಸಿಸುತ್ತಿದ್ದರೂ, ಬೇಕಾದಷ್ಟು ಹಣ-ಐಶಾರಾಮಗಳಿದ್ದರೂ ಅವರಿಗಿರುವಷ್ಟು ಮನಸ್ತಾಪ ಅಥವಾ ಅವರಿಗಿರುವಷ್ಟು ಕಾಯಿಲೆ/ದುಃಖಗಳು ಬೇರೆಯವರಿಗೆ ಇರುವುದಿಲ್ಲ. ಆದ್ದರಿಂದ "ಅವರು ಸುಖದಲ್ಲಿಯೇ ಇದ್ದಾರೆ. ನಾವು ಕಷ್ಟದಲ್ಲಿಯೇ ಇದ್ದೇವೆ" ಎಂದು ತಿಳಿದದ್ದು ಮೊದಲ ತಪ್ಪು.

ಎರಡನೆಯದಾಗಿ, ಆ ಭೂಮಿಗಳು ಭೋಗಭೂಮಿಗಳು. ಅಂದರೆ ಜನ್ಮಾಂತರದಲ್ಲಿ ಮಾಡಿದ ಪುಣ್ಯಕರ್ಮಗಳ ಫಲಗಳನ್ನು ಅನುಭವಿಸು-ವುದಕ್ಕಾಗಿಯೇ ಇರುವ ಭೂಮಿಗಳು ಅವು. ಹೀಗಾಗಿ ಜನ್ಮಾಂತರದಲ್ಲಿ ಮಾಡಿದ ಕರ್ಮಗಳ ಫಲವನ್ನು ಅವರು ಅಲ್ಲಿ ಅನುಭವಿಸುತ್ತಿರುತ್ತಾರೆ.

ಹೊರತು ಇಂದು ಮಾಡುತ್ತಿರುವ ಸ್ವೇಚ್ಛಾಚಾರ-ಭ್ರಷ್ಟಾಚಾರಗಳ ತಪ್ಪುಕಾರ್ಯಗಳಿಗೆ ಫಲವಾಗಿ ದೇವರು ಅವರಿಗೆ ಸುಖವನ್ನು ನೀಡಿದ್ದಾನೆ ಎಂದರ್ಥವಲ್ಲ.

ಇದಕ್ಕೆಲ್ಲ ಮಹಾಭಾರತವು ಉತ್ತರ ನೀಡಿದೆ. ಮನುಷ್ಯನು ನಾನಾರೀತಿ ದಾನ-ಧರ್ಮಗಳನ್ನು ಮಾಡುತ್ತಾನೆ. ಆದರೆ ವಿಧಿಪೂರ್ವಕವಾಗಿ ದಾನ-ಧರ್ಮ ಮಾಡುವುದಿಲ್ಲ. ಅಂದರೆ ಶೌಚ-ಆಚಾರ ಇಟ್ಟುಕೊಳ್ಳದೇ ಯಾವುದೋ ರೀತಿಯಲ್ಲಿ ದಾನ-ಧರ್ಮ ಮಾಡುತ್ತಾನೆ. ಆ ರೀತಿ ದಾನ-ಧರ್ಮ ಮಾಡಿದರೆ ಅಂತಹ ಮ್ಲೇಚ್ಛದೇಶದಲ್ಲಿ ಭೋಗ ಮಾಡಬೇಕಾದ ಪರಿಸ್ಥಿತಿ ಬರುತ್ತದೆ ಎಂದು ಹೇಳಿದ್ದಾರೆ. ದಾನ-ಧರ್ಮಗಳನ್ನು ಮಾಡಿದ್ದಕ್ಕೆ ದೇವರು ಸುಖ ಕೊಡುತ್ತಾನೆ. ವಿಧಿಪೂರ್ವಕವಾಗಿ ಮಾಡಿರದ ಕಾರಣ ಅಂತಹ ದೇಶಗಳಲ್ಲಿ ಸುಖವನ್ನು ಭೋಗಿಸುವ ಪರಿಸ್ಥಿತಿ ಬರುತ್ತದೆ ಎಂದು ಮಹಾಭಾರತ ಹೇಳಿದೆ.

ಭಾರತ ದೇಶದಲ್ಲಿದ್ದವರು ಕರ್ಮಭೂಮಿಯಲ್ಲಿದ್ದವರು. ಆದ್ದರಿಂದ ದೇವರು ಅವರವರ ಕರ್ಮಗಳಿಗೆ ಅನುಸಾರವಾಗಿ ಅಂದರೆ ಸತ್ಕರ್ಮಗಳಿಗೆ ಸುಖ, ದುಷ್ಕರ್ಮಗಳಿಗೆ ದುಃಖ ಹೀಗೆ ಸುಖ-ದುಃಖಗಳನ್ನು ಕೊಡುತ್ತಾನೆ. ತಪ್ಪು ಮಾಡಿದವರಿಗೆ ಮಾಡಿದ ಆ ತಪ್ಪನ್ನು ತಿದ್ದುಕೊಳ್ಳುವುದಕ್ಕಾಗಿ ಅನೇಕವಿಧ ದಂಡವನ್ನು ಕೊಡುತ್ತಾನೆ. ಆ ರೀತಿ ದಂಡ ವಿಧಿಸಿ ಅವರನ್ನು ಶುದ್ಧರನ್ನಾಗಿ ಮಾಡುತ್ತಾನೆ.

ಇದು ಕೇವಲ ಭಾರತದೇಶ-ಹೊರದೇಶಗಳಿಗೆ ಅಲ್ಲ. ಭಾರತದಲ್ಲಿಯೇ ಕೆಲವರು ಧರ್ಮ ಮಾಡದಿದ್ದರೂ ಸುಖವಾಗಿರುತ್ತಾರೆ. ಕೆಲವರು ಧರ್ಮ ಮಾಡಿದರೂ ದುಃಖದಿಂದಿರುತ್ತಾರೆ ಏಕೆ? ಎಂಬ ಪ್ರಶ್ನೆಗೂ ಇದೇ ಉತ್ತರ.

**14. ವಿವಾಹಕ್ಕಿಂತಲೂ ಪೂರ್ವದಲ್ಲಿ ಅರ್ಥಾತ್ ಬ್ರಹ್ಮಚಾರಿಯಾಗಿದ್ದವನಿಗೆ ವೈಶ್ವದೇವ ಮಾಡುವ ಅಧಿಕಾರವಿದೆಯೇ?**

ವಾಸ್ತವವಾಗಿ ವಿವಾಹವಾಗದ ಹೊರತು ಅರ್ಥಾತ್ ಬ್ರಹ್ಮಚಾರಿಯಾಗಿದ್ದವನಿಗೆ ವೈಶ್ವದೇವ ಮಾಡುವ ಅಧಿಕಾರವಿಲ್ಲ. ಅವನು ಕೇವಲ ಅಗ್ನಿಕಾರ್ಯವನ್ನು ಆಚರಿಸಬೇಕು.

ಆದರೆ ಕೆಲವು ಪ್ರಸಂಗಗಳಲ್ಲಿ ಮಾತ್ರ, ಅಂದರೆ ಅಶೌಚ ಮೊದಲಾದ ಅನಿವಾರ್ಯಕಾರಣಗಳಿಂದ ವಿವಾಹಿತ ಅಧಿಕಾರಿಗಳು ಯಾರೂ ಇಲ್ಲದೇ ವೈಶ್ವದೇವವೇ ನಿಲ್ಲುವ ಪ್ರಸಂಗ ಬಂದಾಗ ಅಂತಹ ಪ್ರಸಂಗಗಳಲ್ಲಿ ಮಾತ್ರ, ಬ್ರಹ್ಮಚಾರಿಗಳು ಆ ವಿವಾಹಿತ ಅಧಿಕಾರಿಗಳ ಆಜ್ಞೆಯನ್ನು ಪಡೆದು ವೈಶ್ವದೇವ ಮಾಡುವ ಸಂಪ್ರದಾಯ ಬಂದಿದೆ.

**15. ತಂದೆ ಅಥವಾ ತಾಯಿ ಮೃತರಾದಾಗ ಒಂದು ವರ್ಷದವರೆಗೆ ನವರಾತ್ರಿ/ದೀಪಾವಳಿ ಮೊದಲಾದ ಹಬ್ಬ/ಹರಿದಿನಗಳನ್ನು ಹಾಗೂ ವಿವಾಹಾದಿ ಉತ್ಸವಗಳನ್ನು ಆಚರಿಸಬಹುದೇ? ಮತ್ತು ಯಾತ್ರೆಯನ್ನು ಮಾಡಬಹುದೇ?**

**"ಪ್ರಥಮಾಬ್ದೇ ವರ್ಜ್ಯಾನಿ"** ಎಂದು ಹೇಳಿದಂತೆ ಒಂದು ವರ್ಷದವರೆಗೆ ಯಾವ ಹಬ್ಬ/ಹರಿದಿನಗಳನ್ನೂ, ವಿವಾಹಾದಿ ಉತ್ಸವಗಳನ್ನೂ, ಯಾತ್ರೆಯನ್ನೂ ಮಾಡುವಂತಿಲ್ಲ ಎಂಬುದಾಗಿ ಶಾಸ್ತ್ರದಲ್ಲಿ ಹೇಳಿದ್ದಾರೆ.

ಆದರೆ ಇದರಲ್ಲಿ ಎರಡು ಸೂಕ್ಷ್ಮ ಸಂಪ್ರದಾಯಗಳಿವೆ.

1. ಸಪಿಂಡೀಕರಣಶ್ರಾದ್ಧ ಎಂದಿದೆ. ಆ ಸಪಿಂಡೀಕರಣಶ್ರಾದ್ಧವನ್ನು ಪ್ರಾಚೀನರು ವರ್ಷದ ಅಂತ್ಯದಲ್ಲಿ ಮಾಡುತ್ತಿದ್ದರು. ಈ ರೀತಿ ವರ್ಷಾಂತ್ಯದಲ್ಲಿ ಸಪಿಂಡೀಕರಣಶ್ರಾದ್ಧ ಮಾಡುವುದಾದರೆ ಆ ಒಂದು ವರ್ಷದವರೆಗೆ ಒಂದು ರೀತಿಯ ಅಶೌಚವಿರುತ್ತದೆ. ಅಶೌಚ ಎಂದರೆ 10 ದಿನಗಳ ಅಶೌಚವಲ್ಲ. ಅದೊಂದು ರೀತಿಯ ಅಶೌಚ. ಹಾಗೆ ಅಶೌಚ ಇರುವುದರಿಂದ ಸಪಿಂಡೀಕರಣಶ್ರಾದ್ಧ ಮಾಡುವವರೆಗೆ ಅರ್ಥಾತ್ ಒಂದು ವರ್ಷದವರೆಗೆ ಯಾವುದೇ ಹಬ್ಬ-ಹರಿದಿನ-ಗಳನ್ನೂ, ವಿವಾಹಾದಿ ಉತ್ಸವಗಳನ್ನೂ, ಯಾತ್ರೆಗಳನ್ನೂ ಮಾಡಲು ಬರುವುದಿಲ್ಲ.

2. ಇಂದಿನ ಕಾಲದಲ್ಲಿ ಸಪಿಂಡೀಕರಣಶ್ರಾದ್ಧವನ್ನು ವರ್ಷದ ಅಂತ್ಯದಲ್ಲಿ ಯಾರೂ ಮಾಡುವುದಿಲ್ಲ. ವೃದ್ಧಿನಿಮಿತ್ತಅಪಕರ್ಷ ಮಾಡುತ್ತಾರೆ. ಅಂದರೆ - ವಿವಾಹ ಮೊದಲಾದ ಶುಭಕರ್ಮಗಳನ್ನು ಆಚರಿಸು-ವುದಕ್ಕಾಗಿ ಹನ್ನೆರಡನೇ ಮೊದಲಾದ ದಿನದಲ್ಲಿಯೇ ಸಪಿಂಡೀಕರಣ-ಶ್ರಾದ್ಧವನ್ನು ಮಾಡಿಕೊಂಡು ಅಪಕರ್ಷ ಮಾಡಿಕೊಳ್ಳುತ್ತಾರೆ. ಆ ರೀತಿಯಾಗಿ ವೃದ್ಧಿನಿಮಿತ್ತ ಅಪಕರ್ಷ ಮಾಡಿಕೊಳ್ಳುವುದು

ಯೋಗ್ಯವಾಗಿದೆ.[1] ಹಾಗೆ ವೃದ್ಧಿ (ವಿವಾಹಾದಿ ಶುಭಕರ್ಮ) ನಿಮಿತ್ತ ಅಪಕರ್ಷ ಮಾಡಿಕೊಂಡಿದ್ದರೆ ವಿವಾಹ ಮೊದಲಾದ ಶುಭಕರ್ಮಗಳನ್ನು ಆಚರಿಸಬಹುದು. ಯಾತ್ರೆಯನ್ನೂ ಮಾಡಬಹುದು ಎಂಬುದಾಗಿ ಧರ್ಮಶಾಸ್ತ್ರಕಾರರು ವ್ಯವಸ್ಥೆ ಮಾಡಿಕೊಟ್ಟಿದ್ದಾರೆ.[2]

---

15.1 ''ಚತುಃ ಪುರುಷಮಧ್ಯೇ ಸಪಿಂಡೇಷು ನಾಂದೀಶ್ರಾದ್ಧಪ್ರಾಪ್ತೌ ತು
ತತ್ಪ್ರಾಪ್ತಿಮಾಸೇ ಏವ ಏಕಸ್ಮಿನ್ನೇವ ದಿನೇ ಸರ್ವಾಣ್ಯಪಕೃಷ್ಯ ಕಾರ್ಯಾಣಿ ।
ಪ್ರೇತಶ್ರಾದ್ಧಾನಿ ಸರ್ವಾಣಿ ಸಪಿಂಡೀಕರಣಂ ತಥಾ ।
ಅಪಕೃಷ್ಯಾಪಿ ಕುರ್ವೀತ ಕರ್ತುಂ ನಾಂದೀಮುಖಂ ದ್ವಿಜಃ ॥ ಇತ್ಯುಕ್ತೇಃ ।''
(ಧರ್ಮಸಿಂಧು - ತೃತೀಯಪರಿಚ್ಛೇದ - ಷೋಡಶಮಾಸಿಕಾನಿ)

''ಅಪಕರ್ಷೇ ಪುನಃ ಕಾಲಾಂತರಮಾಹ ಶಾಕಟಾಯನಃ -
ವ್ರತಸೀಮಂತಚೌಲೇಷು ವಿವಾಹೇ ಚ ದ್ವಿತೀಯಕೇ ।
ಅಲಭ್ಯಯೋಗಯಜ್ಞೇಷು ಪ್ರಾಪ್ತೇಷು ಯದಿ ಮಧ್ಯತಃ ॥
ಅಪಕೃಷ್ಯ ತದಾ ಕುರ್ಯಾನ್ಮಾಸಿಕಾನಿ ಮೃತೇಽಹನಿ ।
ಮಾಸಿಕಾನಿ ಪುನಃ ಕುರ್ಯಾತ್ತಿತ್ರೋರೇವ ವಿಚಕ್ಷಣಃ ॥
... ಇತಿ । ಸ್ಮೃತ್ಯಂತರೇ -
''ಶುಭಂ ಕರ್ಮ ಚ ಕುರ್ವೀತ ಮಾಸಿಕಾನ್ಯಪಕೃಷ್ಯ ಹಿ ।''
(ಸ್ಮೃತಿಮುಕ್ತಾವಲೀ - ಶ್ರಾದ್ಧಪ್ರಕರಣ - ಮಾಸಿಕನಿರ್ಣಯಃ)

15.2 ''ಕೇಚಿತ್ ವರ್ಷಾಂತಸಪಿಂಡನಪಕ್ಷೇ ಏವೈತೇ ಸರ್ವೇ ನಿಷೇಧಾ ನ ತು ದ್ವಾದಶಾಹಸಪಿಂಡನಪಕ್ಷೇ ಇತ್ಯಾಹುಃ । ಅಪರೇ ತು ದ್ವಾದಶಾಹಸಪಿಂಡನಪಕ್ಷೇಽಪಿ ಸರ್ವ ಏತೇ ನಿಷೇಧಾ ಇತ್ಯಾಹುಃ । ಅತ್ರೈವಂ ವ್ಯವಸ್ಥಾ, ವೃದ್ಧಿಪ್ರಾಪ್ತಿಂ ವಿನಾಽರ್ವಾಕ್ಸಪಿಂಡನಾಪಕರ್ಷೇಽಪಿ ಪ್ರೇತಸ್ಯ ಪಿತೃತ್ವಪ್ರಾಪ್ತಿಃ ವರ್ಷಾಂತ ಏವ,
ಕೃತೇ ಸಪಿಂಡೀಕರಣೇ ನರಃ ಸಂವತ್ಸರಾತ್ಪರಮ್ ।
ಪ್ರೇತದೇಹಂ ಪರಿತ್ಯಜ್ಯ ಭೋಗದೇಹಂ ಪ್ರಪದ್ಯತೇ ॥
ಇತ್ಯಾದಿವಚನಾತ್ । ತೇನ ಸಪಿಂಡೀಕರಣಸತ್ತ್ವೇಽಪಿ ವೃದ್ಧಿದೈವಪಿತ್ರ್ಯೇಷ್ವನಧಿಕಾರಃ, ವೃದ್ಧಿನಿಮಿತ್ತಾಪಕರ್ಷೇ ತು ವೃದ್ಧ್ಯಾದಾವಧಿಕಾರ ಇತಿ । ಅತ ಏವ ಕಾಲತತ್ತ್ವನಿರ್ಣಯೇ ಸಂಕಟಾದೌ ಮೃತಪಿತೃಕಾಪತ್ಯಾನಾಂ ಸಂಸ್ಕಾರಾಭ್ಯುದಯಿಕಂ ಮೃತಮಾತಾಪಿತೃಕೇಣ ಪುತ್ರೇಣ ಸ್ವಾಪತ್ಯಸಂಸ್ಕಾರಾದಿಕಂ ಚ ಪ್ರಥಮಾಬ್ದೇಽಪಿ ಕಾರ್ಯಮಿತ್ಯುಕ್ತಮ್ । ದರ್ಶಮಹಾಲಯಾದಿಶ್ರಾದ್ಧಸ್ಯ ನಿತ್ಯತರ್ಪಣಸ್ಯ ಚಾಪ್ಯೇವಮೇವ ವ್ಯವಸ್ಥಾ ಜ್ಞೇಯಾ ॥''
(ಧರ್ಮಸಿಂಧು - ತೃತೀಯಪರಿಚ್ಛೇದ - ಅಥ ಪ್ರಥಮಾಬ್ದೇ ನಿಷಿದ್ಧಾನಿ PNO410)

ವರ್ಷದ ಅಂತ್ಯದಲ್ಲಿ ಸಪಿಂಡೀಕರಣಶ್ರಾದ್ಧವನ್ನು ಮಾಡುವವರು ಮಾತ್ರ ಒಂದು ವರ್ಷದವರೆಗೆ ಯಾವುದೇ ಹಬ್ಬ-ಹರಿದಿನಗಳನ್ನೂ, ವಿವಾಹಾದಿ ಉತ್ಸವಗಳನ್ನೂ ಆಚರಿಸಬಾರದು. ಯಾತ್ರೆಯನ್ನೂ ಮಾಡಬಾರದು.

**16. ಅಪರಕರ್ಮಗಳನ್ನು ಮಾಡಿಸುವ ಯಾಜ್ಞಿಕರು ಏನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು?**

ಯಜ್ಞೋಪವೀತವನ್ನು ಬದಲಿಸಿ, ಸಾಧ್ಯವಾದಷ್ಟು ಸಾವಿರ/ಹತ್ತು ಸಾವಿರ ಗಾಯತ್ರೀಮಂತ್ರಜಪ ಮಾಡಬೇಕು. ಕನಿಷ್ಠಪಕ್ಷ ಒಂದು ಸಾವಿರ ಗಾಯತ್ರೀಯನ್ನಾದರೂ ಜಪಿಸಬೇಕು. ಗಾಯತ್ರೀಮಂತ್ರಜಪದಿಂದ ಎಲ್ಲವಿಧ ಶುದ್ಧಿ ಬರುತ್ತದೆ ಎಂದು ತಿಳಿಸಿದ್ದಾರೆ.

**17. ಕೆಲವು ಕರ್ಮಗಳಿಂದ ಹೆಚ್ಚು ಪುಣ್ಯ, ಕೆಲವು ಕರ್ಮಗಳಿಂದ (ಹತ್ತು ಪಟ್ಟು - ನೂರು ಪಟ್ಟು) ಕಡಿಮೆ ಪುಣ್ಯ ಎಂದು ಹೇಳುವಾಗ ಅದನ್ನು ನಾವು ಹೇಗೆ ನಂಬಬೇಕು? ಅದು ನಮಗೆ ಕಾಣಿಸುತ್ತದೆಯೇ? ಅಥವಾ ನಮ್ಮ ಪುಣ್ಯ ಎಷ್ಟು ಹೆಚ್ಚಿದೆ, ಎಷ್ಟು ಕಡಿಮೆ ಇದೆ ಎಂದು ತಿಳಿಯಲು (ಅಕೌಂಟ್) ಖಾತೆ ಅಥವಾ ಪಾಸ್‌ಬುಕ್ ಇರುತ್ತದೆಯೇ?**

ಪುಣ್ಯ ಹೆಚ್ಚಾಗುವುದು, ಕಡಿಮೆಯಾಗುವುದು ನಿಶ್ಚಿತ. ಆದರೆ ಅದನ್ನು ತಿಳಿಯಲು ಪ್ರತಿಯೊಬ್ಬರಿಗೂ ವೈಯಕ್ತಿಕವಾದ ಪಾಸ್‌ಬುಕ್ ಎಂದಿಲ್ಲ. (ಜನರಲ್ ಆದ) ಎಲ್ಲರಿಗೂ ಸಾಧಾರಣವಾದ ಒಂದು ಪಾಸ್‌ಬುಕ್ ಇದೆ. ಅದು ಯಾವುದೆಂದರೆ ಅದು ಮಹಾಭಾರತ.

**''ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ।''**

ಎಂದು ಹೇಳಿದಂತೆ ಯಾರು ಯಾರು ಮಾಡಿದ ಯಾವ ಯಾವ ಕರ್ಮಗಳಿಗೆ ಏನೇನು ಪುಣ್ಯ ಬರುತ್ತದೆ? ಎಷ್ಟೆಷ್ಟು ಪುಣ್ಯ ಬರುತ್ತದೆ? ಯಾವುದರಿಂದ ಹೆಚ್ಚು ಯಾವುದರಿಂದ ಕಡಿಮೆ ಎಂಬುದನ್ನು ತಿಳಿಸುವ ದೊಡ್ಡ ಪಾಸ್‌ಬುಕ್ ಎಂದರೆ ಅದು ಮಹಾಭಾರತವೇ.

ಮಹಾಭಾರತದ (ಶಾಸ್ತ್ರದ) ಅಧ್ಯಯನದಿಂದಾಗಿ ಅದನ್ನು ತಿಳಿಯಬಹುದು. ಆದರೆ ''ಯಾರದು ಎಷ್ಟು'' ಎನ್ನುವುದು ಮಾತ್ರ ದೇವಗುಹ್ಯವಾದದ್ದು.

**18. ಹೆಸರು/ಕೀರ್ತಿಗಳ ವಿಶೇಷ ಅಪೇಕ್ಷೆಯಿಂದ ರಸೀದಿ ಪಡೆದು ದಾನ ಮಾಡುವುದು ಉತ್ತಮವೋ? ಅಥವಾ ಯಾವ ಅಪೇಕ್ಷೆಯೂ ಇಲ್ಲದೇ ಹುಂಡಿಯಲ್ಲಿ ಹಾಕಿ ಕೃಷ್ಣಾರ್ಪಣ ಎನ್ನುವುದು ಉತ್ತಮವೋ?**

ಯಾವ ಅಪೇಕ್ಷೆಯೂ ಇಲ್ಲದೇ ದಾನ ಮಾಡಿ ಕೃಷ್ಣಾರ್ಪಣ ಎನ್ನುವುದೇ ಉತ್ತಮ ಎಂದು ಮಹಾಭಾರತ ಉತ್ತರಿಸುತ್ತದೆ.

ಆದರೆ ತಾನು ದಾನ ಮಾಡಿದ ಹಣವು ಸದ್ವಿನಿಯೋಗವಾಗಬೇಕು. ಯಾವುದೋ ಕಾರಣದಿಂದ ಕೆಟ್ಟ ಕಾರ್ಯಕ್ಕೆ ವಿನಿಯೋಗವಾಗಬಾರದು. ಕೆಟ್ಟ ಕಾರ್ಯಕ್ಕೆ ವಿನಿಯೋಗಿಸಿ ಅದರ ಪಾಪ ತನಗೂ ಬರಬಾರದು ಎಂಬ (ಆತಂಕ) ಸಂದೇಹ ಇದ್ದ ಪ್ರಸಂಗದಲ್ಲಿ, ಅಷ್ಟಕ್ಕಾಗಿ ರಸೀದಿ ಪಡೆದು ಸದ್ವಿನಿಯೋಗ- ವಾಗುವಂತೆ ಪ್ರಚೋದಿಸಿದರೆ ಸಾಕು.

**19. ಸತ್ಕರ್ಮಗಳನ್ನೇ ಆಚರಿಸುತ್ತಾ ಅರ್ಥಾತ್ ಧರ್ಮ-ನೀತಿಗಳಿಂದ ಬದುಕುವ ಜನರು ದುಃಖದಿಂದಿರುತ್ತಾರೆ. ಆದರೆ ಧರ್ಮವನ್ನೇ ಮಾಡದೇ ಅಸತ್ಕರ್ಮಗಳನ್ನು ಆಚರಿಸುವ ಜನರು ಸುಖದಿಂದಿರುತ್ತಾರೆ. ಈ ವಿಪರ್ಯಾಸ ಏಕೆ ?**

**''ನಾಸತೋ ವಿದ್ಯತೇ ಭಾವಃ ನಾಭಾವೋ ವಿದ್ಯತೇ ಸತಃ''**

ಅಸತ್ಕರ್ಮಗಳಿಗೆ ಸುಖ, ಸತ್ಕರ್ಮಗಳಿಗೆ ದುಃಖ ಸರ್ವಥಾ ಫಲವಲ್ಲ. ಇದು ಭಗವಂತನ (ಸರ್ಕಾರದ) ನಿಯಮ.[1]

---

19.1 'ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।'
(ಭಗವದ್ಗೀತಾ ಅ-2 ಶ್ಲೋ-16)

''ನ ಚ ಯುದ್ಧಾತ್ ಪರಲೋಕದುಃಖಮಿತಿ ಶೋಕಃ । ಅಸತ್ಕರ್ಮಣಃ ಸಕಾಶಾತ್ ಭಾವೋ ನಾಸ್ತಿ । ಸತ್ಕರ್ಮಣಃ ಸಕಾಶಾತ್ ಅಭಾವೋ ನಾಸ್ತೀತಿ ನಿಯತತ್ವಾತ್ । 'ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಕಾಃ । ಅಭಾವವಾಚಿನಃ ಶಬ್ದಾಃ ಸರ್ವೇ ತೇ ದುಃಖವಾಚಕಾಃ' ಇತಿ ಶಬ್ದನಿರ್ಣಯೇ ।
'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥಯುಜ್ಯತೇ' ಇತಿ
ವಕ್ಷ್ಯಮಾಣತ್ವಾತ್ । 'ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್' ಇತ್ಯಾದೇಶ್ಚ ।''
(ಗೀತಾ ತಾತ್ಪರ್ಯ 2-16)

1) ಆದರೆ ಅಸತ್ಕರ್ಮ ಮಾಡುವವನಿಗೆ ಸುಖವಾಗುವಂತೆ ತೋರುತ್ತದೆ. ಸತ್ಕರ್ಮ ಮಾಡುವವನಿಗೆ ದುಃಖವಾಗುವಂತೆ ತೋರುತ್ತದೆ. ಯಾವ ವ್ಯಕ್ತಿ ಇಂದು ಅಸತ್ಕರ್ಮ ಮಾಡುತ್ತಿದ್ದಾನೆ / ದುಷ್ಟನಾಗಿದ್ದಾನೆ, ಅವನು ಇಂದು ಅನುಭವಿಸುತ್ತಿರುವ ಸುಖ ಇಂದು ಮಾಡುತ್ತಿರುವ ಅಸತ್ಕರ್ಮಗಳ ಫಲವಲ್ಲ. ಜನ್ಮಾಂತರದಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಇಂದು ಸುಖವನ್ನು ಅನುಭವಿಸುತ್ತಿದ್ದಾನೆ. ಇಂದು ಮಾಡುತ್ತಿರುವ ಅಸತ್ಕರ್ಮಗಳ ಫಲವಾಗಿ ಅವನು ಕಾಲಾಂತರದಲ್ಲಿ (ಜನ್ಮಾಂತರದಲ್ಲಿ) ದುಃಖವನ್ನು ಅನುಭವಿಸುವುದು ನಿಶ್ಚಿತ.

ಒಬ್ಬ ವ್ಯಕ್ತಿ ತಿಂಗಳಿನ ಮೊದಲನೇ ತಾರೀಖಿನಂದು ಅಂಗಡಿಯ ಮಾಲೀಕನಲ್ಲಿ ಹತ್ತುಸಾವಿರ ರೂಗಳನ್ನು ಡಿಪಾಸಿಟ್ ಮಾಡುತ್ತಾನೆ. ಪ್ರತಿನಿತ್ಯ ಅಂಗಡಿಗೆ ಬಂದು (ಮೊದಲೇ ಡಿಪಾಸಿಟ್ ಮಾಡಿದ್ದರಿಂದ ಪ್ರತಿದಿನ ಹಣ ಕೊಡದೇ) ತನಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಿರುತ್ತಾನೆ. ಅವನು ತೆಗೆದುಕೊಂಡು ಹೋಗುವ ಸಾಮನುಗಳ ಬೆಲೆಯನ್ನು ಮಾಲೀಕನು ತನ್ನ ಪುಸ್ತಕದಲ್ಲಿ ಬರೆದುಕೊಂಡು ಜಮಾ ಮಾಡಿಕೊಳ್ಳುತ್ತಿರುತ್ತಾನೆ. ಡಿಪಾಸಿಟ್ ಇಟ್ಟ ವ್ಯಕ್ತಿಯ ಜೊತೆ ನಾವೂ ಒಂದು ದಿನ ಅಂಗಡಿಗೆ ಹೋದ ಸಂದರ್ಭದಲ್ಲಿ, ಇಬ್ಬರೂ ತಮಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಹೋಗುವಾಗ ನಾವು ಹಣ ಕೊಟ್ಟು ತೆಗೆದುಕೊಳ್ಳುತ್ತೇವೆ. ಆದರೆ ಆ ವ್ಯಕ್ತಿ ಹಣ ಕೊಡದೇ ತೆಗೆದುಕೊಂಡು ಹೋಗುತ್ತಾನೆ.

ಅವನನ್ನು ನೋಡಿದ ನಮಗೆ ಏನು ಅನಿಸುತ್ತದೆ ? " ಈ ಅಂಗಡಿಯಲ್ಲಿ ನಾವು ಮಾತ್ರ ಹಣ ಕೊಟ್ಟು ಸಾಮಾನುಗಳನ್ನು ಖರೀದಿಸಬೇಕು. ಆದರೆ ಆ

---

"ಅತ್ರ ಸದಸಚ್ಛಬ್ದೌ ಸಾಧ್ವಸಾಧುಕರ್ಮಪರೌ । ಭಾವಾಭಾವಶಬ್ದೌ ಸುಖದುಃಖವಾಚಕೌ । 'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ । ಪ್ರಶಸ್ತೇ ಕರ್ಮಣಿ ತಥಾ' (ಗೀತಾ-17/26) ಇತ್ಯಾದೇಃ ।

"ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಿನಃ" ಇತ್ಯಾದೇಃ ।

**ಅಸತಃ ದುಷ್ಕರ್ಮಣಃ ಸಕಾಶಾತ್ ಭಾವಃ ಸುಖಂ ನಾಸ್ತಿ । ಯಥೇತಿ ದೃಷ್ಟಾಂತತಯಾ ಽಸ್ಯೋಪಯೋಗಃ । ಸತಃ ಸಾಧುಕರ್ಮಣಃ ಸಕಾಶಾದಭಾವೋ ದುಃಖಂ ನಾಸ್ತಿ ।"**

(ಶ್ರೀರಾಘವೇಂದ್ರಯತಿ ವಿರಚಿತಾ - ಗೀತಾವಿವೃತಿಃ 2/16)

ವ್ಯಕ್ತಿ ಹಣವನ್ನು ಕೊಡದೇ ಸಾಮಾನುಗಳನ್ನು ಖರೀದಿಸಿದ. ಅಂಗಡಿ-ಮಾಲೀಕನು ಹೀಗೇಕೆ ವೈಷಮ್ಯ ಮಾಡುತ್ತಾನೆ ?'' ಎಂದು ಅನಿಸುವುದು ಸಹಜ.

ಈ ದೃಷ್ಟಾಂತವನ್ನು ಗಮನಿಸಿದಾಗ, ಆ ವ್ಯಕ್ತಿ ಹಣ ಕೊಡದೇ ಸಾಮಾನುಗಳನ್ನು ಖರೀದಿಸಿದ್ದು ಮಾತ್ರ ನಮಗೆ ಕಂಡದ್ದು. ಅದರಿಂದ 'ಹೀಗೇಕೆ ವೈಷಮ್ಯ' ಎಂದು ಸಂದೇಹವೂ ಬರುತ್ತದೆ. ಆದರೆ ಹಣ ಕೊಡದೇ ಖರೀದಿಸಿದ್ದಕ್ಕೆ ಮೂಲಕಾರಣವಾದ, ಮೊದಲು ಇಟ್ಟಿದ್ದ ಡಿಪಾಸಿಟ್ ನಮಗೆ ತಿಳಿದಿಲ್ಲ. ಮೊದಲು ಇಟ್ಟಿದ್ದ ಡಿಪಾಸಿಟ್‌ನಿಂದಲೇನೇ ಅಂದು ಹಣ ಕೊಡದ್ದಿದ್ದರೂ ಅವನಿಗೆ ಸಾಮಾನುಗಳು ದೊರಕಿದ್ದಲ್ಲವೇ ?

ಅದರಂತೆ ಅಸತ್ಕರ್ಮ ಮಾಡುವ ವ್ಯಕ್ತಿಯು ಅನುಭವಿಸುವ ಸುಖವು ಮಾತ್ರ ನಮಗೆ ಕಾಣುವುದು. ಆದರೆ ಅವನು ಸುಖವನ್ನು ಅನುಭವಿಸುತ್ತಿರುವುದು ಇಂದು ಮಾಡುತ್ತಿರುವ ಕೆಟ್ಟ ಕೆಲಸಗಳ ಫಲವಾಗಿ ಅಲ್ಲ. ಈಗ ಅನು-ಭವಿಸುತ್ತಿರುವ ಸುಖಕ್ಕೆ ಕಾರಣ ಮೊದಲೇ ಮಾಡಿಟ್ಟಿದ್ದ ಪುಣ್ಯದ ಡಿಪಾಸಿಟ್. ಅಂದರೆ ಜನ್ಮಾಂತರದಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಇಂದು ಸುಖವನ್ನು ಅನುಭವಿಸುತ್ತಿದ್ದಾನೆ. ಇದನ್ನು ತಿಳಿಯದೇ ''ಇಂದು ಅಸತ್ಕರ್ಮಗಳನ್ನು ಮಾಡುತ್ತಿದ್ದರೂ ಅವನು ಸುಖವನ್ನೇ ಅನುಭವಿಸುತ್ತಾನೆ'' ಎಂದು ತಪ್ಪು ತಿಳಿಯಬಾರದು.

2. ಇನ್ನು ಯಾವ ವ್ಯಕ್ತಿ ಸತ್ಕರ್ಮ ಮಾಡುತ್ತಿದ್ದರೂ ದುಃಖವನ್ನು ಅನುಭವಿಸುತ್ತಿದ್ದಾನೆ, ಅವನು ಅನುಭವಿಸುತ್ತಿರುವ ದುಃಖವು ಇಂದು ಮಾಡುತ್ತಿರುವ ಸತ್ಕರ್ಮಗಳ ಫಲವಲ್ಲ. ದುಃಖವನ್ನು ಅನುಭವಿಸುವುದು ಸತ್ಕರ್ಮ ಮಾಡಿದ್ದರಿಂದ ಅಲ್ಲ. ಕಿಂತು ಜನ್ಮಾಂತರದಲ್ಲಿ ಮಾಡಿದ ಅಸತ್ಕರ್ಮಗಳ ಫಲವಾಗಿ ಇಂದು ದುಃಖವನ್ನು ಅನುಭವಿಸುತ್ತಿದ್ದಾನೆ. ಅವನು ಇಂದು ಮಾಡುತ್ತಿರುವ ಸತ್ಕರ್ಮಗಳಿಗೆ ಫಲವಾಗಿ ಕಾಲಾಂತರದಲ್ಲಿ (ಜನ್ಮಾಂತರದಲ್ಲಿ) ಅವನು ಸುಖವನ್ನು ಅನುಭವಿಸುವುದು ನಿಶ್ಚಿತ.

ಒಬ್ಬ ವ್ಯಕ್ತಿಯು ಬಹಳ ಲಂಚದಿಂದ, ಕಳ್ಳತನದಿಂದ ಹಣವನ್ನು ಸಂಪಾದಿಸಿ ಆ ಹಣದಿಂದ ಬೇಕಾದಷ್ಟು ದಾನ-ಧರ್ಮ ಮಾಡುತ್ತಿರುತ್ತಾನೆ. ಸಮಾಜಸೇವೆ ಮಾಡುತ್ತಿರುತ್ತಾನೆ. ಪರೋಪಕಾರ ಮಾಡುತ್ತಿರುತ್ತಾನೆ. ಈ ರೀತಿಯಾಗಿ ಸಮಾಜಸೇವೆ ಮಾಡಿದ್ದಕ್ಕೆ, ಪರೋಪಕಾರ-ದಾನ ಮಾಡಿದ್ದಕ್ಕೆ

ಅವನಿಗೆ ಪ್ರಶಸ್ತಿ/ಮನ್ನಣೆ ಕೊಡಬೇಕೋ ? ಅಥವಾ ಅವನು ಎಲ್ಲಿಂದ (ಯಾವ ರೀತಿಯಿಂದ) ಹಣ ತಂದು ದಾನ-ಪರೋಪಕಾರ ಮಾಡುತ್ತಿದ್ದಾನೆ ಎಂದು ತಿಳಿದು ಅದಕ್ಕೆ ಶಿಕ್ಷೆ ಕೊಡಬೇಕೋ ?

ಆ ವ್ಯಕ್ತಿಯು ಒಂದು ಸಮಾರಂಭದ ವೇದಿಕೆಯ ಮೇಲೆ ಬೇಕಾದಷ್ಟು ದ್ರವ್ಯದಾನ ಮಾಡುತ್ತಿರುವಾಗ ಪೋಲೀಸರು ಬಂದು ಅವನನ್ನು ಹಿಡಿದು ಜೈಲಿಗೆ ಹಾಕುತ್ತಾರೆ. ಈ ಘಟನೆಯನ್ನು ಕಂಡು ''ಎಷ್ಟೋ ಜನರು ಕೆಟ್ಟ ಕೆಲಸಗಳನ್ನು ಮಾಡಿ ಧೈರ್ಯವಾಗಿ ಓಡಾಡುತ್ತಿದ್ದಾರೆ. ಇವನು ಮಾತ್ರ ದಾನ ಮೊದಲಾದ ಸತ್ಕರ್ಮಗಳನ್ನು ಮಾಡುತ್ತಿದ್ದರೂ ಜೈಲಿಗೆ ಹಾಕಿದ್ದಾರೆ. ಎಂತಹ ವಿಪರ್ಯಾಸ'' ಎಂದು ಜನರಿಗೆ ಅನಿಸುತ್ತದೆ. ಜನರಿಗೆ ಕಾಣಿಸಿದ್ದು ಇವತ್ತು ಅವನು ಮಾಡುತ್ತಿರುವ ಸತ್ಕರ್ಮಗಳು ಮಾತ್ರ. ಆದರೆ ಅವನು ಹಿಂದೆ ಮಾಡಿದ ಕೆಟ್ಟ ಕೆಲಸಗಳು ಅರ್ಥಾತ್ ಲಂಚಕೋರತನ, ಕಳ್ಳತನ ಮುಂತಾದ ಅವನ ಚರಿತ್ರೆ ಗೊತ್ತಿರುವುದು ಪೋಲೀಸರಿಗೆ. ಅನೇಕ ಪ್ರಕರಣಗಳಲ್ಲಿ ಪೋಲೀಸರು ಇವನನ್ನು ಹುಡುಕುತ್ತಿದ್ದಾಗ, ವೇದಿಕೆಯ ಮೇಲೆ ದಾನ ಮಾಡುವ ಪ್ರಸಂಗದಲ್ಲಿ ಇವನನ್ನು ಕಂಡು ಹಿಡಿದು ಜೈಲಿಗೆ ಹಾಕಿದ್ದಾರೆ. ಅಂದಮೇಲೆ ದಾನ ಮಾಡಿದ್ದಕ್ಕೆ ಆ ಜೈಲುಶಿಕ್ಷೆಯೇ ? ಅಲ್ಲ ದಾನ ಮಾಡುತ್ತಿರುವಾಗ ಜೈಲು ಆಗಿರಬಹುದು. ಆದರೆ ದಾನಮಾಡಿದ್ದಕ್ಕೆ ಜೈಲು ಅಲ್ಲ. ಅವನು ಹಿಂದೆ ಮಾಡಿದ ಕೆಟ್ಟ ಕೆಲಸಗಳಿಗೆ ಫಲ ಆ ಜೈಲು.

ಅದರಂತೆ ಇವತ್ತು ಧರ್ಮ (ಸತ್ಕರ್ಮ) ಮಾಡುತ್ತಿರುವಾಗಲೇ ನಾವು ದುಃಖವನ್ನು ಅನುಭವಿಸುತ್ತಿರಬಹುದು. ಆದರೆ ಆ ದುಃಖ ಧರ್ಮ (ಸತ್ಕರ್ಮ) ಮಾಡಿದ್ದಕ್ಕೆ ಅಲ್ಲ. ಜನ್ಮಾಂತರದಲ್ಲಿ ಮಾಡಿದ ಅಸತ್ಕರ್ಮಗಳಿಗೆ ಫಲವಾಗಿ ದುಃಖವನ್ನು ಅನುಭವಿಸುವುದು. ಇಂದು ಮಾಡುತ್ತಿರುವ ಸತ್ಕರ್ಮಗಳಿಗೆ ಫಲವಾಗಿ (ಜನ್ಮಾಂತರದಲ್ಲಿ) ಕಾಲಾಂತರದಲ್ಲಿ ಅವನು ಸುಖವನ್ನು ಅನುಭವಿಸುವುದರಲ್ಲಿ ಸಂದೇಹವೇ ಇಲ್ಲ.

ಇಂದಿನ ಕಾಲದಲ್ಲಿ ತಪ್ಪು ಮಾಡದಿದ್ದರೂ, ನಿರಪರಾಧಿ ಆಗಿದ್ದವನಿಗೂ ಶಿಕ್ಷೆ ಆಗಬಹುದು. ಮತ್ತು ತಪ್ಪು ಮಾಡಿದ್ದರೂ, ಅಪರಾಧಿ ಆದವನಿಗೂ ಬಿಡುಗಡೆ ಆಗಬಹುದು. ಆದರೆ ಭಗವಂತನ ಸರ್ಕಾರದಲ್ಲಿ ಮಾತ್ರ ಸತ್ಕರ್ಮ ಮಾಡಿದವನಿಗೆ ದುಃಖದ ಫಲವಿಲ್ಲ ಮತ್ತು ಸುಖದ ಫಲ ನಿಶ್ಚಿತ. ಅದರಂತೆ ದುಷ್ಕರ್ಮ ಮಾಡಿದವನಿಗೆ ಸುಖದ ಫಲವಿಲ್ಲ. ಮತ್ತು ದುಃಖದ ಫಲ ಕಟ್ಟಿಟ್ಟ ಬುತ್ತಿ.

**20. ''ನಿಷ್ಕಾಮಕರ್ಮಗಳನ್ನು ಮಾಡಬೇಕು'' ಎಂದು ತಿಳಿಸುವ ಮೂಲಕ ಶಾಸ್ತ್ರವು ಸಕಾಮಕರ್ಮಗಳನ್ನು ನಿಷೇಧಿಸುತ್ತದೆ. ಪುತ್ರಕಾಮನೆಯಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿದಾಗ ಅದು ಸಕಾಮಕರ್ಮ-ವಾಗುವುದಿಲ್ಲವೇ ? ಸಕಾಮವಾದ ಆ ಪುತ್ರಕಾಮೇಷ್ಟಿಯಾಗವು ಶಾಸ್ತ್ರಸಮ್ಮತವೇ ?**

ಕೇವಲ ಪುತ್ರಕಾಮನೆಯಿಂದ ಮಾಡಿದರೆ ಪುತ್ರಕಾಮೇಷ್ಟಿಯಾಗವು ಸಕಾಮವೇ. ಹಾಗೆ ಸಕಾಮವಾದ ಪುತ್ರಕಾಮೇಷ್ಟಿಯಾಗವು ಶಾಸ್ತ್ರಸಮ್ಮತವಲ್ಲ.

ಆದರೆ ಶಾಸ್ತ್ರದಲ್ಲಿ ಬ್ರಹ್ಮಹತ್ಯೆ - ಸುರಾಪಾನಾದಿಗಳನ್ನು ಯಾವ ಮಟ್ಟದಲ್ಲಿ ನಿಷೇಧಿಸಿದ್ದಾರೆ, ಆ ಮಟ್ಟದಲ್ಲಿ ಸಕಾಮಕರ್ಮಗಳನ್ನು ನಿಷೇಧಿಸಿಲ್ಲ.

**'ರೋಚನಾರ್ಥಂ ಫಲಶ್ರುತಿಃ'**

ಎಂದು ಹೇಳಿದಂತೆ ಪ್ರಾರಂಭದಲ್ಲಿ ಯಾವ ಅಪೇಕ್ಷೆಯೂ ಇಲ್ಲದೇ, ನಿಷ್ಕಾಮವಾಗಿ ಕರ್ಮ ಮಾಡುವ ಯೋಗ್ಯತೆ ಇರುವುದಿಲ್ಲ ಎನ್ನುವುದಕ್ಕಾಗಿ ಸಕಾಮವಾಗಿ ಮಾಡಲು ಶಾಸ್ತ್ರದಲ್ಲಿ ಒಪ್ಪಿಗೆ ನೀಡಿದ್ದಾರೆ. ಉದಾಹರಣೆಗೆ - ರೋಗನಿವಾರಣೆಗಾಗಿ ಕಹಿಯಾದ ಔಷಧಿಯನ್ನು ಹಾಕಲು ಹೊರಟಾಗ ಮಗು ಬಾಯಿ ತೆರೆಯುವುದಿಲ್ಲ. ಆಗ ಮೊದಲು ಸಿಹಿಯಾದ ಬೆಲ್ಲವನ್ನು ಹಾಕಿ ನಂತರ ಅದರ ಹಿಂದೆ ಕಹಿಯಾದ ಔಷಧಿಯನ್ನು ಹಾಕಿ ಲೌಕಿಕ ತಾಯಿಯು ರೋಗವನ್ನು ಪರಿಹರಿಸುವಂತೆ, ಮೊದಲು ಸಕಾಮಕರ್ಮ-ಗಳನ್ನು ಮಾಡಲು ಹೇಳಿ ಅದರಿಂದ ಅವನಿಗೆ ಧರ್ಮದಲ್ಲಿ ಅಭಿರುಚಿ ಹುಟ್ಟಿದ ನಂತರ ಸಂಸಾರವೆಂಬ ರೋಗವನ್ನು ಪರಿಹರಿಸುವುದಕ್ಕಾಗಿ (ಯಾವ ಕಾಮನೆಯಿಲ್ಲದೇ ಮಾಡುವುದರಿಂದ ಕಹಿಯಾದ) ನಿಷ್ಕಾಮಕರ್ಮಗಳನ್ನು ವಿಧಿಸುತ್ತಾರೆ.

ರೋಗ ಹೋಗುವುದು ಔಷಧದಿಂದ. ನಮ್ಮ ಈ ಸಂಸಾರವೆಂಬ ರೋಗ ಹೋಗುವುದು ಕಹಿಯಾದ ನಿಷ್ಕಾಮಕರ್ಮಗಳೆಂಬ ಔಷಧದಿಂದ. ಮೊದಲು ನಿಷ್ಕಾಮಕರ್ಮಗಳೆಂಬ ಔಷಧಿಯನ್ನು ತೆಗೆದುಕೊಳ್ಳಲು ನಾವು ತಯಾರಾಗದಿದ್ದಾಗ, ಅದಕ್ಕಾಗಿ ಸಕಾಮಕರ್ಮಗಳೆಂಬ ಸಿಹಿ ಬೆಲ್ಲವನ್ನು ತೋರಿಸಿ, ನಾವು ಧರ್ಮದಲ್ಲಿ ಪ್ರವೃತ್ತರಾದ ಮೇಲೆ ಕಹಿಯಾದ

ನಿಷ್ಕಾಮಕರ್ಮಗಳೆಂಬ ಔಷಧಿ ಕೊಟ್ಟು ಸಂಸಾರವೆಂಬ ರೋಗ ಕಳೆಯುವ ಉದ್ದೇಶ ವೇದಗಳೆಂಬ ತಾಯಿಗೆ ಇದೆ.

ಆದರೆ ಸಿಹಿಬೆಲ್ಲವನ್ನು ಕೊಟ್ಟಮೇಲೆ ಕಹಿಯಾದ ಔಷಧಿಯನ್ನು ಅನಿವಾರ್ಯವಾಗಿ ಆದರೂ ಮಗು ನುಂಗುತ್ತದೆ. ಆದರೆ ಸಕಾಮಕರ್ಮ-ಗಳೆಂಬ ಬೆಲ್ಲವನ್ನು ತೋರಿಸಿ ನಿಷ್ಕಾಮಕರ್ಮಗಳೆಂಬ ಔಷಧಿಯನ್ನು ನಮಗೆ ತೋರಿಸಿದರೆ, ಸಿಹಿಯಾದ ಸಕಾಮಕರ್ಮಗಳೆಂಬ ಬೆಲ್ಲವನ್ನು ಮಾತ್ರ ನುಂಗಿ ನಿಷ್ಕಾಮಕರ್ಮಗಳೆಂಬ ಔಷಧಿಯನ್ನು ತೆಗೆದುಕೊಳ್ಳದೇ ಓಡಿಹೋಗುವ ಪರಿಸ್ಥಿತಿಯಲ್ಲಿ ನಾವು ಇದ್ದೇವೆ. ಹಾಗಾದರೆ ಸಂಸಾರವೆಂಬ ರೋಗ ಪರಿಹಾರವಾಗಲು ಸಾಧ್ಯವಿಲ್ಲ. ಆದ್ದರಿಂದ ಸಂಸಾರರೋಗದ ಪರಿಹಾರಕ್ಕಾಗಿ ನಿಷ್ಕಾಮಕರ್ಮಗಳನ್ನು ಆಚರಿಸುವುದು ಅತ್ಯಾವಶ್ಯಕವಾಗಿದೆ.

**21. ಸ್ತ್ರೀಯರಿಗೆ ಗಾಯತ್ರೀಮಂತ್ರದ ಅಧಿಕಾರವಿಲ್ಲದ ಕಾರಣ ಬೇರೆ ಯಾವ ಮಂತ್ರದ ಜಪವನ್ನು ಮಾಡಬೇಕು ?**

ಸ್ತ್ರೀಯರಿಗೆ ಗಾಯತ್ರೀಮಂತ್ರದ ಅಧಿಕಾರವಿಲ್ಲ ಎನ್ನುವುದು ಸತ್ಯ. ಆದ್ದರಿಂದಲೇ ಕೃಷ್ಣಮಂತ್ರದ ಜಪವನ್ನು ಮಾಡಬೇಕು.[1] ಗುರುಗಳಿಂದ ಉಪದೇಶ ತೆಗೆದುಕೊಂಡು ವಿಶೇಷ ಅರ್ಥಾನುಸಂಧಾನಪೂರ್ವಕವಾಗಿ ಪ್ರತಿನಿತ್ಯ ಕೃಷ್ಣಮಂತ್ರದ ಜಪವನ್ನು ಮಾಡಿ ಸಿದ್ಧಿಯನ್ನು ಪಡೆದುಕೊಳ್ಳಬೇಕು.

**22. ಬದರಿಗೆ ಹೋಗಿ ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡಿದರೆ ಸಾಕು. ಮತ್ತೆ ಶ್ರಾದ್ಧ ಮಾಡುವ ಆವಶ್ಯಕತೆಯೇ ಇಲ್ಲ ಎನ್ನುತ್ತಾರೆ. ಅದು ಸರಿಯೇ ?**

''ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡಿದರೆ ಪುನಃ ಶ್ರಾದ್ಧ ಮಾಡುವ ಆವಶ್ಯಕತೆಯೇ ಇಲ್ಲ'' ಎನ್ನುವ ಮಾತು(ವಚನ)ಗಳು ಪುರಾಣಗಳಲ್ಲಿ ಇವೆ. ಆದರೆ ಅದಕ್ಕೆ ಪ್ರತಿಯಾಗಿ ''ಮತ್ತೆ ಶ್ರಾದ್ಧ ಮಾಡಲೇಬೇಕು'' ಎಂಬ ಅನೇಕವಾಕ್ಯಗಳೂ ಇವೆ, ಆದ್ದರಿಂದ ಅದಕ್ಕೆ ಅರ್ಥವಾದ ಎನ್ನುತ್ತಾರೆ.

---

21.1 ''ಯಾಸಾಂ ಜಿಹ್ವಾಗ್ರೇ ಕೃಷ್ಣಮಂತ್ರಂ ನ ಚಾಸ್ತಿ
ತಾಸಾಂ ಸಂಗಂ ಯಃ ಕರೋತ್ಯೇವ ನಿತ್ಯಮ್ ॥''
''ತೇಷಾಂ ಕ್ರಿಯಾ ವ್ಯರ್ಥಮಾಹುರ್ಮಹಾಂತಃ
ಸುರಾಪಾನಾಂ ಲೋಕಮಾಹುಶ್ಚ ತಾಸಾಮ್ ॥''
(ಗರುಡಪುರಾಣ - ಬ್ರಹ್ಮಕಾಂಡ ಅಧ್ಯಾಯ - 35 ಶ್ಲೋ-19/20)

ಅರ್ಥವಾದ ಎಂದರೆ - ಸ್ತೋತ್ರ ಮಾಡುವುದಕ್ಕಾಗಿ ಸ್ವಲ್ಪ (ಹೆಚ್ಚು ವರ್ಣಿಸುವುದು) ಹೆಚ್ಚಾಗಿಯೇ ಹೇಳುವುದು. ಬದರಿಯಲ್ಲಿ ಶ್ರಾದ್ಧ ಮಾಡುವುದು ಅತ್ಯಂತಶ್ರೇಷ್ಠ ಎನ್ನುವುದನ್ನು ಎಷ್ಟರಮಟ್ಟಿಗೆ ಹೇಳುವುದೆಂದರೆ 'ಅಲ್ಲಿ ಶ್ರಾದ್ಧ ಮಾಡಿದರೆ ಮತ್ತೆ ಶ್ರಾದ್ಧ ಮಾಡುವುದೇ ಬೇಡ' ಎಂದು ಹೇಳುವ ಪದ್ಧತಿ. ಆ ರೀತಿ ವರ್ಣಿಸುವ ಪದ್ಧತಿ ಪುರಾಣಗಳಲ್ಲಿ ಉಂಟು. ಲೋಕದಲ್ಲಿಯೂ (ಲೌಕಿಕವ್ಯವಹಾರದಲ್ಲಿಯೂ) ಆ ಪದ್ಧತಿಯನ್ನು ಕಾಣುತ್ತೇವೆ.

ಉದಾ - ಒಬ್ಬ ಬ್ರಾಹ್ಮಣನನ್ನು ಮನೆಗೆ ಕರೆದು ಅನೇಕ ವಿಧಭಕ್ಷ್ಯ ಭೋಜ್ಯಗಳಿಂದ ಮೃಷ್ಟಾನ್ನ ಭೋಜನ ಮಾಡಿಸಿದರೆ, ಬ್ರಾಹ್ಮಣ ಹೇಳುತ್ತಾನೆ ''ನಿಮ್ಮ ಮನೆಯಲ್ಲಿ ಊಟ ಮಾಡಿದ್ದರಿದ ಇನ್ನೊಂದು ವರ್ಷ ಊಟ ಮಾಡುವುದೇ ಬೇಡ'' ಎಂದು. ತನ್ನ ಮನೆಗೆ ತೆರಳಿದ ನಂತರ 'ಫಲಹಾರ ಮಾಡು' ಎಂದು ಹೆಂಡತಿಗೆ ಹೇಳುತ್ತಾನೆ. ಹಾಗಾದರೆ 'ಒಂದು ವರ್ಷ ಊಟವೇ ಬೇಡ' ಎಂಬ ಮಾತಿಗೆ ಏನರ್ಥ ? ''ನೀವು ಮನೆಯಲ್ಲಿ ಬಹಳ ಚೆನ್ನಾಗಿ ಊಟಕ್ಕೆ ಹಾಕಿದ್ದೀರಿ. ಸಮೃದ್ಧವಾಗಿ ಊಟವಾಯಿತು'' ಎಂದಷ್ಟೇ ಅದಕ್ಕೆ ಅರ್ಥ. ಹೊರತು ನಿಜವಾಗಿಯೂ ಒಂದು ವರ್ಷ ಊಟ ಬಿಡಬೇಕು ಎನ್ನುವುದರಲ್ಲಿ ತಾತ್ಪರ್ಯವಲ್ಲ. ಇದು ಅರ್ಥವಾದ.

ಅದರಂತೆ ಪುರಾಣಗಳಲ್ಲಿಯೂ ಅಂತಹ ಭಾಷೆ ಉಂಟು. ಲೌಕಿಕವಾದ ಭಾಷೆಯ ಬಳಕೆ ಪುರಾಣಗಳಲ್ಲಿಯೂ ಇದೆ. ಅಥವಾ ಪುರಾಣಗಳಲ್ಲಿನ ಅಂತಹ ಭಾಷೆಯ ಬಳಕೆ ಲೌಕಿಕವ್ಯವಹಾರದಲ್ಲಿಯೂ ಬಂದಿದೆ. ಆದ್ದರಿಂದ ಬದರಿಗೆ ಹೋಗಿ ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡುವುದು ಅತ್ಯಂತಶ್ರೇಷ್ಠ, ಅದರಿಂದ ಮಹಾಪುಣ್ಯ ಬರುತ್ತದೆ ಎನ್ನುವುದರಲ್ಲಿ ಅದಕ್ಕೆ ತಾತ್ಪರ್ಯವೇ ಹೊರತು ಮತ್ತೆ ಶ್ರಾದ್ಧ ಮಾಡುವುದೇ ಬೇಡ ಎಂದಲ್ಲ.

ಶ್ರಾದ್ಧತಿಥಿ ಬಂದಾಗ ಶ್ರಾದ್ಧ ಮಾಡದೇ ಅತಿಕ್ರಮಣ ಮಾಡಿದರೆ

**'ಚಂಡಾಲಃ ಕೋಟಿಜನ್ಮಸು'**

ಕೋಟಿಜನ್ಮಗಳಲ್ಲಿ ಚಂಡಾಲನಾಗುತ್ತಾನೆ ಎಂಬುದಾಗಿ ಅಷ್ಟು ನಿಷ್ಠುರವಾದ ಪ್ರಾಯಶ್ಚಿತಗಳನ್ನು ಫಲಗಳನ್ನು ಹೇಳಿದ್ದರಿಂದ ಆ ರೀತಿಯಾಗಿ ಶ್ರಾದ್ಧವನ್ನು ಪರಿತ್ಯಾಗ ಮಾಡಬಾರದು ಎಂಬುದಾಗಿ ಶ್ರೀಸತ್ಯಧ್ಯಾನತೀರ್ಥರು ಅಂದಿನ ಕಾಲದಲ್ಲಿಯೇ ಇದಕ್ಕಾಗಿ ಒಂದು ಪುಸ್ತಕವನ್ನೇ ರಚನೆ ಮಾಡಿಸಿ ನಿರ್ಣಯ ನೀಡಿದ್ದಾರೆ.

**23. ಬದರಿಯಲ್ಲಿ ಬ್ರಹ್ಮಕಪಾಲದಲ್ಲಿ ಶ್ರಾದ್ಧ ಮಾಡಿದವರು ಮತ್ತೆ ಪ್ರತಿವರ್ಷ ಶ್ರಾದ್ಧವನ್ನು ಮಾಡಲೇಬೇಕು ಎಂದರೆ ಪಿಂಡಪ್ರದಾನಶ್ರಾದ್ಧವನ್ನೇ ಮಾಡಬೇಕೋ ? ಅಥವಾ ಸಂಕಲ್ಪಶ್ರಾದ್ಧವನ್ನು ಮಾಡಿದರೆ ಸಾಕೋ ?**

ಪಿಂಡಪ್ರದಾನಶ್ರಾದ್ಧವನ್ನೇ ಮಾಡಬೇಕು. ಹೊರತು ಕೇವಲ ಸಂಕಲ್ಪಶ್ರಾದ್ಧವಲ್ಲ ಎನ್ನುವುದು ನಮ್ಮ ಅಭಿಪ್ರಾಯ. ಈ ಹಿಂದೆ ಹೇಳಿದಂತೆ 'ಬದರಿಯಲ್ಲಿ ಶ್ರಾದ್ಧಮಾಡಿದರೆ ಮತ್ತೆ ಶ್ರಾದ್ಧ ಮಾಡುವ ಆವಶ್ಯಕತೆ ಇಲ್ಲ' ಎನ್ನುವುದು ಕೇವಲ ಅರ್ಥವಾದ. ಬದರಿಯಲ್ಲಿ ಶ್ರಾದ್ಧ ಮಾಡುವುದು ಅತ್ಯಂತಶ್ರೇಷ್ಠ ಎನ್ನುವುದರಲ್ಲಿ ಅದಕ್ಕೆ ತಾತ್ಪರ್ಯ. ಹೊರತು ಅನಂತರ ಶ್ರಾದ್ಧವನ್ನೇ ಮಾಡಬಾರದು ಎಂದಲ್ಲ. ಅದೂ ಅನಂತರ ಪ್ರತಿವರ್ಷ ಪಿಂಡಪ್ರದಾನ- ಶ್ರಾದ್ಧವನ್ನೇ ಮಾಡಬೇಕು. ಶಿಷ್ಟರ ಸಂಪ್ರದಾಯವೂ ಹಾಗೆಯೇ ಬಂದಿದೆ. ಹಾಗೆಂದೇ ಪ್ರಮಾಣಗಳೂ ಇವೆ. ಆದ್ದರಿಂದ ಬದರಿಯಲ್ಲಿ ಶ್ರಾದ್ಧಮಾಡಿ ಬಂದವರು ಪಿಂಡಪ್ರದಾನ ಶ್ರಾದ್ಧವನ್ನೇ ಮಾಡಬೇಕು.

**24. ಭೋಜನವನ್ನು ಪ್ರೀತಿಪೂರ್ವಕವಾಗಿ ಮಾಡಿಸಬೇಕು ಎಂದು ಶಾಸ್ತ್ರದಲ್ಲಿ ಹೇಳುತ್ತಾರೆ. ಆದರೆ ಪತಿಯು ಹಬ್ಬ-ಹರಿದಿನ ಯಾವುದನ್ನೂ ನೋಡದೇ ಅದಕ್ಕೆ ವಿರುದ್ಧವಾಗಿ ಶಾಸ್ತ್ರನಿಷಿದ್ಧವಾದ ಪದಾರ್ಥಗಳನ್ನೇ ಇಚ್ಛಿಸಿದರೆ ಏನು ಮಾಡಬೇಕು ?**

ಶಾಸ್ತ್ರವಿಹಿತವಾದ ಭಕ್ಷ್ಯಗಳಲ್ಲಿ ಪತಿಯು ಯಾವ ದಿನ ಯಾವುದನ್ನು ಅಪೇಕ್ಷಿಸುತ್ತಾನೆ ಅಂದು ಅದನ್ನು ಮಾಡಿ ಬಡಿಸಬೇಕು ಎನ್ನುವುದು ಶಾಸ್ತ್ರದ ತಾತ್ಪರ್ಯ. ಹೊರತು ಪತಿಯು ಕೇಳಿದ ಮಾತ್ರಕ್ಕೆ ನಿಷಿದ್ಧವಸ್ತುಗಳನ್ನೇ ಮಾಡಿ ಬಡಿಸಬೇಕು ಎಂದಲ್ಲ. ಹಾಗೆ ನಿಷಿದ್ಧವಸ್ತುಗಳನ್ನು ಕೇಳಿದರೆ 'ಅದನ್ನು ತಿನ್ನಬಾರದು' ಎಂದೇ ಪ್ರೀತಿ-ವಿಶ್ವಾಸಪೂರ್ವಕವಾಗಿ ತಿಳಿ ಹೇಳಿ ಪತಿಯನ್ನು ಸನ್ಮಾರ್ಗದಲ್ಲಿ ತರಬೇಕು.

ಏಕಾದಶೀ ದಿನದಲ್ಲಿ ಏನನ್ನೇ ತಿನ್ನಲು ಕೇಳಿದರೂ, ಅಥವಾ ಯಾವುದೇ ದಿನಗಳಲ್ಲಿ ನಿಷಿದ್ಧವಾದದ್ದನ್ನು ತಿನ್ನಬೇಕೆಂದು ಕೇಳಿದರೂ ತಿನ್ನಬಾರದು ಎಂದೇ ಹೇಳಬೇಕು. ಅದು ಅಧರ್ಮವಾಗುವುದಿಲ್ಲ. ಹೊರತು ತಿನ್ನುವುದಕ್ಕೆ ಸಹಕಾರ ನೀಡಬಾರದು. ಹಾಗೆ ಸಹಕಾರ ನೀಡಿದರೆ ಅದು ಅಧರ್ಮವಾಗುತ್ತದೆ. ಉಪಾಯವಾಗಿ ಪ್ರೀತಿಯಿಂದ ಹೇಳಿ ಸನ್ಮಾರ್ಗಕ್ಕೆ ತರುವುದು ಮುಖ್ಯ ಉದ್ದೇಶವಾಗಿರಬೇಕು. ಹೊರತು ಅದನ್ನೇ ದೊಡ್ಡ ಜಗಳಕ್ಕೆ ಕಾರಣ ಮಾಡಿಕೊಳ್ಳಬಾರದು.

**25. ವರದಕ್ಷಿಣೆ ತೆಗೆದುಕೊಳ್ಳುವವರಿಗೆ ಶಾಸ್ತ್ರ (ಮಹಾಭಾರತ)ದಲ್ಲಿ ಯಾವ ಪಾಪ (ಶಿಕ್ಷೆ) ಹೇಳಿದ್ದಾರೆ ?**

ವರದಕ್ಷಿಣೆಯನ್ನು ತೆಗೆದುಕೊಳ್ಳುವುದೇ ಶಾಸ್ತ್ರನಿಷಿದ್ಧ ಎಂದಲ್ಲ. ಕಿಂತು ಯಾವುದೇ ಕಾರಣಕ್ಕೂ ಇನ್ನೊಬ್ಬರನ್ನು ಪೀಡಿಸುವುದು ಶಾಸ್ತ್ರನಿಷಿದ್ಧ. ಆ ಕಾರಣದಿಂದ ವರದಕ್ಷಿಣೆಗಾಗಿ ಹೆಣ್ಣನ್ನಾಗಲಿ, ಹೆಣ್ಣು ಹೆತ್ತವರನ್ನಾಗಲೀ ಪೀಡಿಸುವುದು ಶಾಸ್ತ್ರನಿಷಿದ್ಧ. ಹಾಗೆ ಪೀಡಿಸಿದರೆ ಅದು ಮಹಾಪಾಪವಾಗುತ್ತದೆ.

ಹೊರತು ವರದಕ್ಷಿಣೆ ತೆಗೆದುಕೊಳ್ಳುವುದೇ ಮಹಾಪಾಪವಲ್ಲ. ಆದ್ದರಿಂದ ಅದಕ್ಕಾಗಿ ಪ್ರತ್ಯೇಕವಾದ ಶಿಕ್ಷೆ ಮಹಾಭಾರತದಲ್ಲಿ ಹೇಳಿಲ್ಲ.

**'ಸದಕ್ಷಿಣಾಕಂ ಸತಾಂಬೂಲಂ'**

ಎಂದು ಹೇಳಿದಂತೆ ಯಾವುದೇ ದಾನ ಮಾಡಬೇಕಾದರೂ ದಕ್ಷಿಣೆಸಹಿತ-ವಾಗಿಯೇ ದಾನ ಮಾಡಬೇಕು ಎಂದು ಶಾಸ್ತ್ರ ಹೇಳುತ್ತದೆ. ಅಂದಮೇಲೆ ಕನ್ಯಾದಾನ ಮಾಡುವಾಗಲೂ ದಕ್ಷಿಣೆ ಕೊಡಬೇಕು ಎನ್ನುವುದು ಶಾಸ್ತ್ರವಿಹಿತ. ಈ ಹಿನ್ನಲೆಯಲ್ಲಿ ಹೆಣ್ಣುಹೆತ್ತವರು ಕನ್ಯಾದಾನ ಮಾಡುವಾಗ ಸಂತೋಷದಿಂದ (ಮನಃಪೂರ್ವಕವಾಗಿ) ಏನು ಕೊಡುತ್ತಾರೆ, ಅದನ್ನು ಸ್ವೀಕರಿಸಬೇಕು.

ಹೊರತು ವರದಕ್ಷಿಣೆಗಾಗಿ ಹೆಣ್ಣನ್ನು ಹೊಡೆದು, ವಿರಸ ಮಾಡಿಕೊಂಡು ಹೆಣ್ಣನ್ನಾಗಲೀ ಹೆಣ್ಣುಹೆತ್ತವರನ್ನಾಗಲೀ ಪೀಡಿಸುವುದು ಮಾತ್ರ ಶಾಸ್ತ್ರನಿಷಿದ್ಧ. ಆದ್ದರಿಂದ ಆ ರೀತಿ ಪೀಡೆ ಕೊಡಬಾರದು. ಇನ್ನೊಬ್ಬರಿಗೆ ಹಿಂಸೆ-ಕಿರುಕೊಳ ಕೊಟ್ಟರೆ ಮಹಾಭಾರತದಲ್ಲಿ ಯಾವ ಶಿಕ್ಷೆಯನ್ನು ಹೇಳಿದ್ದಾರೆ ಅದೇ (ಪಾಪವೇ) ಶಿಕ್ಷೆಯೇ ವರದಕ್ಷಿಣೆಗಾಗಿ ಪೀಡಿಸುವವರಿಗೂ ಆಗುವುದು ನಿಶ್ಚಿತ.

**26. ಅಪಘಾತಕ್ಕೊಳಗಾದ ವ್ಯಕ್ತಿ ಕುಳಿತುಕೊಳ್ಳಲು ಸಾಧ್ಯವಿಲ್ಲದಿದ್ದಾಗ ನಿಂತುಕೊಂಡೇ ಸಂಧ್ಯಾವಂದನೆಯನ್ನು ಗಾಯತ್ರೀಜಪವನ್ನು ಮಾಡಬಹುದೇ ?**

ಗಾಯತ್ರೀಜಪವನ್ನು ನಿಂತು ಮಾಡುವುದರಲ್ಲಿ ತಪ್ಪಿಲ್ಲ. ಏಕೆಂದರೆ -

**'ಆಸೂರ್ಯದರ್ಶನಾತ್ ತಿಷ್ಠೇತ್'**

ಎಂದು ಹೇಳಿದಂತೆ ಸೂರ್ಯೋದಯಕ್ಕಿಂತಲೂ (ಪೂರ್ವದಲ್ಲಿ) ಮೊದಲು ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಗಾಯತ್ರೀಜಪವನ್ನು

ಪ್ರಾರಂಭಿಸಬೇಕು. ಸೂರ್ಯನ ದರ್ಶನವಾಗುವವರೆಗೆ ಎದ್ದುನಿಂತೇ ಜಪ ಮಾಡಬೇಕು. ಅರ್ಥಾತ್ ಸೂರ್ಯನಿಗೆ ಕುಳಿತು ಸ್ವಾಗತವಲ್ಲ. ನಿಂತೇ ಸ್ವಾಗತ ಮಾಡಬೇಕು. ಆ ರೀತಿ ನಿಂತುಕೊಂಡು ಜಪವನ್ನು ಆರಂಭಿಸಿ ಸೂರ್ಯದರ್ಶನವಾಗುವ ತನಕ ನಿಂತೇ ಜಪ ಮಾಡುತ್ತಿರಬೇಕು. ಸೂರ್ಯದರ್ಶನವಾದ ನಂತರವೂ ಜಪವನ್ನು ಮುಂದುವರಿಸ ಬೇಕಾಗಿದ್ದರೆ-

**'ತತಸ್ತು ಉಪವಿಶೇತ ವಾ'**

ಎಂದು ಹೇಳಿದಂತೆ ನಿಂತುಕೊಂಡಾದರೂ ಜಪ ಮಾಡಬಹುದು. ಅಥವಾ ಕುಳಿತಾದರೂ ಜಪ ಮಾಡಬಹುದು ಎಂಬುದಾಗಿ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

ಅಂದಮೇಲೆ ಅಂಗಾಂಗಗಳು ಘಟ್ಟಿಯಾಗಿದ್ದವರೂ ಸಹ ಸೂರ್ಯನ ದರ್ಶನವಾಗುವವರೆಗೆ ಗಾಯತ್ರೀಜಪವನ್ನು ನಿಂತು ಮಾಡಬೇಕು ಎಂದು ಹೇಳಿದ ಮೇಲೆ, ಅಪಘಾತಕ್ಕೊಳಗಾದ ವ್ಯಕ್ತಿ ಗಾಯತ್ರೀಜಪವನ್ನು ನಿಂತು ಮಾಡಬಹುದು ಎಂದು ಅವಶ್ಯವಾಗಿ ಹೇಳಬಹುದು. ಆದ್ದರಿಂದ ಜಪವನ್ನು ನಿಂತು ಮಾಡಿದರೆ ತಪ್ಪಿಲ್ಲ.

ಆಚಮನಾದಿಗಳನ್ನು ಕುಳಿತು ಮಾಡಬೇಕು ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಮತ್ತು -

**ಓಂ ಆಸೀನಸ್ಸಂಭವಾತ್ ಓಂ ॥ (ಬ್ರ.ಸೂ-4-1-7)**
**''ಸರ್ವದೋಪಾಸನಂ ಕುರ್ವನ್ನಪ್ಯಾಸೀನೋ ವಿಶೇಷತಃ ಕುರ್ಯಾತ್ ।''**
**(ಬ್ರ.ಸೂ. ಭಾಷ್ಯ)**

ಎಂಬುದಾಗಿ ಧ್ಯಾನವನ್ನು ಕುಳಿತು ಮಾಡಬೇಕು ಎಂದು ಹೇಳಿದ್ದಾರೆ.

ಆದರೆ, ಕಾರಣಾಂತರಗಳಿಂದ ಕುಳಿತು ಮಾಡಲಾಗದೇ ಪೂರ್ಣವಾಗಿ ಕರ್ಮ ಬಿಡುವ ಪರಿಸ್ಥಿತಿಯಿದ್ದಾಗ ಮಧ್ಯಮಕಲ್ಪದಿಂದ ನಿಂತು ಮಾಡಿ ಪರಮಾತ್ಮನ ವಿಶೇಷಸ್ಮರಣೆ ಮಾಡಬೇಕು.

**'ಸ್ಮರೇದ್ವಾ ವಿಷ್ಣುಮವ್ಯಯಮ್''**

ಎಂದು ಹೇಳಿದ್ದಾರೆ. ಅನೇಕ ಸ್ಮೃತಿಗಳಲ್ಲಿ ನಾನಾವಿಧಪಾಪಗಳಿಗೆ ಮತ್ತು ಲೋಪದೋಷಗಳಿಗೆ ಪ್ರಾಯಶ್ಚಿತ್ತರೂಪವಾಗಿ ವಿಷ್ಣುಸ್ಮರಣೆಯನ್ನು

ಹೇಳಿದ್ದಾರೆ. ಪರಮಾತ್ಮನನ್ನು ವಿಶೀಷವಾಗಿ ಸ್ಮರಿಸಿ ''ನಿಂತು ಮಾಡಿದ ಈ ಅಪರಾಧವನ್ನು ಕ್ಷಮಿಸು'' ಎಂಬುದಾಗಿ ಪ್ರಾರ್ಥಿಸಿದರೆ ಪರಮಾತ್ಮನು ಕ್ಷಮಿಸುತ್ತಾನೆ.

**27. ತ್ರಿವಿಕ್ರಮನ ಪಾದಸ್ಪರ್ಶದಿಂದ ಬ್ರಹ್ಮಾಂಡಕಟಾಹ ಒಡೆದು ಅಂದು ಹರಿದುಬಂದ ವಿಷ್ಣುಪದೀ ಈಗ ಎಲ್ಲಿದೆ ? ಅಂದಿನ ಆ ನೀರು ಎಂದೋ ಸಮುದ್ರ ಸೇರಿದೆ. ಇಂದು ಕಾಣುವುದು ಕೇವಲ ಮಳೆನೀರು. ಹಾಗಾದರೆ 'ವಿಷ್ಣುಪಾದೋದಕ' ಎಂಬ ಭಾವನೆಯಿಂದ ಮುಳುಗಿದರೆ ಏನು ಪ್ರಯೋಜನ ?**

ಇದು ಎಲ್ಲರಿಗೂ ಬರುವ ಸಹಜವಾದ ಪ್ರಶ್ನೆಯೇ. ಇದಕ್ಕೆ ಎರಡು ರೀತಿಯಿಂದ ಉತ್ತರವನ್ನು ತಿಳಿಯಬೇಕು.

1. ಮೊದಲನೆಯದಾಗಿ, ಕೆಲವು ಪ್ರದೇಶಗಳು, ಕೆಲವು ಕಾಲಗಳು, ಕೆಲವು ವಸ್ತುಗಳು ಕೆಲವೊಮ್ಮೆ ಪರಮಾತ್ಮನ ಸಂಕಲ್ಪದಿಂದ ಭಗವಂತನ ವಿಶೇಷ ಸನ್ನಿಧಾನವನ್ನು ಪಡೆಯುತ್ತವೆ. ಇವುಗಳಿಗೆ ಕೇವಲ ಯುಕ್ತಿಯಿಂದ ನಾವು ವಿಚಾರ ಮಾಡುವುದಲ್ಲ.

ಒಬ್ಬ ವ್ಯಕ್ತಿ ತನ್ನ ಮನೆಯಲ್ಲಿ ಅದರಲ್ಲೂ ಕೆಲವು ಸ್ಥಳಗಳಲ್ಲಿ ಬಹಳ (ವಿಶೀಷ) ವಾಸವಿರುತ್ತಾನೆ. ಕೆಲವೆಡೆ ಕಡಿಮೆ ವಾಸವಿರುತ್ತಾನೆ. ಅದು ಅವನ ಇಚ್ಛೆ. ಅವನ ಮನೆಯಲ್ಲಿ ಅಲ್ಲಿ ಮಾತ್ರ ಹೆಚ್ಚು ವಾಸ ಏಕೆ ? ಇಲ್ಲಿ ಕಡಿಮೆ ವಾಸ ಏಕೆ ? ಎಂದು ಅವನನ್ನು ಕೇಳುವುದಕ್ಕೆ ಬೇರೆಯವರಿಗೆ ಅಧಿಕಾರವಿಲ್ಲ. ಅದರಂತೆ ಭಗವಂತನು ಒಂದು ರೂಪದಿಂದ ಸರ್ವತ್ರ ವ್ಯಾಪ್ತನಾದರೂ ಸಹ ತನ್ನ ವಿಶೇಷಸಾಮರ್ಥ್ಯದ ಅಭಿವ್ಯಕ್ತಿಯನ್ನು ಮಾಡುತ್ತಾನೆ.

(ತನ್ನ ಇಚ್ಛೆಗೆ ತಕ್ಕಂತೆ ಕೆಲವು ಸ್ಥಳಗಳಲ್ಲಿ)

ಅದು ದೇಶವಿರಬಹುದು, ಕಾಲವಿರಬಹುದು, ವಸ್ತುವಿರಬಹುದು. ಉದಾಹರಣೆಗೆ - ಎಲ್ಲ ಕಲ್ಲುಗಳಲ್ಲಿಯೂ ಸನ್ನಿಧಾನ ಇಟ್ಟಿರುವ ಭಗವಂತ ಸಾಲಿಗ್ರಾಮದಲ್ಲಿ ತನ್ನ ವಿಶೇಷಸನ್ನಿಧಾನ ಇಟ್ಟಿದ್ದಾನೆ. ಸಾಲಿಗ್ರಾಮದಲ್ಲಿಯೇ ಏಕೆ ಹೆಚ್ಚು ಸನ್ನಿಧಾನ ? ಉಳಿದ ಕಲ್ಲುಗಳಲ್ಲಿ ಏಕೆ ಇಟ್ಟಿಲ್ಲ ? ಎಂದು ಕೇಳಲಾಗುತ್ತದೆಯೇ ? ತನ್ನ ಸನ್ನಿಧಾನ ಎಲ್ಲಿ ಹೆಚ್ಚಿದೆ, ಎಲ್ಲಿ ಇಲ್ಲ ಎಂದು ಭಗವಂತನೇ ತನ್ನ ಸಂಕಲ್ಪಕ್ಕೆ ತಕ್ಕಂತೆ ಹೇಳಿದ್ದನ್ನು ಕೇಳುವುದಷ್ಟೇ. ಸಾಲಿಗ್ರಾಮಗಳಲ್ಲಿ ಬ್ರಹ್ಮದೇವರೇ ಕೀಟರೂಪದಿಂದ ಚಕ್ರಗಳನ್ನು

ನಿರ್ಮಿಸಿದ್ದರಿಂದ ಅಲ್ಲಿ ಭಗವಂತನ ವಿಶೇಷ ಸನ್ನಿಧಾನ. ಇನ್ನಿತರ ವಸ್ತುಗಳಲ್ಲಿ ಭಗವಂತನ ಆವಾಹನೆ ಮಾಡುವುದುಂಟು. ಆದರೆ ಸಾಲಿಗ್ರಾಮದಲ್ಲಿ ಆವಾಹಾನೆಯಿಲ್ಲ. ಸ್ವಯಂ ಸನ್ನಿಹಿತನಾಗಿದ್ದಾನೆ ಪರಮಾತ್ಮ.

ಸಾಮಾನ್ಯವಾಗಿ ಉಳಿದವರ ಮನೆಗಳ ಗೃಹಪ್ರವೇಶಗಳಿಗೆ ಹೋದರೆ ಹೋಗುತ್ತಾರೆ, ಇಲ್ಲವಾದರೆ ಹೋಗುವುದಿಲ್ಲ. ಆದರೆ ತನ್ನ ಮಗನ ಮನೆಯ ಗೃಹಪ್ರವೇಶವಾಗಿದ್ದರೆ ನಾಲ್ಕು ದಿನ ಮೊದಲೇ ಹೋಗಿರುತ್ತಾರೆ. ಹಾಗೆ ಸಾಲಿಗ್ರಾಮವು ಪರಮಾತ್ಮನ ಮನೆ. ಯಾವ ಮನೆ ? ಮಗನಾದ ಬ್ರಹ್ಮನು ಕಟ್ಟಿದ ಮನೆ. ಅದಕ್ಕೆ (ಆವಾಹನೆ) ಬೇರೆಯವರು ಕರೆಯಬೇಕಿಲ್ಲ. ಆದ್ದರಿಂದ

**'ಸಾಲಿಗ್ರಾಮಶಿಲಾಯಾಂ ತು ನಿತ್ಯಂ ಸನ್ನಿಹಿತೋ ಹರಿಃ ।'**

ಎಂದು ಹೇಳಿದಂತೆ ಸಾಲಿಗ್ರಾಮದಲ್ಲಿ (ಮಗನ ಮನೆಯಲ್ಲಿ) ಪರಮಾತ್ಮನ ಸ್ವಯಂವ್ಯಕ್ತ ಸನ್ನಿಧಾನ. ಚಕ್ರಾಂಕಿತದಲ್ಲಿಯೂ ಭಗವಂತನ ನಿತ್ಯಸನ್ನಿಧಾನ. ಸಾಲಿಗ್ರಾಮಾದಿಗಳುಳ್ಳ ಸುತ್ತಮುತ್ತಲಿನ ಸ್ಥಳದಲ್ಲಿ ಪಾವಿತ್ರ್ಯ ಇರುತ್ತದೆ.

ಇದರಂತೆ ತುಳಸೀ, ಅಶ್ವತ್ಥವೃಕ್ಷ, ಗೋ ಮೊದಲಾದ ವಸ್ತುಗಳಲ್ಲಿ ಹೇಗೆ ಭಗವಂತನ ಸನ್ನಿಧಾನವಿದೆ ಅದರಂತೆ ಹಿಮಾಚಲದಿಂದ ಸಾಗರದವರೆಗೆ ಹರಿಯುವ ಗಂಗೆಯ ಮಾರ್ಗದಲ್ಲಿ ಖಾತದಲ್ಲಿ (ತಗ್ಗಿನಲ್ಲಿ) ಏನು ನೀರಿದೆ ಆ ನೀರಿನಲ್ಲೂ ಭಗವಂತನ ವಿಶೇಷಸನ್ನಿಧಾನ ಇದೆ ಎಂಬುದಾಗಿ ಶಾಸ್ತ್ರ ತಿಳಿಸುತ್ತದೆ.

ಬ್ರಾಹ್ಮಪುರಾಣದಲ್ಲಿ ಒಂದು ಮಾತು ಬರುತ್ತದೆ -

**ಯೋऽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೀ ನಿರಂಜನಃ ।**
**ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥**

ಗಂಗೆಯೆಂದರೆ ಬೇರೆ ಅಲ್ಲ. ಸರ್ವತ್ರ ವ್ಯಾಪ್ತನಾದ, ಜ್ಞಾನಸ್ವರೂಪನಾದ ಪರಮಾತ್ಮನೇ ಈ ಗಂಗಾಜಲದಲ್ಲಿ ವಿಶೇಷ ಸನ್ನಿಹಿತನಾಗಿದ್ದಾನೆ. ಅಂದಮೇಲೆ 'ನಾವು ನೀರಿನಲ್ಲಿ ಮಾತ್ರ ಮುಳುಗುತ್ತಿದ್ದೇವೆ' ಎಂದು ತಿಳಿದು ಮುಳುಗಿದರೆ ಕೇವಲ ಮೈಮೇಲೆ ನೀರಿರುತ್ತದೆ. ಅದರಿಂದಲೂ ಸ್ವಲ್ಪ ಪಾಪ ಹೋಗುತ್ತದೆ. ಆದರೆ ''ಭಗವದ್ಭಕ್ತಳಾದ ಗಂಗಾದೇವಿಯಲ್ಲಿ ವರುಣನ ಸನ್ನಿಧಾನ, ವಾಯುದೇವರ ಸನ್ನಿಧಾನವಿದೆ ಮತ್ತು ಜ್ಞಾನರೂಪಿಯಾದ,

ಸರ್ವನಿಯಾಮಕನಾದ ಪರಮಾತ್ಮನೇ (ಒಂದು ರೂಪದಿಂದ) ದ್ರವರೂಪದಿಂದ ಹರಿಯುತ್ತಿದ್ದಾನೆ. ಅವನಲ್ಲಿ ಮುಳುಗುತ್ತಿದ್ದೇನೆ'' ಎಂದು ತಿಳಿದು ಮುಳುಗಿದರೆ ನಿಶ್ಚಿತವಾಗಿಯೂ ಎಲ್ಲ ಪಾಪಗಳು ಪರಿಹಾರ-ವಾಗುತ್ತದೆ. ಪುಣ್ಯಪ್ರಾಪ್ತಿಯಾಗುತ್ತದೆ.

ಅಂದು ಬ್ರಹ್ಮದೇವರು ಪಾದವನ್ನು ತೊಳೆದ ವಿಷ್ಣುಪಾದೋದಕ ಇಂದು ಇಲ್ಲ ಎಂದು ತಿಳಿಯಬಾರದು. ಯಾವ ರೀತಿಯಾಗಿ ಸಾಲಿಗ್ರಾಮಾದಿಗಳಲ್ಲಿ ಭಗವಂತನ ನಿತ್ಯ ಸನ್ನಿಧಾನವಿದೆ ಅದೇ ರೀತಿಯಾಗಿ ಆ ಗಂಗೆಯ ಖಾತದಲ್ಲಿ (ಮಾರ್ಗದಲ್ಲಿ) ಹರಿಯುತ್ತಿರುವ ನೀರಿನಲ್ಲಿಯೂ ಭಗವಂತನ ನಿತ್ಯ ಸನ್ನಿಧಾನವಿದೆ. ಅದು ವಿಷ್ಣುಪಾದೋದಕವೇ. ಅಲ್ಲಿ ಸ್ನಾನ ಮಾಡಿದರೆ ಸರ್ವಪಾಪಹಾನಿ ನಿಶ್ಚಿತ. ಆ ವಿಧವಾದ ಅನುಸಂಧಾನ/ಭಕ್ತಿ ಮನಸ್ಸಿನಲ್ಲಿ ದೃಢವಾಗಿರಬೇಕು.

2. ಎರಡನೆಯದಾಗಿ, ನಾವು ನೀವು ತಿಳಿಯಲು (ಊಹಿಸಲು) ಆಗದ, ಕೇವಲ ಶಾಸ್ತ್ರದಿಂದಲೇ ತಿಳಿಯಬೇಕಾದ ಒಂದು ಮಾತಿದೆ.

ಅದು ಏನೆಂದರೆ - ಎಲ್ಲ ನದಿಗಳ ನೀರು ಸಮುದ್ರಕ್ಕೆ ಸೇರುತ್ತದೆ. ಅದು ಆವಿಯಾಗಿ ಮೋಡಗಳಲ್ಲಿ ಸೇರುತ್ತದೆ. ಮಳೆಯಾದಾಗ ಪುನಃ ನದಿಯಲ್ಲಿ ಬಂದು ಮತ್ತೆ ಸಮುದ್ರ ಸೇರುತ್ತದೆ. ಇದೊಂದು ಜಲಚಕ್ರ. ಆದರೆ ಈ ಜಲಚಕ್ರ ಅಸ್ತವ್ಯಸ್ತವಾಗಿ ನಡೆಯುತ್ತದೆ (ಯಾವುದೋ ನದಿಯ ನೀರು ಸಮುದ್ರಕ್ಕೆ ಸೇರಿ ಪುನಃ ಯಾವುದೋ ನದಿಯಲ್ಲಿ ಬೀಳುತ್ತದೆ) ಎಂಬುದಾಗಿ ನಾವು ತಿಳಿಸಿದ್ದೇವೆ. ಆದರೆ ಶಾಸ್ತ್ರ ಹೇಳುವ ತತ್ವವೇ (ಮಾತೇ) ಬೇರೆ.

ಅದು - ಎಲ್ಲ ನದಿಗಳ ನೀರು ಸಮುದ್ರಸೇರಿ ಮೋಡದಿಂದ ಬರುವಾಗ '' ಯಾವ ನದಿಯ ನೀರು ಸಮುದ್ರಸೇರಿ ಆವಿಯಾಗಿ ಮೋಡವನ್ನು ಸೇರಿಕೊಂಡು ಅಲ್ಲಿಂದ ಬೀಳುವಾಗ ಅದೇ ನದಿಯಲ್ಲೇ ಬೀಳುತ್ತದೆ'' ಎಂದು.

ಇದು ಬಹಳ ಕಷ್ಟದ ಕೆಲಸ ಎಂದು ಅನಿಸಬಹುದು. ಅದು ನಮ್ಮ ಕೆಲಸವಲ್ಲ. ಮೋಡಗಳಲ್ಲಿ ಸನ್ನಿಹಿತರಾದ ಪರ್ಜನ್ಯ (ಸೂರ್ಯ) ಹಾಗೂ ವಾಯುದೇವರ ಕೆಲಸ ಅದು. ಅವರು ಮಹಾಮೇಧಾವಿಗಳು, ಜಗನ್ನಿಯಾಮಕರು. ಸಮರ್ಥರಾದ ಇವರು ಆ ಆ ನದಿಗಳ ನೀರನ್ನು ಮೋಡದಿಂದ ಬೀಳಿಸುವಾಗ ಆ ಆ ನದಿಗಳಲ್ಲೇ ಬೀಳುವಂತೆ ಕಾರ್ಯವನ್ನು ಸಮರ್ಥವಾಗಿ

ಮಾಡುತ್ತಾರೆ.[1] ಅಂದಮೇಲೆ ಅಂದು ಬ್ರಹ್ಮದೇವರು ಪಾದಪೂಜೆ ಮಾಡಿದ ವಿಷ್ಣುಪಾದೋದಕ (ಗಂಗಾ ನೀರು) ಅದೇ ಆವಿಯಾಗಿ ಮೋಡ ಸೇರಿ ಮಳೆರೂಪದಿಂದ ಪುನಃ ಅದೇ ಗಂಗಾನದಿಯಲ್ಲಿಯೇ ಬೀಳುತ್ತಿರುವುದ-ರಿಂದ ಇಂದು ನಾವು ಸ್ನಾನ ಮಾಡುವ ಗಂಗಾನೀರು ವಿಷ್ಣುಪಾದೋದಕವೇ.

3. ಮತ್ತು ಇವೆಲ್ಲದರ ಮೇಲೆ

''ಅಕ್ಷಯ್ಯಮಭವತ್ತೋಯಂ ತಸ್ಯ ವಿಷ್ಣೋಃ ಪ್ರಭಾವತಃ''[2]

ಎಂಬುದಾಗಿ ಪದ್ಮಪುರಾಣದ ಉತ್ತರಖಂಡದಲ್ಲಿ ರುದ್ರದೇವರು ವರ್ಣಿಸಿದಂತೆ ಭಗವಂತನೇ ತನ್ನ ಸಾಮರ್ಥ್ಯದಿಂದ ತನ್ನ ಆ ಪಾದೋದಕ-ವನ್ನು 'ಅಕ್ಷಯ'ವನ್ನಾಗಿ ಮಾಡಿದ್ದಾನೆ.

---

27.1 ''ಇಮಾಃ ಸೌಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ ಪ್ರತೀಚ್ಯಸ್ತಾಃ ಸಮುದ್ರಾತ್ ಸಮುದ್ರಮೇವಾಪಿಯಂತಿ । ಸ ಸಮುದ್ರ ಏವ ಭವತಿ । ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ ।'' (ವಿಷ್ಣುತತ್ವನಿರ್ಣಯ)

''ಏವಮತ್ಯಂತವಿಲಕ್ಷಣಾಸ್ತಾ ಮೇಘಾದಿದ್ವಾರೇಣ ಸಮುದ್ರಾದುತ್ಪನ್ನಾ ಉತ್ಪನ್ನಜಲ-ತ್ವಾತ್ ಸಮುದ್ರಮೇವ ಅಪಿಯಂತಿ ಪ್ರವಿಶಂತಿ । ತಥಾಽಪಿ ಸ ಸಮುದ್ರ ಏವ ಭವತಿ । ತಾ ನದೀದೇವತಾ ಯಥಾ ತತ್ರ ಸಮುದ್ರೇ ಇಯಂ ಗಂಗಾಽಹಮಸ್ಮಿ, ಇಯಂ ತು ಯಮುನಾ, ಅಯಂ ಚ ಸಮುದ್ರ ಇತ್ಯೇವಮನ್ಯಾ ಅಪಿ ನ ವಿದುಃ ।'' (ವಿಷ್ಣುತತ್ವನಿರ್ಣಯ ಟೀಕಾ)

''ನನು ನದೀಜಲಸ್ಯಾಪಿ ಕಥಂ ಸಮುದ್ರಾದುತ್ಪತ್ತಿರಿತ್ಯತ ಉಕ್ತಮ್-ಮೇಘಾದಿದ್ವಾ-ರೇಣೇತಿ ॥ ನದೀನಾಂ ಸಮುದ್ರೇ ಪ್ರವೇಶೇನ ಪರಸ್ಪರಂ ಮಿಶ್ರೀಭಾವೇಽಪಿ ವಾಯುಸ್ತತ್ತನ್ನದ್ಯುದಕಂ ವಿವೇಕೇನ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ತೇನ ನದೀಷು ಜಲಪೂರ್ತಿರ್ಭವತೀತಿ ಹಿ ಪಾರಾಣಿಕೀ ಪ್ರಸಿದ್ಧಿಃ । ಯಥೋಕ್ತಂ -

ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।
ವಾಯುಸ್ತು ತತ್ ಪೃಥಗ್‌ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥ ಇತಿ ।''
(ವಿ.ತ. ನಿರ್ಣಯ ಟಿಪ್ಪಣೀ - ಶ್ರೀನಿವಾಸತೀರ್ಥೀಯಾ)

27.2 ''ಅಕ್ಷಯ್ಯಮಭವತ್ತೋಯಂ ತಸ್ಯ ವಿಷ್ಣೋಃ ಪ್ರಭಾವತಃ ।
ತತ್ತೀರ್ಥಂ ಮೇರುಶಿಖರೇ ಪಪಾತ ವಿಮಲಂ ಜಲಮ್ ॥''
(ಪದ್ಮಪುರಾಣ - ಉತ್ತರಖಂಡ - ಅ-240 ಶ್ಲೋ-43)

ಆದ್ದರಿಂದ ಸಾವಿರಾರು ರೂಗಳನ್ನು ವೆಚ್ಚ ಮಾಡಿ ಯಾತ್ರೆಗೆ ಹೋಗಿ 'ಇದು ಯಾವುದೋ ನೀರು' ಎಂದು ತಿಳಿದು ಗಂಗೆಯಲ್ಲಿ ಮುಳುಗಿದರೆ ಫಲವಿಲ್ಲ. ಶಾಸ್ತ್ರವು ತಿಳಿಸಿದ ಈ ವಿಧವಾದ ಅನುಸಂಧಾನದಿಂದ, ಭಕ್ತಿಯಿಂದ ಸ್ನಾನ ಮಾಡಿದರೆ (ಗಂಗೆಯಲ್ಲಿ ಮಿಂದರೆ) ಗಂಗಾಸ್ನಾನಫಲ ಸಿಗುವುದು ನಿಶ್ಚಿತ.

**28. ಕಲಿಯುಗದಲ್ಲಿ ಪರಮಾತ್ಮನ ನಾಮಸ್ಮರಣೆ ಮಾಡಿದರೆ ಸಾಕು. ಇನ್ನೇನೂ ಮಾಡಬೇಕಾದದ್ದಿಲ್ಲ. ಅದರಿಂದಲೇ ಎಲ್ಲ ಉದ್ಧಾರವಾಗುತ್ತದೆ. ಅಂದಮೇಲೆ ಕರ್ಮಗಳನ್ನು ಏಕೆ ಮಾಡಬೇಕು ?**

ಹಾಗೆ ಸರ್ವಥಾ ತಿಳಿಯಬಾರದು. ಗೀತೆಯಲ್ಲಿ, ಭಾಗವತದಲ್ಲಿ, ಮಹಾಭಾರತಾದಿಗಳಲ್ಲಿ ಹೇಳುವಂತೆ ನಾನಾವಿಧ ನರಕಗಳಿರಬಹುದು. ನಾನಾವಿಧ ಪಾಪಗಳಿರಬಹುದು. ಪರಮಾತ್ಮನ ನಾಮಸ್ಮರಣೆಯಿಂದ ಆ ನಾನಾವಿಧ ಪಾಪಗಳನ್ನು / ನರಕಗಳನ್ನು ಪರಿಹರಿಸಿಕೊಳ್ಳಬಹುದು. ಇದರಲ್ಲಿ ಕಿಂಚಿತ್ತೂ ಸಂಶಯವಿಲ್ಲ. ಆದರೆ ಶಾಸ್ತ್ರದಲ್ಲಿ ಇದರ ಬಗ್ಗೆ ಹೇಳಿದ ವಿಷಯಗಳನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕಾಗಿದೆ..

ಇಂದು ಎಲ್ಲ ವೈಷ್ಣವರಿಗೂ ಹೆಮ್ಮೆ ಎನಿಸುವ, ರೋಮಾಂಚನವಾಗುವ ಒಂದು ವಿಷಯ. ಅದು -

ಅನೇಕ ವೈಷ್ಣವರು ಈ ರೀತಿ ತಿಳಿದಿದ್ದಾರೆ. 'ಭಗವಂತನ ನಾಮ ಸ್ಮರಣೆಯಿಂದ ಪಾಪಪರಿಹಾರ' ಎನ್ನುವುದನ್ನು ನಾವು ಕೇವಲ ನಾಲ್ಕು ಗೋಡೆಗಳ ಮಧ್ಯದಲ್ಲಿ ಹೇಳುತ್ತೇವೆ ಎಂದು. ಆದರೆ ಅದು ತಪ್ಪು.

ಇಂದು ಪುಣ್ಯಾಪಾಪಗಳ ಬಗ್ಗೆ ತಿಳುವಳಿಕೆಯನ್ನು ನೀಡುವ ಅನೇಕ ಧರ್ಮಶಾಸ್ತ್ರಗ್ರಂಥಗಳಿವೆ. ಅರ್ವಾಚೀನವಾದ ನಿಬಂಧಗ್ರಂಥಗಳನ್ನು ಆರಂಭ ಮಾಡಿ ಪ್ರಾಚೀನರಾದ ಋಷಿ-ಮುನಿಗಳು ರಚಿಸಿರುವ ಸ್ಮೃತಿಗ್ರಂಥಗಳವರೆಗೆ ನೂರಾರು ಧರ್ಮಶಾಸ್ತ್ರಗ್ರಂಥಗಳನ್ನು ಕಾಣುತ್ತೇವೆ. ಅವುಗಳಲ್ಲಿ ಯಾವ ಯಾವ ಪಾಪಗಳಿಗೆ ಏನೇನು ಪ್ರಾಯಶ್ಚಿತ್ತ ಎಂದು ಬರೆಯುತ್ತಾ ದೊಡ್ಡ ಪ್ರಬಂಧವನ್ನೇ ಮಾಡುತ್ತಾರೆ. ಕೊನೆಯಲ್ಲಿ ನಿರ್ಣಯ ಮಾಡಿ ಹೇಳುತ್ತಾರೆ. ನೋಡಿದರೆ ಅವರು ಮಾಧ್ವರಲ್ಲ. ವೇದ-ಪುರಾಣ-ಗಳನ್ನು ನೋಡಿ ತಮಗೆ ತಿಳಿದದ್ದನ್ನು ಬರೆದಿದ್ದಾರೆ. ಅವರು ನಿರ್ಣಯ ಕೊಡುತ್ತಾರೆ ''ಇಷ್ಟೆಲ್ಲ ಪ್ರಾಯಶ್ಚಿತ್ತಗಳೂ ಒಂದು ಕಡೆ.

**'ಕೃಷ್ಣಾನುಸ್ಮರಣಂ ಪರಮ್' 'ಸ್ಮರೇದ್ವಾ ವಿಷ್ಣುಮವ್ಯಯಮ್'**

ಶ್ರೀಕೃಷ್ಣ ಪರಮಾತ್ಮನ ಭಕ್ತಿಪೂರ್ವಕವಾದ ನಾಮಸ್ಮರಣೆ ಇನ್ನೊಂದು ಕಡೆ'' ಎಂಬುದಾಗಿ ಭಗವಂತನ ನಾಮಸ್ಮರಣೆಯನ್ನು ದೊಡ್ಡ ಪ್ರಾಯಶ್ಚಿತ್ತವಾಗಿ ದೃಢವಾಗಿ ಹೇಳುತ್ತಾರೆ.

ಇನ್ನಾವ ದೇವತೆಗಳ ಸ್ಮರಣೆಯಿಂದಲೂ ಈ ರೀತಿಯ ಫಲವನ್ನು ಯಾವ ಸ್ಮೃತಿಕಾರರೂ ಹೇಳಲಿಲ್ಲ. ಅಂದಮಾತ್ರಕ್ಕೆ ಗುರುಸ್ಮರಣಾದಿಗಳಿಂದ ಪಾಪಪರಿಹಾರವಾಗುವುದಿಲ್ಲ ಎಂದಲ್ಲ. ತಾರತಮ್ಯ ಇದ್ದೇ ಇದೆ. ಗುರುಸ್ಮರಣ-ದೇವತಾಸ್ಮರಣ-ವಾಯುದೇವರ ಸ್ಮರಣ-ಭಗವಂತನ ಸ್ಮರಣಗಳಿಂದ ಉತ್ತರೋತ್ತರವಾಗಿ ಹೆಚ್ಚು ಪಾಪಪರಿಹಾರ. ಆದ್ದರಿಂದ 'ಪರಮಾತ್ಮನ ನಾಮಸ್ಮರಣದಿಂದ ಎಲ್ಲವಿಧ ಪಾಪಗಳಿಗೆ ಪ್ರಾಯಶ್ಚಿತ್ತ-ವಾಗುತ್ತದೆ' ಎನ್ನುವುದರಲ್ಲಿ ಸಂಶಯವಿಲ್ಲ.

ಆದರೆ, ಇದರಿಂದ ತಮಗೆ ವಿಹಿತವಾದ ಕರ್ಮಾನುಷ್ಠಾನ ಬಿಟ್ಟು ಕೇವಲ ನಾಮಸ್ಮರಣೆಯನ್ನು ಮಾಡುವುದು ಎಂದಲ್ಲ. ಕಾರಣ, ವಿಷ್ಣುಸ್ಮರಣೆ ಪ್ರಾಯಶ್ಚಿತ್ತ ಎಂದರೆ ಭಕ್ತಿಪೂರ್ವಕವಾದ ವಿಷ್ಣುಸ್ಮರಣೆಯೇ ಪ್ರಾಯಶ್ಚಿತ್ತ-ವಾಗುತ್ತದೆ ಎಂದರ್ಥ. ಶ್ರೀಮದಾಚಾರ್ಯರು ಭಕ್ತಿಪೂರ್ವಕಸ್ಮರಣೆಯೇ ಸಫಲ ಎಂಬುದನ್ನು ಭಾಗವತತಾತ್ಪರ್ಯದಲ್ಲಿ ಪ್ರತಿಪಾದಿಸಿದ್ದಾರೆ.

**'ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ'**

ಎಂದು. ಭಕ್ತಿಪೂರ್ವಕವಾಗಿ ಮಾಡಿದರೆ ಮಾತ್ರ ವಿಷ್ಣುಸ್ಮರಣೆ ಸಫಲ. ಇಲ್ಲವಾದರೆ ಇಲ್ಲ.

ನಮ್ಮ ವರ್ಣಾಶ್ರಮೋಚಿತವಾದ ಕರ್ಮಗಳನ್ನು ಬಿಟ್ಟು ಸ್ಮರಣೆ ಮಾಡಿದರೆ ಭಕ್ತಿಯೇ ಬರುವುದಿಲ್ಲ. ಯಾಕೆಂದರೆ - ವರ್ಣಾಶ್ರಮೋಚಿತ ಕರ್ಮಗಳನ್ನು ಮಾಡಬೇಕು ಎನ್ನುವುದು ಭಗವಂತನ ಆಜ್ಞೆ. ಆ ಆಜ್ಞೆಯನ್ನು ನಾವು ಉಲ್ಲಂಘಿಸಿದರೆ ದೇವರ ಮೇಲೆ ನಮಗೆ ಸ್ನೇಹ, ಆದರಬುದ್ಧಿ ಇಲ್ಲವೆಂದಾಗುತ್ತದೆ. ದೇವರ ಮೇಲೆ ನಮಗೆ ಸ್ನೇಹ/ಆದರಬುದ್ಧಿ ಇದ್ದಿದ್ದರೆ ದೇವರ ಆಜ್ಞೆಯನ್ನು ಪರಿಪಾಲಿಸಬೇಕಿತ್ತು. ಅಂದಮೇಲೆ ದೇವರ ಆಜ್ಞೆಯನ್ನು ಪರಿಪಾಲನೆ ಮಾಡಿದರೇನೇ ನಾವು ದೇವರಲ್ಲಿ ಭಕ್ತಿ ಮಾಡಿದಂತೆ. ಆ ವಿಧವಾದ ಭಕ್ತಿಯನ್ನು ಮಾಡಿ ದೇವರ ಸ್ಮರಣೆ ಮಾಡಿದರೆ

ಆದು ಫಲಕಾರಿಯಾಗುತ್ತದೆ. ಆದ್ದರಿಂದ ವರ್ಣಾಶ್ರಮೋಚಿತವಾದ ಕರ್ಮಾಚರಣೆಯನ್ನು ಮಾಡಿಯೇ ಭಕ್ತಿಯಿಂದ ಪರಮಾತ್ಮನ ನಾಮಸ್ಮರಣೆಯನ್ನು ಮಾಡಬೇಕು ಎನ್ನುವುದು ಶಾಸ್ತ್ರದ ಅಭಿಪ್ರಾಯ. ಹೊರತು ಕೇವಲ ನಾಮಸ್ಮರಣೆ ಮಾಡಿ ಉಳಿದ ಕರ್ಮಾಚರಣೆಯನ್ನು ಬಿಡಿ ಎಂದಲ್ಲ.

ಆದ್ದರಿಂದಲೇ 'ಪರಮಾತ್ಮನ ನಾಮಸ್ಮರಣೆಯಿಂದಲೇ ಕುಲಕೋಟಿ ಉದ್ಧಾರವಾಗುತ್ತದೆ' ಎಂಬುದಾಗಿ ಯಾವ ದಾಸರ ವಾಣಿಯಲ್ಲಿ ಕಾಣುತ್ತೇವೆ ಅಂತಹ ಪುರಂದರದಾಸರೇ ಮೊದಲಾದ ಮಹನೀಯರೂ ಸಹ ದಿನಚರಿ-ಯಲ್ಲಿ ತಮ್ಮ ಆಶ್ರಮೋಚಿತ ಕರ್ಮಗಳನ್ನು ತಪ್ಪದೇ ಆಚರಿಸುತ್ತಿದ್ದದ್ದನ್ನು ಅವರ ಕಥೆಗಳಲ್ಲಿ ಕಾಣುತ್ತೇವೆ. ಕೇವಲ ನಾಮಸ್ಮರಣೆಯಿಂದಲೇ ಉದ್ಧಾರವಾಗುವುದಾಗಿದ್ದರೆ (ಅದು ತಮ್ಮ ಅಭಿಪ್ರಾಯವಾಗಿದ್ದರೆ) ಅಂತಹ ದಾಸವರೇಣ್ಯರೂ ಕರ್ಮಗಳನ್ನು ಏಕೆ ಆಚರಿಸಬೇಕಿತ್ತು ?

ಯುದ್ಧದ ಸಂದರ್ಭದಲ್ಲಿಯೂ ಸಂಧ್ಯಾವಂದನೆ ಬಿಡುತ್ತಿರಲಿಲ್ಲ ಎಂಬುದಾಗಿ ಮಹಾಭಾರತದ ದೃಷ್ಟಾಂತವನ್ನು ಕಾಣುತ್ತೇವೆ. ರಾಮಾಯಣದಲ್ಲಿ ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ. ಯಾವ ಇತಿಹಾಸದಲ್ಲಿಯೂ ಬಹುಶಃ ಇಷ್ಟರಮಟ್ಟಿಗೆ ಹೇಳಿಲ್ಲ ಎನಿಸುತ್ತದೆ. ರಾಮದೇವರ ಕಥೆಯನ್ನು ಹೇಳುವಾಗ ಬೆಳಗಾಯಿತು ಎಂದರೆ ಸಂಧ್ಯಾವಂದನಾದಿಗಳನ್ನು ಮಾಡಿದರು ಎಂದು ಬರುತ್ತದೆ. ಸಂಜೆಯಾಯಿತೆಂದರೆ ಸಂಧ್ಯಾವಂದನೆ ಮಾಡಿದರು ಎನ್ನುತ್ತಾರೆ ವಾಲ್ಮೀಕಿಗಳು. ನಿತ್ಯದ ಕರ್ಮಗಳನ್ನು ಅವರವರು ಮಾಡುತ್ತಲೇ ಇರುತ್ತಾರೆ. ಅದನ್ನು ಗ್ರಂಥದಲ್ಲಿ ಮತ್ತೆ ಮತ್ತೆ ಹೇಳಬೇಕಾದದ್ದಿಲ್ಲ. ಅನೇಕ ಜ್ಞಾನಿಗಳ ಚರಿತ್ರೆಯನ್ನು ಹೇಳುವಾಗ ಕರ್ಮಗಳನ್ನು ಮಾಡಿದರು ಎಂದು ಪ್ರತ್ಯೇಕ ಹೇಳುವುದಿಲ್ಲ. ಅಥವಾ ಕರ್ಮಗಳನ್ನು ಮಾಡುತ್ತಿದ್ದರು ಎಂದು ಒಮ್ಮೆ ಹೇಳಬಹುದು. ಆದರೆ ರಾಮಾಯಣದಲ್ಲಿ ಎಷ್ಟು ಬಾರಿ ಹೇಳಿದ್ದಾ-ರೆಂದರೆ ಅದನ್ನು ಪಾರಾಯಣ ಮಾಡಿದರೆ ತಿಳಿಯುತ್ತದೆ. ಅಂದಮೇಲೆ ರಾಮದೇವರು ಕರ್ಮಗಳನ್ನು ಮಾಡಿ ತೋರಿಸಿದ್ದು, ವಾಲ್ಮೀಕಿಗಳು ಅದನ್ನು ಮತ್ತೆ ಮತ್ತೆ ಹೇಳಿದ್ದು ಲೋಕಶಿಕ್ಷಣಾರ್ಥಕ್ಕಾಗಿಯೇ.

ಅಂದಮೇಲೆ -

**ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।**
**ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥**

ಎಂದು ಹೇಳಿದಂತೆ ''ಮೂರುಕಾಲಗಳ ಜ್ಞಾನವಿರಬಹುದು, ಮೂರು ಲೋಕಗಳನ್ನು ಉದ್ಧರಿಸುವ ಸಾಮರ್ಥ್ಯವಿರಬಹುದು ಅಂತಹ ಅಪರೋಕ್ಷಜ್ಞಾನಿಯೂ ಸಹ ತನ್ನ ವರ್ಣಾಶ್ರಮೋಚಿತ ಕರ್ಮಗಳನ್ನು ಬಿಡಬಾರದು'' ಎಂದಿರುವಾಗ ಕೇವಲ 'ನಾರಾಯಣ' 'ಕೃಷ್ಣ' ಎಂದು ನಾಮಸ್ಮರಣೆ ಮಾಡಿ ಕರ್ಮಗಳನ್ನು ಬಿಟ್ಟು ಬಿಡುತ್ತೇನೆ ಎಂದು ತಿಳಿದರೆ ಅದು ಶುದ್ಧ ತಪ್ಪು. ಅದು ಶಾಸ್ತ್ರಸಮ್ಮತವಾದದ್ದಲ್ಲ.

### 29. ಗಾಯತ್ರೀಮಂತ್ರವನ್ನು ಏಕೆ ಮೆಲ್ಲಗೆ ಪಠಿಸಬೇಕು ?

ಇದರ ಬಗ್ಗೆ ಶಾಸ್ತ್ರದಲ್ಲಿ ಬಹಳವಾಗಿ ತಿಳಿಸಿದ್ದಾರೆ. ಗಟ್ಟಿಯಾಗಿ ಪಠಿಸಿದರೆ ಪುಣ್ಯಬರುವುದಿಲ್ಲ ಎಂದಲ್ಲ. ಕಿಂತು ಗಾಯತ್ರೀಮಂತ್ರದ ಪಠನದಲ್ಲಿ ಮೂರು ವಿಭಾಗ ಮಾಡುತ್ತಾರೆ.[1]

1) ಗಟ್ಟಿಯಾಗಿ ಪಠಿಸುವುದು (ಭಾಷಕ)

2) ಸ್ವಲ್ಪ ಮೆಲ್ಲಗೆ (ಕೇವಲ ತುಟಿಗಳನ್ನು ಬಡಿಯುತ್ತಾ) ಪಠಿಸುವುದು (ಉಪಾಂಶು).[2]

3) ಮನಸ್ಸಿನಲ್ಲಿಯೇ ಮೆಲ್ಲಗೆ ಪಠಿಸುವುದು (ಮಾನಸ).[3]

ಈ ಮೂರುವಿಧ ಪಠನೆಗಳಲ್ಲಿ ಎರಡು ವಿಧ ಪಠನೆಗಳಿಗೆ ಅಭಿಮಾನಿ-ದೇವತೆಗಳನ್ನು ಆಚಾರ್ಯರು ಐತರೇಯಭಾಷ್ಯದಲ್ಲಿ ತಿಳಿಸಿದ್ದಾರೆ.[4]

---

29.1 ''ತ್ರಿವಿಧೋ ಜಪಯಜ್ಞಃ ಸ್ಯಾನ್ಮಾನಸೋಪಾಂಶುಭಾಷಕಃ ।''
(ಸ್ಮೃತಿಮುಕ್ತಾವಲೀ - ಆಹ್ನಿಕಪ್ರಕರಣ)

29.2 ''ಉಪಾಂಶುರೋಷ್ಠಸಂಸ್ಪರ್ಶಮಾತ್ರಃ ಸ್ವಶ್ರುತಿಗೋಚರಃ ।'' (ಸ್ಮೃತಿ..)
''ಉಪಾಂಶುಸ್ತು ಚಲಜ್ಜಿಹ್ವಾದಶನಚ್ಛದ ಈರಿತಃ ।
ಅಧರೋಷ್ಠವಿಭಾಗೋ ವಾ ವಿಶ್ವಾಸೋಪಾಂಶುಲಕ್ಷಣಃ ॥''
(ಅತ್ರಿಸ್ಮೃತಿ ಅಧ್ಯಾಯ-2 ಶ್ಲೋ-11)

29.3 ''ಮಾನಸೋ ಮನಸಾ ಕಾರ್ಯೋ ಮಂತ್ರವಾಕ್ಯಾರ್ಥಚಿಂತಯಾ ।'' (ಸ್ಮೃತಿ...)
''ನಿರ್ವಿಕಾರೇಣ ವಕ್ತ್ರೇಣ ಮನಸಾ ಮಾನಸಃ ಸ್ಮೃತಃ ।'' (ಅತ್ರಿ...)

29.4 ''ಭಾರತ್ಯುಚ್ಚೋದಿತಸ್ಯಾಪಿ ಹ್ಯಕಾರಸ್ಯಾಭಿಮಾನಿನೀ ।
ತಸ್ಮಾದುಚ್ಚಾದುಪಾಂಶುರ್ಹಿ ಜಪಾದಿಷು ಫಲಾಧಿಕಃ ॥
ವಾಯುಃ ಪತಿರ್ಹಿ ಭಾರತ್ಯಾ ಉಪಾಂಶೋರ್ದೇವತಾ ಮತಃ ।''
(ಐತರೇಯಭಾಷ್ಯ ಪ್ರಪ-2 ಅಧ್ಯಾಯ-2 ಬ್ರಾಹ್ಮಣ-6)

1) ಗಟ್ಟಿಯಾಗಿ ಪಠನ ಮಾಡುವುದಕ್ಕೆ ಉಮಾದೇವಿ ಅಭಿಮಾನಿ ದೇವತೆ.

2) ಸ್ವಲ್ಪ ಮೆಲ್ಲಗೆ (ಕೇವಲ ತುಟಿಗಳನ್ನು ಬಡಿಯುತ್ತಾ) ಪಠಿಸುವುದಕ್ಕೆ ವಾಯುದೇವರು ಅಭಿಮಾನಿಗಳು.

ಹೀಗೆ ಪಠನೆಗೆ ಅನುಸಾರವಾಗಿ ಪುಣ್ಯದಲ್ಲೂ ತಾರತಮ್ಯವಿದೆ.[5] ಗಟ್ಟಿಯಾಗಿ ಪಠಿಸಿದರೆ ಪುಣ್ಯ ಬರುವುದಿಲ್ಲ ಎಂದಲ್ಲ. ಅದಕ್ಕೆ ಅಭಿಮಾನಿಯಾದ ಉಮಾ ದೇವಿಯು ಅದಕ್ಕೆ ಪುಣ್ಯವನ್ನು ಕೊಡುತ್ತಾಳೆ. ಗಟ್ಟಿಯಾಗಿ ಪಠಿಸುವುದಕ್ಕಿಂತ ಸ್ವಲ್ಪ ಮೆಲ್ಲಗೆ (ಕೇವಲ ತುಟಿಗಳನ್ನು ಬಡಿಯುತ್ತಾ) ಪಠಿಸುವುದು ಉತ್ತಮವಾದ್ದರಿಂದ ಅದಕ್ಕೆ ಅಭಿಮಾನಿಗಳಾದ ವಾಯುದೇವರು ಅದಕ್ಕಿಂತ ಹೆಚ್ಚು ಪುಣ್ಯವನ್ನು ಕೊಡುತ್ತಾರೆ. ಸ್ವಲ್ಪ ಮೆಲ್ಲಗೆ (ಕೇವಲ ತುಟಿಗಳನ್ನು ಬಡಿಯುತ್ತಾ) ಪಠಿಸುವುದಕ್ಕಿಂತಲೂ ಮನಸ್ಸಿನಲ್ಲಿ ಪಠಿಸುವುದು ಇನ್ನೂ ಉತ್ತಮವಾದ್ದರಿಂದ ಅದರಿಂದ ಇನ್ನೂ ಹೆಚ್ಚಿನ ಪುಣ್ಯವನ್ನು ಪಡೆಯುತ್ತಾರೆ.[6]

ಆದ್ದರಿಂದ ಹೆಚ್ಚಿನ ಪುಣ್ಯಕ್ಕಾಗಿ ಹಾಗೂ ಏಕಾಗ್ರತೆಗಾಗಿ ಮನಸ್ಸಿನಲ್ಲಿಯೇ ಜಪ (ಮಾಡುವುದು ಉತ್ತಮ) ಮಾಡಬೇಕು.

**30. ಗಾಯತ್ರೀಮಂತ್ರಕ್ಕೂ ಗಾಯತ್ರೀದೇವಿಗೂ ಸಂಬಂಧವಿದೆಯೇ ? ಗಾಯತ್ರೀಮಂತ್ರದಿಂದ ಪ್ರತಿಪಾದ್ಯರಾದವರು ಯಾರು ?**

ಗಾಯತ್ರೀದೇವಿ ಅರ್ಥಾತ್ ಬ್ರಹ್ಮದೇವರ ಮಡದಿ ಗಾಯತ್ರೀಮಂತ್ರಕ್ಕೆ ಕೇವಲ ನಿಯಾಮಕಳಷ್ಟೇ. ಆದರೆ ಗಾಯತ್ರೀಮಂತ್ರದಿಂದ ಪ್ರತಿಪಾದ್ಯ-ವಾದ ವಸ್ತು ಅಂದರೆ ಗಾಯತ್ರೀಮಂತ್ರವು ಹೇಳಿಕೊಡುವ ಗುಣಗಳಿಂದ

---

29.5 ''ಮುಕ್ತಿದೋ ಮಾನಸೋ ಜ್ಞೇಯೋ ಉಪಾಂಶುಃ ಸರ್ವಸಿದ್ಧಿದಃ ।
ಅಧಮೋ ಭಾಷಣೋ ಜ್ಞೇಯೋ ಮುನಿಭಿಃ ಸಂಪ್ರಕೀರ್ತಿತಃ ॥'' (ಸ್ಮೃತಿ..)

29.6 ''ಉಪಾಂಶುಃ ಸ್ಯಾಚ್ಛತಗುಣಃ ಸಹಸ್ರೋ ಮಾನಸಃ ಸ್ಮೃತಃ ॥''
(ಅತ್ರಿ - ಅ-2 ಶ್ಲೋ-10)

''ಉಪಾಂಶುಃ ಸ್ಯಾಚ್ಛತಗುಣಃ ಸಾಹಸ್ರೋ ಮಾನಸಃ ಸ್ಮೃತಃ ॥''
(ಮನುಸ್ಮೃತಿ ಅಧ್ಯಾಯ-2 ಶ್ಲೋ-85)

ಮಂಡಿತವಾದ ವಸ್ತು ಅದು ಪರಮಾತ್ಮನೇ. ಅರ್ಥಾತ್ ಸೂರ್ಯಾಂತರ್ಗತ-ನಾದ ಸವಿತೃನಾಮಕ ಪರಮಾತ್ಮನೇ. ಹೊರತು ಗಾಯತ್ರೀದೇವಿಯಲ್ಲ.

ಸೂರ್ಯನು ಪ್ರತಿಪಾದ್ಯ ಎಂದು ತಿಳಿಯುವುದೂ ಉಂಟು. ಅದೂ ತಪ್ಪು. ಗಾಯತ್ರೀಮಂತ್ರವು ತಿಳಿಸಿಕೊಡುವ ಗುಣಗಳು ಮುಖ್ಯವಾಗಿ ಸೂರ್ಯನಲ್ಲಿಯಾಗಲೀ ಗಾಯತ್ರೀದೇವಿಯಲ್ಲಾಗಲೀ ಕೂಡುವುದಿಲ್ಲ. ಆ ಗುಣಗಳು ನಾರಾಯಣನಲ್ಲಿಯೇ ಸಮನ್ವಯವಾಗುವುದರಿಂದ ಗಾಯತ್ರೀಮಂತ್ರದಿಂದ ಪ್ರತಿಪಾದ್ಯನಾದವನು ಸೂರ್ಯಾಂತರ್ಗತನಾದ ಲಕ್ಷ್ಮೀನಾರಾಯಣನೇ. ಆ ಲಕ್ಷ್ಮೀನಾರಾಯಣನಿಗೆ ಸೂರ್ಯ (ಮಂಡಲ) ಕೇವಲ ಅಧಿಷ್ಠಾನಮಾತ್ರ ಎಂಬುದಾಗಿ ಆಚಾರ್ಯರು ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಟೀಕಾಕೃತ್ಪಾದರು ಅದನ್ನು ನ್ಯಾಯಸುಧೆಯಲ್ಲಿ ಯುಕ್ತಿಗಳಿಂದ ಸಮರ್ಥಿಸಿದ್ದಾರೆ.[1]

ಆದ್ದರಿಂದ

**''ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ''**

---

30.1 ''ಸ ಏವ ಭರ್ಗಶಬ್ದಾರ್ಥಃ '' (ಅನುವ್ಯಾಖ್ಯಾನ)
''ವ್ಯಾಹೃತ್ಯರ್ಥತಯಾ ತಾವತ್ ಪರಮೇಶ್ವರಸ್ಯ ಗಾಯತ್ರೀಪ್ರತಿಪಾದ್ಯತಾऽವಗಮ್ಯತೇ ।''

''ನನು ಗಾಯತ್ರ್ಯಾಂ ಯೋ ಭರ್ಗೋ ನೋऽಸ್ಮಾಕಂ ಧಿಯಃ ಪ್ರಚೋದಯಾತ್ ಪ್ರೇರಯೇತ್ತಸ್ಯ ಸವಿತುರ್ದೇವಸ್ಯ ತದ್ವರೇಣ್ಯಂ ರೂಪಂ ಧೀಮಹಿ ಚಿಂತಯಾಮ ಇತಿ ಭರ್ಗನಾಮಕಃ ಸವಿತಾ ಪ್ರತಿಪಾದ್ಯೋ ದೃಶ್ಯತೇ । ತತ್ಕಥಂ ಭಗವತ್ಪರತ್ವಮಿತ್ಯತ ಆಹ ॥ ಸ ಏವ ಭರ್ಗಶಬ್ದಾರ್ಥ ಇತಿ ॥ ಭರಣಗಮನಯೋಗಾದಿತಿ ಶೇಷಃ । ಉಪಲಕ್ಷಣಂ ಚೈತತ್ । ಜಗತ್ಪ್ರಸವಹೇತುತ್ವಾತ್ ಸವಿತೇತ್ಯಪಿ ದ್ರಷ್ಟವ್ಯಮ್ । ನ ತು **ಸೂರ್ಯಃ** । ತಥಾತ್ವೇ ಗಾಯತ್ರ್ಯಾ ವ್ಯಾಹೃತ್ಯರ್ಥತ್ವಾನುಪಪತ್ತೇಃ ।
'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣ' ಇತ್ಯಾದ್ಯಾಗಮ-ವಿರೋಧಾಚ್ಚ ಇತಿ ಏವಾರ್ಥಃ ।''

(ನ್ಯಾಯಸುಧಾ - ಜಾಜ್ಞಾಸಾಧಿಕರಣ ಸರ್ವವೇದಾರ್ಥತ್ವಸಮರ್ಥನಮ್)

ಎಂಬುದಾಗಿ ನರಸಿಂಹಪುರಾಣದಲ್ಲಿ[2] ಗಾಯತ್ರೀಮಂತ್ರದ ಧ್ಯಾನಶ್ಲೋಕದಲ್ಲಿ ತಿಳಿಸಿದಂತೆ ಗಾಯತ್ರೀಮಂತ್ರಪ್ರತಿಪಾದ್ಯನಾದ, ಸೂರ್ಯಾಂತರ್ಗತನಾದ ಲಕ್ಷ್ಮೀನಾರಾಯಣನನ್ನು ಧ್ಯಾನ ಮಾಡುತ್ತಾ ಗಾಯತ್ರೀಮಂತ್ರವನ್ನು ಜಪಿಸಬೇಕು.

**31. ನಾವು ಧರ್ಮದಿಂದ ನಡೆಯುತ್ತಿರುವಾಗ ಅಕ್ಕಪಕ್ಕದವರು (ಗಂಡಸರಾಗಲೀ ಹೆಂಗಸರಾಗಲೀ) ಪಾಲಿಸಬೇಕಾದದ್ದನ್ನು ಪಾಲಿಸದೇ ಅಶುಚಿಯಾಗಿರು-ವಾಗ ಅವರ ಜೊತೆ ನಾವೂ ಬೆರೆತುಹೋಗಬೇಕೋ ? ಅಥವಾ ನಾವು ಧರ್ಮ ಪಾಲಿಸಬೇಕೋ ?**

ಬೇರೆ ವಿಷಯಗಳಲ್ಲಿ ಸುತ್ತಮುತ್ತಲಿನವರ ಜೊತೆ ಜಗಳವಾಡದೇ ಸ್ನೇಹದಿಂದ ಇರಬೇಕು. ಎಲ್ಲರನ್ನು ಪ್ರೀತಿಯಿಂದ ಕಾಣಬೇಕು. ಆದರೆ ಧರ್ಮದ ವಿಷಯದಲ್ಲಿ, ಮಡಿ-ಮೈಲಿಗೆಯ ವಿಚಾರದಲ್ಲಿ ಅಕ್ಕಪಕ್ಕದವರ ಜೊತೆ ಯಾವುದೇ ಸಂಕೋಚ ಇಟ್ಟುಕೊಳ್ಳಬಾರದು.

ಎಷ್ಟು ಜನ್ಮಗಳ ನಂತರ ಈ ಮಾನವಜನ್ಮ (ಸಾಧನಶರೀರ) ಬಂದಿದೆ. ಅದರಲ್ಲೂ ವೈಷ್ಣವದೇಹ, ಜ್ಞಾನಿಗಳ ಸಮಾಗಮವಾಗಿ ಧರ್ಮ ಮಾಡಬೇಕೆಂಬ ಬುದ್ಧಿ ಬಂದಿರುವುದೇ ದೊಡ್ಡ ಅದೃಷ್ಟ. ಇಂತಹ ಜನ್ಮ, ಅದರಲ್ಲೂ ಧರ್ಮ ಮಾಡಬೇಕೆಂಬ ಬುದ್ಧಿ, ಇನ್ನು ಯಾವಾಗ

---

30.2 ''ಅರ್ಚಂತಿ ಸೂರಯೋ ನಿತ್ಯಂ ಜಪೇನ ರವಿಮಂಡಲೇ ।
ಆದಿತ್ಯಮಂಡಲೇ ದಿವ್ಯಂ ದೇವದೇವಮನಾಮಯಮ್ ।
ಶಂಖಚಕ್ರಗದಾಪಾಣಿಂ ಧ್ಯಾತ್ವಾ ವಿಷ್ಣುಮುಪಾಸತೇ ॥

**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।**
**ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ**
**ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ॥**

ಏತತ್ಪರನ್ ಕೇವಲಮೇವ ಸೂಕ್ತಂ
ದಿನೇ ದಿನೇ ಭಾವಿತವಿಷ್ಣುಬುದ್ಧಿಃ ।
ಸ ಸರ್ವಪಾಪಂ ಪ್ರವಿಹಾಯ ವೈಷ್ಣವಂ
ಪದಂ ಪ್ರಯಾತ್ಯಚ್ಯುತತುಷ್ಟಿಕೃನ್ನರಃ ॥''
(ನರಸಿಂಹಪುರಾಣ ಅಧ್ಯಾಯ-62 ಶ್ಲೋಕ-16/17/18)

ಬರುತ್ತದೆಯೋ ? ಕತ್ತೆ-ನಾಯಿ-ಹಂದಿ ಹೀಗೆ ಏನಾಗಿ ಹುಟ್ಟಿತ್ತೇವೆಯೋ ತಿಳಿಯದು.

ಹೀಗಿರುವಾಗ ಯಾವುದೋ ವ್ಯಕ್ತಿಯ ಸಂಕೋಚಕ್ಕೊಳಗಾಗಿ, ಯಾವುದೋ ದಾಕ್ಷಿಣ್ಯಕ್ಕೆ ಬಿದ್ದು ಅಥವಾ ಯಾವುದೋ ಪ್ರತಿಷ್ಠೆಗಾಗಿ ನಮ್ಮ ಧರ್ಮವನ್ನು, ನಮ್ಮ ನಿಷ್ಠೆಯನ್ನು, ನಮ್ಮ ಪರಂಪರೆಯನ್ನು, ನಮ್ಮ ಭಕ್ತಿಯನ್ನು ನಾವು ಹಾಳು ಮಾಡಿಕೊಳ್ಳುವುದು ಸರಿಯಲ್ಲ.

ಅಂತರಂಗದಲ್ಲಿ ನಮ್ಮ ನಿಷ್ಠೆ, ಬಾಹ್ಯಶುದ್ಧಿ ಎಷ್ಟು ಅನಿವಾರ್ಯವಾಗಿ ಬೇಕೋ ಅಷ್ಟನ್ನು ಪರಿಪಾಲಿಸುತ್ತಾ, ಅದು ಇತರರೊಂದಿಗೆ ಜಗಳ(ವೈಮನಸ್ಯ)ಕ್ಕೆ ಕಾರಣವಾಗದಂತೆ ಬುದ್ಧಿವಂತಿಕೆಯಿಂದ ಪ್ರೀತಿಯನ್ನು ಉಳಿಸಿಕೊಂಡು, ಧರ್ಮವನ್ನು ಆಚರಿಸಬೇಕು. ಹೊರತು ಯಾರದೋ ದಾಕ್ಷಿಣ್ಯಕ್ಕೆ ಬಿದ್ದು ಧರ್ಮವನ್ನು ಬಿಟ್ಟರೆ ದೇವರು ಕೇಳುವುದಿಲ್ಲ.

**"ನಾಸ್ತಿ ಧರ್ಮೇ ಸಹಾಯತಾ" (ಮ.ಭಾ.)**

ಎನ್ನುತ್ತಾನೆ ಪರಮಾತ್ಮ. ಧರ್ಮ ಮಾಡಬೇಕು ಎಂದರೆ ತನ್ನ ಶಕ್ತಿಗೆ ವಂಚನೆ ಮಾಡದೇ ಧರ್ಮ ಮಾಡಬೇಕು ಅಷ್ಟೇ. ಸಂಕೋಚಕ್ಕೊಳಗಾಗಿ ಧರ್ಮ ಬಿಡುವುದು ಧರ್ಮವಲ್ಲ.

**32. 33 ಕೋಟಿ ದೇವತೆಗಳಿದ್ದಾರೆ. ಅನೇಕ ಗುರುಗಳಿದ್ದಾರೆ. ಇಷ್ಟೆಲ್ಲ ದೇವತೆಗಳು, ಗುರುಗಳು ಇರುವಾಗ ಯಾರ ಸ್ಮರಣೆಯನ್ನು ಅಖಂಡವಾಗಿ ಮಾಡಬೇಕು ? ಒಬ್ಬ ದೇವರಿದ್ದರೆ ಅವನನ್ನೇ ಅಖಂಡವಾಗಿ ಸ್ಮರಣೆ ಮಾಡುತ್ತಾ ಜೀವನವನ್ನು ಸಾರ್ಥಕಮಾಡಿಕೊಳ್ಳಬಹುದಲ್ಲವೇ ?**

ಅಷ್ಟೆಲ್ಲ ದೇವತೆಗಳು - ಗುರುಗಳು ಇದ್ದರೂ ಮುಖ್ಯವಾಗಿ ನಾರಾಯಣನೇ ಸರ್ವೋತ್ತಮನಾದ್ದರಿಂದ ಆ ನಾರಾಯಣನ ಸ್ಮರಣೆಯನ್ನು ಅಖಂಡವಾಗಿ ಮಾಡುತ್ತಿರಬೇಕು.

ಆದರೆ ಬೇರೆ ಬ್ರಹ್ಮರುದ್ರಾದಿದೇವತೆಗಳ ಹಾಗೂ ತಮ್ಮ ಗುರುಗಳ ಸ್ಮರಣೆ ಮಾಡದಿದ್ದರೆ ಭಗವಂತನು ಒಲಿಯುವುದಿಲ್ಲವಾದ್ದರಿಂದ ಮಧ್ಯ ಮಧ್ಯದಲ್ಲಿ ತಾರತಮ್ಯವನ್ನು ಸ್ಮರಣೆಗೆ ತಂದುಕೊಂಡು, ಗುರುಗಳ ಸ್ಮರಣೆ - ದೇವತೆಗಳ ಸ್ಮರಣೆ ಮಾಡುತ್ತಾ, ಸರ್ವೋತ್ತಮನಾದ ಭಗವಂತನ ಸ್ಮರಣೆ ಮಾಡಿದಾಗ ಮಾತ್ರ ಪರಮಾತ್ಮನಿಗೆ ನಿಜವಾದ ಸಂತೋಷವಾಗುತ್ತದೆ.

ಆದ್ದರಿಂದ 'ಅಷ್ಟೆಲ್ಲ ಸ್ಮರಣೆ ಮಾಡಿ ಗೊಂದಲ ಮಾಡಿಕೊಳ್ಳುವುದೇಕೆ ? ಒಂದನ್ನು ಮಾತ್ರ ಸ್ಮರಿಸುತ್ತೇನೆ' ಎಂದರೆ ನಡಿಯುವುದಿಲ್ಲ. ನೂರೆಂಟು ಪದಾರ್ಥಗಳನ್ನು ತಂದು ಅಷ್ಟೆಲ್ಲ ಅಡಿಗೆ ಮಾಡಿ ತಿನ್ನುವುದೇಕೆ ? ಒಂದನ್ನು ಮಾತ್ರ ತಿನ್ನೋಣ ಎಂದರೆ ಅದು ಸರಿಯಾಗುವುದಿಲ್ಲ. ಬದುಕ- ಬೇಕಾದರೆ ನೂರೆಂಟು ಪದಾರ್ಥಗಳು ಬೇಕೇ ಬೇಕು. ಹಾಗೆ ಆಧ್ಯಾತ್ಮಿಕ ಬದುಕಿಗೂ ಸಹ ಅನೇಕವಿಧ ದೇವತೆಗಳ / ಗುರುಗಳ ಅನುಗ್ರಹ ಆವಶ್ಯಕವಾದ್ದರಿಂದ ಎಲ್ಲರ ಸ್ಮರಣೆಯನ್ನೂ ತಾರತಮ್ಯಾನುಸಾರವಾಗಿ ಮಾಡಲೇಬೇಕು.

ಅಖಂಡವಾಗಿ ಸ್ಮರಿಸಬೇಕಾದದ್ದು, ವಿಶೇಷವಾಗಿ ಸರ್ವೋತ್ತಮತ್ವೇನ ಚಿಂತನ ಮಾಡಬೇಕಾದದ್ದು ನಾರಾಯಣನನ್ನು ಮಾತ್ರ.

**33. ಕೆಟ್ಟ ಕೆಲಸ (ಅಸತ್ಕರ್ಮ) ಮಾಡಿದಾಗಲೂ, ದೇವತೆಗಳು ಹಾಗೂ ಪರಮಾತ್ಮ ನಮ್ಮಲ್ಲಿ ನಿಂತು ಮಾಡಿಸಿದ್ದಾರೆ ಎಂದು ತಿಳಿಯಬೇಕೇ ?**

ಒಳ್ಳೆಯ ಕೆಲಸವಾಗಿರಬಹುದು, ಕೆಟ್ಟ ಕೆಲಸವಾಗಿರಬಹುದು. ಎಲ್ಲವನ್ನೂ ದೇವತೆಗಳೇ ಮಾಡಿಸುತ್ತಾರೆ ಎಂದೇ ತಿಳಿಯಬೇಕು.

ಆದರೆ ಒಳ್ಳೆಯ ಕೆಲಸ ಮಾಡಿಸಿದಾಗ ''ಇದೇ ರೀತಿಯಾಗಿ ಒಳ್ಳೆಯ ಕೆಲಸಗಳನ್ನು ಮಾಡಿಸಿ ಉದ್ಧಾರ ಮಾಡಿರಿ'' ಎಂಬುದಾಗಿ ಪ್ರಾರ್ಥಿಸಬೇಕು. ಕೆಟ್ಟ ಕೆಲಸಗಳನ್ನು ಮಾಡಿಸಿದಾಗ ''ನನ್ನ ಯೋಗ್ಯತೆಗೆ ಹಾಗೂ ನನ್ನ ಪೂರ್ವಕರ್ಮಗಳಿಗೆ ಅನುಸಾರವಾಗಿ ಈ ಕೆಟ್ಟ ಕರ್ಮವನ್ನು ಮಾಡಿಸಿದ್ದಾರೆ. ಇನ್ನೊವ್ಮೆ ಈ ರೀತಿ ಕೆಟ್ಟ ಕೆಲಸವನ್ನು ಮಾಡಿಸಬೇಡಿರಿ'' ಎಂಬುದಾಗಿ ಪ್ರಾರ್ಥಿಸುತ್ತಾ 'ದೇವತೆಗಳು-ದೇವರು ಮಾಡಿಸಿದ್ದಾರೆ' ಎಂದು ತಿಳಿಯಬೇಕು.

**34. ಶುಕ್ರವಾರದಂದು ಏಕಾದಶೀ ಬಂದರೆ ಲಕ್ಷ್ಮೀದೇವಿಗೆ (ಪುಟಾಣಿ ಸಕ್ಕರೆ ಇತ್ಯಾದಿ) ನೈವೇದ್ಯವನ್ನು ಮಾಡಬಹುದೇ ?**

ಲಕ್ಷ್ಮೀದೇವಿಯು ನಿಜವಾಗಿ ನಿತ್ಯಮುಕ್ತಳು. ನಿತ್ಯಮುಕ್ತಳಾದವಳಿಗೆ ಯಾವ ವಿಧವಾದ ನಿಯಮದ ಬಂಧ ಇಲ್ಲ. ಏಕಾದಶೀ ಮಾಡಬೇಕು/ಬಿಡಬೇಕು ಇತ್ಯಾದಿನಿಯಮಗಳು ಯಾವ ಮುಕ್ತರಿಗೂ ಇಲ್ಲ. ನಿತ್ಯಮುಕ್ತಳಾದ ಲಕ್ಷ್ಮೀದೇವಿಗಂತೂ ಆ ವಿಧವಾದ ನಿಯಮಗಳು ಇಲ್ಲವೇ ಇಲ್ಲ. ಆದರೂ (ತನಗೆ ವಿಧಿಬಂಧ ಇಲ್ಲದಿದ್ದರೂ ಸಹ) ಸ್ವಭಾವತಃ ತನ್ನ ಇಚ್ಛೆಯಿಂದ ಸದಾಕಾಲದಲ್ಲಿ ಏಕಾದಶೀ ಮೊದಲಾದ ವ್ರತಗಳನ್ನು ಭಗವಂತನ

ಪ್ರೀತ್ಯರ್ಥವಾಗಿ ಮಾಡುತ್ತಿರುತ್ತಾಳೆ. ಆದ್ದರಿಂದ ಏಕಾದಶೀ ದಿನ ಲಕ್ಷ್ಮೀ-ದೇವಿಗಾಗಲೀ, ಇತರ ದೇವತೆಗಳಿಗಾಗಲೀ ನೈವೇದ್ಯವನ್ನು ಮಾಡಬಾರದು.

**35. ನೀರಿನ ತೊಂದರೆಯಿದ್ದಾಗ ಒಂದೇ ಕೊಡದ ನೀರಿನಲ್ಲಿ ಪಾತ್ರಭೇದ ಮಾಡಿ ಆಚಮನ/ಅರ್ಘ್ಯ ಇತ್ಯಾದಿಗಳನ್ನು ಮಾಡಬಹುದೇ ?**

ಉದ್ಧೃತಜಲ ಎನ್ನುತ್ತಾರೆ. ಒಂದೇ ಕೊಡದ ನೀರಿದ್ದಾಗ ಕೊಡವನ್ನು ಬಗ್ಗಿಸದೇ, ಚಿಕ್ಕಪಾತ್ರೆಯಿಂದ ಕೊಡದಲ್ಲಿ ಅದ್ದಿ ನೀರನ್ನು ತೆಗೆದುಕೊಂಡು, ಬೇರೆ ಬೇರೆ ಪಾತ್ರಭಾಗ ಮಾಡಿಕೊಂಡು ಉಪಯೋಗಿಸಬಹುದು.

ನೀರಿನ ಅತ್ಯಂತ ಕೊರತೆಯಿದ್ದಾಗ ಅರ್ಥಾತ್ ಅನಿವಾರ್ಯವಾದ ಪರಿಸ್ಥಿತಿ ಇದ್ದಾಗ ಆ ರೀತಿ ಉಪಯೋಗಿಸಬಹುದು ಎಂದು ಹೇಳಿದ್ದಾರೆ.

★★★

# ಮಹಾಭಾರತ ವಿಭಾಗ

1. **ರಾಮಾಯಣದಲ್ಲಿ ವಾಯುದೇವರಿಗೆ ವಿಶೇಷಸ್ಥಾನ ಕೊಟ್ಟು, ಮಹಾಭಾರತದಲ್ಲಿ ಧರ್ಮರಾಜನ ತಮ್ಮನಾಗಿ ಹುಟ್ಟಿಸಿದ್ದಕ್ಕೆ ತಾರತಮ್ಯ ಭಂಗವಾಗಲಿಲ್ಲವೇ ?**

ಕೇವಲ ಅಣ್ಣ-ತಮ್ಮಂದಿರಾಗಿ ಹುಟ್ಟಿದ ಮಾತ್ರಕ್ಕೆ ತಾರತಮ್ಯಭಂಗ ಇಲ್ಲ. ಮೊದಲು ಹುಟ್ಟಿದವರು ಉತ್ತಮರು, ನಂತರ ಹುಟ್ಟಿದವರು ಅಧಮರು ಎನ್ನುವ ನಿಯಮವು ಪರಮಾತ್ಮನು ಮಾಡುವ ಆದಿಸೃಷ್ಟಿಗೆ ಸಂಬಂಧಿಸಿದ್ದು. ಆ ಆದಿಸೃಷ್ಟಿಯ ನಂತರ, ಮುಂದೆ ದೇವತೆಗಳು ಅವಾಂತರಸೃಷ್ಟಿಯಲ್ಲಿ ಅನೇಕಸಲ ಹುಟ್ಟುವಾಗ ದೊಡ್ಡವರು ತಮ್ಮನಾಗಿ, ಸಣ್ಣವರು ಅಣ್ಣನಾಗಿ ಹುಟ್ಟಬಹುದು. ಅದು ತಾರತಮ್ಯಸೂಚಕವಲ್ಲ. ಅವರವರ ಸ್ವರೂಪವನ್ನು ತಿಳಿಸುವ ಶಾಸ್ತ್ರಗಳು ಮತ್ತು ಆದಿಸೃಷ್ಟಿಯಲ್ಲಿ ಅವರವರು ಹುಟ್ಟಿದ ಕ್ರಮ ಇವುಗಳು ತಾರತಮ್ಯಸೂಚಕ. ಇವುಗಳಿಂದ ತಾರತಮ್ಯವನ್ನು ನಿರ್ಣಯಿಸಬೇಕು.

'ಭೀಮಸೇನದೇವರು ಶುದ್ಧವಾದ ಭಾಗವತಧರ್ಮದಲ್ಲಿ ನಡೆಯಲು ತೊಂದರೆಯಾಗಬಾರದು' ಅನ್ನುವುದಕ್ಕಾಗಿ ಧರ್ಮರಾಜನನ್ನು ಅಣ್ಣನಾಗಿ ಹುಟ್ಟಿಸಿದ ಪರಮಾತ್ಮ. ಉದಾಹರಣೆಗೆ -

> **'ಪರೋಕ್ಷೇಽಪಿ ಹರೇರ್ನಿಂದಾಂ ಕೃತೋ ಜಿಹ್ವಾಂ ಛಿನತ್ತಿ ಚ ।**
> **ಪ್ರತೀಪಕಾರಿಣೋ ಹಂತಿ ....'** (ಮ.ಭಾ.ತಾ.ನಿ. ಅ-18 ಶ್ಲೋ-10)

ಎಂದು ಹೇಳಿದಂತೆ ವಿಷ್ಣುವನ್ನು ನಿಂದಿಸಿದವನ ನಾಲಿಗೆಯನ್ನು ಕತ್ತರಿಸಿ ಹಾಕಬೇಕಾದದ್ದು ಭಾಗವತಧರ್ಮ. ದುರ್ಯೋಧನನು ಕೃಷ್ಣನನ್ನು ನಿಂದಿಸುವಾಗ ನಾಲಿಗೆ ಕತ್ತರಿಸಿ ಹಾಕಬೇಕಾದದ್ದು ಧರ್ಮ. ಆದರೆ ಅವನ ಪಾಪಸಾಧನೆ ಪೂರ್ಣವಾಗಲು ಬಿಡಬೇಕಾದದ್ದೂ ಆವಶ್ಯಕ. ಅದಕ್ಕಾಗಿ

ಮಧ್ಯದಲ್ಲಿ ಅಣ್ಣನಾಗಿ ಬಂದ ಧರ್ಮರಾಜ. ದುರ್ಯೋಧನನು ಕೃಷ್ಣನನ್ನು ಬೈಯುವಾಗ ಅವನ ನಾಲಿಗೆಯನ್ನೇ ಕತ್ತರಿಸಲು ಭೀಮನು ಏಳಬೇಕು, ಸ್ವಲ್ಪ ಸುಮ್ಮನಿರು ಎಂದು ಯುಧಿಷ್ಠಿರ ತಡೆಯುತ್ತಿದ್ದ. ದುಷ್ಟನಿಗ್ರಹ ಧರ್ಮವಾದರೂ ಅಣ್ಣನ ಆಜ್ಞಾಪರಿಪಾಲನೆಗಾಗಿ ಭೀಮನು ಸುಮ್ಮನಿರುತ್ತಿದ್ದ. ಹೀಗಾಗಿ ಭ್ರಾತೃವಾಕ್ಯಪರಿಪಾಲನೆಯಿಂದ ಭಾಗವತಧರ್ಮಕ್ಕೆ ಅಡ್ಡಿಯಾಗುತ್ತಿರಲಿಲ್ಲ.

ಈ ರೀತಿ ಶುದ್ಧವಾದ ಭಾಗವತಧರ್ಮದ ಪರಿಪಾಲನೆಗಾಗಿ ಧರ್ಮರಾಜನನ್ನು ಅಣ್ಣನನ್ನಾಗಿ ಹುಟ್ಟಿಸಿದ. ಆದಿಸೃಷ್ಟಿಯಲ್ಲಿ ಯಮಧರ್ಮನಿಗಿಂತಲೂ ವಾಯುದೇವರು ಮೊದಲು ಹುಟ್ಟಿದ್ದರಿಂದ ಅವರ ಉತ್ತಮತ್ವಕ್ಕೂ ಭಂಗವಿಲ್ಲ.

2. **ದುರ್ಯೋಧನನು ನೀರಿನಲ್ಲಿ ಮುಳುಗಿ ಕುಳಿತಿರುವಾಗ ಭೀಮಸೇನದೇವರು ಅವನನ್ನು ಮೇಲಕ್ಕೆ ಎಬ್ಬಿಸಿ ಏಕೆ ಸಂಹರಿಸಿದರು ? ತಾವೇ ನೀರಿನಲ್ಲಿ ಹೋಗಿ ಅವನನ್ನು ಸಂಹರಿಸಬಹುದಿತ್ತಲ್ಲವೇ ?**

ಭೀಮಸೇನದೇವರ ಭಾಗವತಧರ್ಮದಲ್ಲಿ ಇದೂ ಒಂದು ಸೇರಿದೆ.

**'ಅನುಪಸ್ಕಾರಿಣೋ ಹಂತಿ ನಾಭಿಯಾತಿ ಹ್ಯುಪಸ್ಕರೀ'**

ಇದೊಂದು ಧರ್ಮ. ಇದೊಂದು ನೀತಿ. ಇದೂ ವಿಷ್ಣುವಿನ ಆದೇಶ. ಎದುರಿನ ವ್ಯಕ್ತಿ ಆಯುಧರಹಿತನಾಗಿದ್ದಾಗ ಅಥವಾ ಬಚ್ಚಿಟ್ಟುಕೊಂಡಿರುವಾಗ ತಾನು ಆಯುಧಗಳಿಂದ ಅವನೊಂದಿಗೆ ಯುದ್ಧ ಮಾಡಿ ಅವನನ್ನು ಸಂಹರಿಸುವುದು ಯೋಗ್ಯವಲ್ಲ. ಅದು ರಾಜಧರ್ಮವಲ್ಲ. ಆಯುಧಸಮೇತನಾಗಿ ಧೈರ್ಯದಿಂದ ಎದುರಿಗೆ ಬಂದು ಯುದ್ಧವಾಡುವವನೊಂದಿಗೆ ಯುದ್ಧ ಮಾಡುವುದು ಶುದ್ಧವಾದ ರಾಜಧರ್ಮ.

ಹಾಗೆಯೇ ಸಂಹರಿಸುವುದೇ ಆಗಿದ್ದರೆ, ನೀರಿನೊಳಗೆ ಹೋಗಿ ಯುದ್ಧ ಮಾಡಿ ಏಕೆ ಸಂಹರಿಸಬೇಕು ? ಅವನ ಹೃದಯದಲ್ಲಿಯೇ ಶ್ವಾಸೋಚ್ಛ್ವಾಸ ಮಾಡಿಸುತ್ತಾ ಒಳಗೆ ಇರುವವರೇ ವಾಯುದೇವರಾದ್ದರಿಂದ ಅವನ ದೇಹದಿಂದ ಅನಾಯಾಸವಾಗಿ ಹೊರಗೆ ಬಂದರೆ ಸಾಕು. ಅವನ ಸಂಹಾರವಾಗುತ್ತಿತ್ತು. ಆದರೆ ಕ್ಷತ್ರಿಯಕುಲದಲ್ಲಿ ಅವತರಿಸಿದ್ದ ಭೀಮಸೇನದೇವರಿಗೆ ರಾಜಧರ್ಮದ ಪರಿಪಾಲನೆ ಮುಖ್ಯವಾಗಿತ್ತು.

ಅನ್ನುವುದಕ್ಕಾಗಿಯೇ ದುರ್ಯೋಧನನು ನೀರಿನಲ್ಲಿ ಕುಳಿತಿರುವಾಗ ಅವನನ್ನು ಬಡಿದೆಬ್ಬಿಸುವುದಲ್ಲದೇ 'ನಿನಗೆ ಯಾವ ಆಯುಧ ಬೇಕು' ಎಂದು ಕೇಳಿ ಅವನ ಇಚ್ಛೆಯಂತೆ ಗದಾಯುಧವನ್ನು ಕೊಟ್ಟು ತಾವು ಯುದ್ಧಮಾಡುತ್ತಾರೆ.

ಈ ರಾಜಧರ್ಮದ ದೃಷ್ಟಿಯಿಂದಲೇ ಇಂದ್ರಜಿತನು ಅದೃಶ್ಯನಾಗಿ ಬಂದು ಯುದ್ಧ ಮಾಡುವಾಗ ರಾಮದೇವರು ಅವನೊಂದಿಗೆ ಯುದ್ಧ ಮಾಡು-ವುದಿಲ್ಲ. ಎಲ್ಲಿಯೇ ಬಚ್ಚಿಟ್ಟುಕೊಂಡ (ಅದೃಶ್ಯನಾದ) ವ್ಯಕ್ತಿಯೊಂದಿಗೆ ಯುದ್ಧ ಮಾಡುವುದು ಶುದ್ಧವಾದ ರಾಜಧರ್ಮವಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಶ್ರೀರಾಮಚಂದ್ರನು ತನ್ನ ತಮ್ಮನಾದ ಲಕ್ಷ್ಮಣನನ್ನು ಅವನೊಂದಿಗೆ ಯುದ್ಧಮಾಡಲು ಕಳಿಸುತ್ತಾನೆ.

ಆದ್ದರಿಂದ ಬಚ್ಚಿಟ್ಟುಕೊಂಡ, ಆಯುಧರಹಿತನಾದ ವ್ಯಕ್ತಿಯೊಂದಿಗೆ ಯುದ್ಧಮಾಡುವುದು ರಾಜಧರ್ಮವಲ್ಲವಾದ್ದರಿಂದ, ಶುದ್ಧಭಾಗವತ-ಧರ್ಮದಲ್ಲಿ ನಿರತರಾದ ಭೀಮಸೇನದೇವರು ನೀರಿನಲ್ಲಿಯೇ ಮುಳುಗಿ ದುರ್ಯೋಧನನೊಂದಿಗೆ ಯುದ್ಧಮಾಡಿ ಸಂಹರಿಸಲು ಇಚ್ಛಿಸುವುದಿಲ್ಲ.

ಅದು ಅವರ ಭಾಗವತಧರ್ಮ.

**3. 18 ದಿನಗಳವರೆಗೆ ನಡೆದ ಮಹಾಭಾರತಯುದ್ಧದಲ್ಲಿ ಏಕಾದಶೀ ದಿನದಲ್ಲಿ ಏನು ಮಾಡಿದರು ?**

ಕೇವಲ ಒಂದು ದಿನವಲ್ಲ. ಎಷ್ಟೋ ದಿನಗಳವರೆಗೆ ಉಪವಾಸವಿದ್ದು ಕಾರ್ಯಗಳನ್ನು ಮಾಡಲು ಸಮರ್ಥರಾದವರು ಆ ಕಾಲದ ಜನರು ಎಲ್ಲರೂ ಘಟಾನುಘಟಿಗಳು. ಆದ್ದರಿಂದ ಸಾತ್ವಿಕಸ್ವಭಾವದವರಾದ ಅವರು ನಿರಾಹಾರಿಗಳಾಗಿಯೇ ಏಕಾದಶೀ ದಿನದಲ್ಲಿ ಯುದ್ಧಮಾಡಿದ್ದಾರೆ. ಯುದ್ಧವಿರುವ ಕಾರಣ ಯಾರೂ ಆಹಾರವನ್ನು ಸ್ವೀಕರಿಸಿದವರಲ್ಲ.

ಅಷ್ಟೇಕೆ ? ಅಂತಹ ಯುದ್ಧದಲ್ಲಿಯೂ ಸಂಧ್ಯಾವಂದನವನ್ನು ತಪ್ಪದೇ ಮಾಡುತ್ತಿದ್ದರು ಎಂದಿದೆ. ಸಂಧ್ಯಾಕಾಲ ಬಂದರೆ ಶತ್ರುಗಳ ಜೊತೆ ಅಸ್ತ್ರಗಳಿಂದ ಹೋರಾಡುವ ಸಂದರ್ಭದಲ್ಲಿಯೂ, ಘನಘೋರವಾದ

ಯುದ್ಧದಲ್ಲಿಯೂ, ಜೀವನ-ಮರಣದ ನಡುವೆ ಹೋರಾಡುತ್ತಿದ್ದರೂ ಸಂಧ್ಯಾವಂದನೆಯನ್ನು ತಪ್ಪಿಸುತ್ತಿರಲಿಲ್ಲ. ನೀರಿಲ್ಲದಿದ್ದರೂ ಅಲ್ಲಿನ ಉಸುಕಿನಿಂದಲೇ ಅರ್ಘ್ಯವನ್ನು ಕೊಡುತ್ತಿದ್ದರು ಎಂದಿದೆ.

ಕೆಲಸ-ಕಛೇರಿಗಳಲ್ಲಿಯೇ ಮುಳುಗಿದ 'ಸಂಧ್ಯಾವಂದನೆಗೆ ಸಮಯವಿಲ್ಲ' ಎಂದು ನೆಪ ಹೇಳುವ ಇಂದಿನಕಾಲದ ಜನರಿಗೆ ಅಂದಿನ ಕಾಲದ, ಯುದ್ಧದಲ್ಲಿಯೂ ಸಂಧ್ಯಾವಂದನೆ ಮಾಡುತ್ತಿದ್ದ ರಾಜ-ಮಹಾರಾಜರುಗಳು ಎಂತಹ ಪಾಠ ಕಲಿಸುತ್ತಾರೆ ಅಲ್ಲವೇ ?

ಅಂದಮೇಲೆ ಯುದ್ಧಕಾಲದಲ್ಲಿಯೂ ಸಂಧ್ಯಾವಂದನೆ ತಪ್ಪಿಸದ ಅಂದಿನ ಜನರು ಏಕಾದಶೀ ದಿನದಲ್ಲಿ ನಿರಾಹಾರಿಗಳಾಗಿಯೇ ಯುದ್ಧ ಮಾಡುತ್ತಿದ್ದರು ಎಂದರೆ ಆಶ್ಚರ್ಯವೇನಿಲ್ಲ.

**4. ಮಹಾಭಾರತದ ಆಚಾರ-ವಿಚಾರಗಳನ್ನು ಇಂದಿನ ಕಾಲ(ಕಲಿಯುಗ)ದಲ್ಲಿ ಅಳವಡಿಸಿಕೊಂಡರೆ ಏನು ಪ್ರಯೋಜನ ?**

ಸಮಾಜದಲ್ಲಿ ನಾವು ಪ್ರೀತಿಯಿಂದ ಇರಬೇಕು, ಒಬ್ಬರನ್ನು ಒಬ್ಬರು ಹಿಂಸಿಸದೇ ಇರಬೇಕು, ಮದ್ಯಪಾನ-ಮಾಂಸಭಕ್ಷಣಾದಿಗಳನ್ನು ಮಾಡಿ ಹಾಳಾಗಬಾರದು, ಭಗವದ್ಭಕ್ತಿ-ಶ್ರದ್ಧೆ-ಧರ್ಮಭೀರುತ್ವಾದಿಗಳನ್ನು ಪಡೆದು ಪ್ರಾಮಾಣಿಕಜೀವನವನ್ನು ನಡೆಸಿ ಎಲ್ಲರಿಗೂ ಹಿತವನ್ನುಂಟುಮಾಡಿ ತನಗೂ ಹಿತಮಾಡಿಕೊಳ್ಳುವುದಕ್ಕೆ ಏನು ಮಾಡಬೇಕೋ ಅಂತಹ ಅನೇಕವಿಧ ತತ್ತ್ವಗಳನ್ನು ಮಹಾಭಾರತವು ಹೇಳುತ್ತದೆ.

ಪ್ರತಿಯೊಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಯಾವ ರೀತಿಯಲ್ಲಿದ್ದರೆ ಸುಖವಾಗಿರುತ್ತಾನೆ ಎನ್ನುವುದನ್ನು ಸಾರ್ವಕಾಲಿಕವಾಗಿ ನಿರೂಪಣೆ ಮಾಡುವ ಮಹಾಭಾರತದ ಆದರ್ಶಗಳನ್ನು ಯಾವ ಯುಗದಲ್ಲಿಯಾದರೂ ಅನುಷ್ಠಾನ ಮಾಡಬೇಕೆಂದೇ ಉಪದೇಶಿಸಿದ್ದು. ಆದ್ದರಿಂದ ಅವು ಅತ್ಯಂತ ಸಂಗತವೇ ಆಗಿವೆ. ಅವುಗಳಲ್ಲಿ ಕೆಲವುಗಳನ್ನು ಇಂದು ಅನುಷ್ಠಾನಮಾಡುವ ಯೋಗ್ಯತೆ ಇಲ್ಲದಿರಬಹುದು. ಅಂದಮಾತ್ರಕ್ಕೆ ಅವುಗಳನ್ನು ಅಸಂಗತ ಎನ್ನಲು ಬರುವುದಿಲ್ಲ.

5. **ಶ್ರೀಕೃಷ್ಣಪರಮಾತ್ಮ ಅಥವಾ ಶ್ರೀರಾಮಚಂದ್ರ ರುದ್ರದೇವರ ಲಿಂಗವನ್ನು ಸ್ಥಾಪಿಸಿದ್ದು, ಅವರಿಂದ ವರ ಕೇಳಿದ್ದು ಎಲ್ಲವೂ ಇದೆ. ಹೀಗಿರುವಾಗ ಬ್ರಹ್ಮ-ವಿಷ್ಣು-ಮಹೇಶ್ವರರಿಗಿಂತಲೂ ಅತಿರಿಕ್ತನಾದ ಒಬ್ಬ ಪರಶಿವ ಇದ್ದಾನೆ ಎಂದು ನಂಬಬೇಕೇ ? ಹಾಗಾದರೆ ವಿಷ್ಣು ಸರ್ವೋತ್ತಮ ಎಂದು ಹೇಗೆ ಹೇಳುವುದು ?**

ಶ್ರೀಮದಾಚಾರ್ಯರು ವಿಷ್ಣುಸರ್ವೋತ್ತಮತ್ವಸ್ಥಾಪನೆಗಾಗಿಯೇ ಅವತರಿಸಿ-ದವರು. ಅವರನ್ನು ಬಿಡಿ. ಯಾವ ಮತೀಯವಿಚಾರವೂ ಅಲ್ಲದೇ, ಎಲ್ಲವಿಧ ಮತದವರಿಗೂ ಮೂಲಭೂತರಾದವರು ವೇದವ್ಯಾಸದೇವರು. ಅಂತಹ ಎಲ್ಲ ಆಚಾರ್ಯಗೂ ಮೂಲರಾದ, ಎಲ್ಲ ಮತಗಳಿಗೆ ಆಧಾರವಾದ ಪುರಾಣಗಳನ್ನು ರಚಿಸಿಕೊಟ್ಟಂತಹ ವೇದವ್ಯಾಸದೇವರೇ ಪದ್ಮಪುರಾಣದಲ್ಲಿ ಹೇಳಿದ್ದಾರೆ. ವರಾಹಪುರಾಣದಲ್ಲಿಯೂ ಹೇಳಿದ್ದಾರೆ.

ಶ್ರೀಕೃಷ್ಣ ಅಥವಾ ರಾಮಚಂದ್ರ ಯಾಕೆ ಲಿಂಗವನ್ನು ಸ್ಥಾಪಿಸಿ ಪೂಜೆ ಮಾಡಿದ್ದು ? ವರವನ್ನು ಕೇಳಿದ್ದು ? ಎನ್ನುವುದಕ್ಕೆ -

**''ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।**
**ದ್ವಾಪರಾದೌ ಯುಗೇ ಭೂತ್ವಾ.......''**

ಶ್ರೀಕೃಷ್ಣ ತನಗೆ ಪ್ರದ್ಯುಮ್ನ ಮಗನಾಗಿ ಹುಟ್ಟುವುದಕ್ಕೆ ತಪಸ್ಸು ಮಾಡಿದ. ವರ ಕೇಳಿದ. ಅಥವಾ ರಾಮದೇವರು ಲಿಂಗಪ್ರತಿಷ್ಠಾಪನೆ ಮಾಡಿದರು. ಇದೆಲ್ಲದಕ್ಕೆ ಪರಮಾತ್ಮನೇ ರುದ್ರದೇವರಿಗೆ ಹೇಳಿದ ಮಾತುಗಳನ್ನು ಸ್ಪಷ್ಟವಾಗಿ ಪದ್ಮಪುರಾಣ ತಿಳಿಸುತ್ತದೆ.[1] (ಇಂದಿಗೂ ಮುದ್ರಿತ ಪುಸ್ತಕಗಳಲ್ಲಿ ಈ ಶ್ಲೋಕಗಳು ಲಭ್ಯ)

ಶ್ರೀಕೃಷ್ಣ ಹೇಳಿದ್ದಾನೆ. ನಾನು ಅವತಾರಗಳನ್ನು ಮಾಡಿದಾಗ ನಿನ್ನ ಪೂಜೆ ಮಾಡುತ್ತೇನೆ. ನಿನ್ನಿಂದ ವರ ಪಡೆಯುತ್ತೇನೆ. ಲಿಂಗಸ್ಥಾಪನೆ ಮಾಡುತ್ತೇನೆ. ಇವುಗಳನ್ನು ಮಾಡಿ ಜನರಿಗೆ ನಿನ್ನ ವೈಶಿಷ್ಟ್ಯವನ್ನು ತೋರಿಸುವಂತೆ ಮಾಡುತ್ತೇನೆ. ಅಂದಮಾತ್ರಕ್ಕೆ ನೀನು ದೊಡ್ಡವನೆಂದಲ್ಲ. ನಾನು

---

5.1 ''ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।
ದ್ವಾಪರಾದೌಯುಗೇ ಭೂತ್ವಾ ಕಲಯಾಮಾನುಷಾದಿಷು ॥''
(ಪದ್ಮಪುರಾಣ - ಉತ್ತರಖಂಡ - ಅಧ್ಯಾಯ-71 ಶ್ಲೋ-106)

ಸಣ್ಣವನೆಂದಲ್ಲ. ಕೇವಲ ಲೀಲೆಗಾಗಿ, ಅಜ್ಞಜನಮೋಹನಕ್ಕಾಗಿ ಹಾಗೆ ಮಾಡುತ್ತೇನೆ[2] ಎಂದು. ಕೇವಲ ಶ್ರೀಕೃಷ್ಣ ಹೇಳಿದ್ದಲ್ಲ. ಸ್ವತಃ ರುದ್ರದೇವರು ದೇವತೆಗಳನ್ನು ಕುರಿತು ಹೇಳುತ್ತಾರೆ - ''ಶ್ರೀಕೃಷ್ಣ ನನ್ನನ್ನು ಕುರಿತು ತಪಸ್ಸು ಮಾಡಿದ್ದರ ಉದ್ದೇಶ್ಯ, ಪೂಜೆ ಮಾಡಿದ್ದರ ಉದ್ದೇಶ್ಯ ಕೇವಲ ಜನರಲ್ಲಿ ನನ್ನ ವೈಶಿಷ್ಟ್ಯ ಪ್ರಚಾರವಾಗಲಿ ಎನ್ನುವುದಕ್ಕಾಗಿ ಮಾಡಿದ್ದು. ಅಜ್ಞಜನ ಮೋಹನಕ್ಕಾಗಿ ಮಾಡಿದ್ದು. ಹೊರತು ಇದೇ ನಿಜವಾದ ತತ್ವವಲ್ಲ'' ಎಂದು ಈ ರೀತಿಯಾಗಿ ಪದ್ಮಪುರಾಣ - ವರಾಹಪುರಾಣಗಳಲ್ಲಿ ಸ್ಪಷ್ಟವಾಗಿ ವೇದವ್ಯಾಸದೇವರು ನಿರ್ಣಯ ಕೊಟ್ಟಿದ್ದರಿಂದ, ಆ ಮಾತುಗಳಿಂದ ವಿಷ್ಣು ಸರ್ವೋತ್ತಮ ಅಲ್ಲ ಎಂದು ಹೇಳಲು ಬರುವುದಿಲ್ಲ.

ಸ್ಪಷ್ಟವಾದ, ನಿರವಕಾಶವಾದ ವೇದವಚನಗಳಿಂದ ವಿಷ್ಣುಸರ್ವೋತ್ತಮ-ತ್ವವನ್ನು ನಿರ್ಧಾರ ಮಾಡಿಕೊಳ್ಳಬೇಕು. ವೇದವ್ಯಾಸರ ಅಭಿಪ್ರಾಯವನ್ನು ವೇದಗಳಿಂದ ಪುಷ್ಟೀಕರಿಸಿಕೊಳ್ಳಬೇಕು.

**''ನ ತೇ ವಿಷ್ಣೋ ಜಾಯಮಾನೋ ನಾ ಜಾತೋ ದೇವ**
**ಮಹಿಮ್ನಃ ಪರಮಂತಮಾಪ''**

ಹಿಂದೆ ಹುಟ್ಟಿದವರಾಗಲೀ, ಮುಂದೆ ಬರುವವರಾಗಲೀ, ಪರಮಾತ್ಮನ ಪಾರಮ್ಯವನ್ನು ಹೊಂದಲು ಸಾಧ್ಯವಿಲ್ಲ. ಅಂತಹ ಪರಮಮಹತ್ವ (ಪಾರಮ್ಯ) ವಿಷ್ಣುವಿಗೆ ಇದೆ ಎಂದು ಶ್ರುತಿ ಸಾರಿ ಹೇಳುತ್ತದೆ.

ಆದ್ದರಿಂದ ಇಂತಹ ಅನೇಕ ನಿರವಕಾಶವಾದ ವೇದವಚನಗಳು, ಪುರಾಣವಚನಗಳು ಇದ್ದದ್ದರಿಂದ ವಿಷ್ಣುವಿಗೆ ಪಾರಮ್ಯವನ್ನು ತಿಳಿಯಬೇಕು. ವಿಷ್ಣುವಿಗಿಂತಲೂ ರುದ್ರದೇವರು ಉತ್ತಮರು ಎಂದು ತಿಳಿಯಬಾರದು.

**'ಸಾ ಕಾಷ್ಠಾ ಸಾ ಪರಾ ಗತಿಃ'**

---

5.2 ''ಶ್ರೀಭಗವಾನುವಾಚ -
ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ ।
ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ ॥''
(ಪದ್ಮಪುರಾಣ - ಉತ್ತರಖಂಡ ಅಧ್ಯಾಯ-235 ಶ್ಲೋಕ-35)

ಎಂಬ ಮಾತನ್ನು ಉಪನಿಷತ್ತಿನಲ್ಲಿ ನಾವು ಕಾಣುತ್ತೇವೆ.

**'ತದ್ವಿಷ್ಣೋಃ ಪರಮಂ ಪದಂ'**

ಎಂಬ ಮಾತನ್ನು ಯಾವ ಕಾಠಕೋಪನಿಷತ್ತು ಹೇಳುತ್ತದೆ ಅದೇ ಉಪನಿಷತ್ತೇ ಪರಮಾತ್ಮನಿಗಿಂತಲೂ ಮೇಲೆ ಯಾರೂ ಇಲ್ಲ ಎಂಬುದಾಗಿ ಸ್ಪಷ್ಟವಾಗಿ ಹೇಳುತ್ತದೆ.

ಈ ಉಪನಿಷತ್ತಿಗೆ ಕೇವಲ ಶ್ರೀಮದಾಚಾರ್ಯರಷ್ಟೇ ಅಲ್ಲ, ಶಂಕರಾಚಾರ್ಯರೂ ವ್ಯಾಖ್ಯಾನ ಮಾಡಿದ್ದಾರೆ. ಅವರೂ ಸಹ ವಿಷ್ಣುವಿಗಿಂತಲೂ ಪರದೈವ ಇಲ್ಲ ಎಂಬ ಅರ್ಥವನ್ನೇ ತಿಳಿಸಿದ್ದಾರೆ.

ಆದ್ದರಿಂದ ಎಲ್ಲ ವಿಧಿವಚನಗಳನ್ನು ಅವಲೋಕಿಸಿದಾಗ ''ವಿಷ್ಣು ಸರ್ವೋತ್ತಮ'' ಎಂಬ ತತ್ವ ಸ್ಪಷ್ಟವಾಗಿ ನಿಶ್ಚಯವಾಗುತ್ತದೆ.

(ಇದರ ಬಗ್ಗೆ ಹೇಳಬೇಕಾದದ್ದು ಬಹಳವಿದ್ದರೂ ಗ್ರಂಥಗೌರವಭಯದಿಂದ ಹೇಳಲಾಗಿಲ್ಲ. ಸಂಕುಚಿತವಾಗಿ ಹೇಳಲಾಗಿದೆ.)

★★★

## ಉತ್ತರಾದಿಮಠ ವಿಭಾಗ

1. **ತುಲಾಭಾರದ ಮಹತ್ವವೇನು ? ಅದನ್ನು ಯಾಕೆ ಮಾಡುತ್ತಾರೆ ?**

ಇದಕ್ಕೆ ಶ್ರೀಮದಾಚಾರ್ಯರು ಪದ್ಮಪುರಾಣದ ಉತ್ತರಖಂಡದಲ್ಲಿರುವ ವಾಕ್ಯವನ್ನು ತಮ್ಮ ಬೃಹದಾರಣ್ಯಭಾಷ್ಯದಲ್ಲಿ (1-5-4) ಕೋಟ್ ಮಾಡಿ ಹೇಳುತ್ತಾರೆ.

"ತುಲಾಪುರುಷದಾನಾದ್ಯೈಃ ಅಶ್ವಮೇಧಾದಿಭಿರ್ಮಖೈಃ ।"

ತುಲಾಪುರುಷದಾನ, ಅಶ್ವಮೇಧಾದಿ ಯಾಗಗಳು, ದಾನ, ತಪಸ್ಸು, ತೀರ್ಥಸ್ನಾನ, ಉಪವಾಸ ಈ ಎಲ್ಲ ಕಾರ್ಯಗಳೂ

'ಸರ್ವಂ ಭಕ್ತ್ಯರ್ಥಮುದ್ದಿಷ್ಟಂ'

ಭಗವಂತನಲ್ಲಿ ವಿಶೇಷವಾದ ಭಕ್ತಿಯನ್ನು ಪಡೆಯುವುದಕ್ಕಾಗಿ, ಮೋಕ್ಷಪ್ರಾಪ್ತಿಗಾಗಿ ಮಾಡುವಂತಹ ಕಾರ್ಯಗಳು. ಒಬ್ಬ ಪುರುಷನ ತೂಕಕ್ಕೆ ಸಮಾನವಾದ ದ್ರವ್ಯಾದಿಗಳನ್ನು ದಾನ ಮಾಡುವುದಕ್ಕೆ ತುಲಾಪುರುಷದಾನ ಎನ್ನುತ್ತಾರೆ.[1] ನಾನಾವಿಧದಾನಗಳಲ್ಲಿ ಇದೂ ಒಂದು ರೀತಿಯ ದಾನವೇ. ಈ ದಾನವನ್ನೂ ವಿಷ್ಣುಪ್ರೀತ್ಯರ್ಥವಾಗಿ ಮಾಡಿ, ಭಗವಂತನಲ್ಲಿ ವಿಶೇಷ-ಭಕ್ತಿಯನ್ನು ಪಡೆದು ಮೋಕ್ಷವನ್ನು ಹೊಂದಬೇಕು.[2]

---

1.1 "ಆತ್ಮತುಲ್ಯಂ ಸುವರ್ಣಂ ವಾ ರಜತಂ ರತ್ನಮೇವ ವಾ ।
ಯೋ ದದಾತಿ ದ್ವಿಜಾಗ್ರ್ಯೇಭ್ಯಃ ತಸ್ಯಾಪ್ಯೇತತ್ ಫಲಂ ಭವೇತ್ ॥"
(ಭಗವಂತ ಭಾಸ್ಕರ- ದಾನಮಯೂಖ)

1.2 "ತುಲಾಪುರುಷತೋ ರಾಜನ್ ಯಾತಿ ತತ್ಪರಮಂ ಪದಮ್ ।
ಸರ್ವಪಾಪವಿಶುದ್ಧಾತ್ಮಾ ಮುಕ್ತಿಂ ಯಾತ್ಯಪುನರ್ಭವಮ್ ॥"
(ಭಗವಂತಭಾಸ್ಕರ-ದಾನಮಯೂಖ)

**2. ಶ್ರೀಪಾದಂಗಳವರ ಹೆಸರಿನ ಹಿಂದೆ 108-1008 ಎಂದು ಏಕೆ ಬರೆಯುತ್ತಾರೆ ?**

ಶ್ರೀ ಎನ್ನುವುದು ಗೌರವಸೂಚಕವಾದ ಶಬ್ದ. ಆದ್ದರಿಂದಲೇ ಎಲ್ಲರ ಹೆಸರುಗಳ ಹಿಂದೆ ಶ್ರೀ ಎಂದು ಬರೆಯುವ ಸಂಪ್ರದಾಯವಿದೆ. ವಿಶೇಷ ಗೌರವವನ್ನು ಸೂಚಿಸುವುದಕ್ಕಾಗಿ ಎರಡು ಶ್ರೀಶಬ್ದ, ಹತ್ತು, ನೂರು, ಸಾವಿರ ಶ್ರೀಶಬ್ದಗಳು ಬೇಕು. ಹೀಗೆ ಹೆಚ್ಚೆಚ್ಚು ಗೌರವವನ್ನು ಸೂಚಿಸುವುದಕ್ಕೆ ಹೆಚ್ಚೆಚ್ಚು ಶ್ರೀಶಬ್ದಗಳನ್ನು ಹೇಳುತ್ತಾರೆ. ಭಗವಂತನ ವಿಶೇಷ ಸನ್ನಿಧಾನವಿರುವ ಸನ್ಯಾಸಿಗಳಿಗೆ ಹೆಚ್ಚೆಚ್ಚು ಗೌರವವನ್ನು ಸೂಚಿಸುವುದಕ್ಕಾಗಿ, ನೂರು ಸಾವಿರ ಶ್ರೀಶಬ್ದಗಳನ್ನು ತಿಳಿಸುವುದಕ್ಕಾಗಿ ಆ ಅನೇಕಶ್ರೀಶಬ್ದಗಳ ಪ್ರತಿನಿಧಿಯಾಗಿ 108-1008 ಎಂದು ಬರೆಯುತ್ತಾರೆ.

ಈ ಗೌರವಸೂಚಕವಾದ ಶ್ರೀಶಬ್ದಗಳ ಸೀಮೆ ಪರಮಾತ್ಮನಿಗೆ ಇಲ್ಲ. ಆದ್ದರಿಂದರೇ ''ಅನಂತರೂಪೋऽನಂತಶ್ರೀಃ ಜಿತಮನ್ಯುರ್ಭಯಾಪಹಃ'' ಎಂಬುದಾಗಿ ಪರಮಾತ್ಮನಿಗೆ ಅನಂತಶ್ರೀ ಎಂದು ವಿಷ್ಣುಸಹಸ್ರನಾಮದಲ್ಲಿ ಕರೆದಿದ್ದಾರೆ. ಅನಂತಲಕ್ಷ್ಮೀರೂಪಗಳಿಂದ ಪೂಜ್ಯನಾಗಿದ್ದಾನೆ ಎಂಬ ಅರ್ಥವನ್ನು ಅಲ್ಲಿ ತಿಳಿಸಿದ್ದಾರೆ.

**3. ಶ್ರೀಮಠಕ್ಕೆ 'ಉತ್ತರಾದಿಮಠ' ಎಂಬ ಹೆಸರು ಏಕೆ ಬಂದಿದೆ ?**

ಚತುರ್ಮುಖಬ್ರಹ್ಮದೇವರಿಗೆ ಸನಕಾದಿಗಳು ಪ್ರಶ್ನೆ ಮಾಡುತ್ತಾರೆ. ತಮಗೆ ಸನಕಾದಿಗಳ ಆ ಪ್ರಶ್ನೆಗಳಿಗೆ ಉತ್ತರ ತಿಳಿದಿದ್ದರೂ ಸಹ, ಬ್ರಹ್ಮದೇವರು ಪರಮಾತ್ಮನಿಂದ ಉತ್ತರ ಹೇಳಿಸುವುದಕ್ಕಾಗಿ ಸನಕಾದಿಗಳನ್ನು ಪರಮಾತ್ಮನ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಪರಮಾತ್ಮನು ಹಂಸರೂಪದಿಂದ ಬಂದು ಸನಕಾದಿಗಳಿಗೆ ಉತ್ತರ ನೀಡುತ್ತಾನೆ. ಸನಕಾದಿಗಳ ಪ್ರಶ್ನೆಗಳಿಗೆ ಉತ್ತರ ನೀಡುವುದಕ್ಕಾಗಿ ಹಂಸರೂಪದಿಂದ ಬಂದಿದ್ದರಿಂದ ಆ ಹಂಸನಾಮಕ ಪರಮಾತ್ಮನಿಗೆ 'ಉತ್ತರ' ಎಂದು ಹೆಸರು. ಆ ಉತ್ತರನಾಮಕಪರಮಾತ್ಮನಿಂದ ಪ್ರಾರಂಭವಾದದ್ದರಿಂದ [ಉತ್ತರ (ಹಂಸ) ನಾಮಕ ಪರಮಾತ್ಮನೇ ಇದಕ್ಕೆ ಆದಿಯಾದ್ದರಿಂದ (ಮೂಲನಾದದ್ದರಿಂದ)] ಈ ಮಠಕ್ಕೆ ಉತ್ತರಾದಿಮಠ ಎಂದು ಹೆಸರು ಬಂದಿದೆ.

**ಉತ್ತರೋ ಗೋಪತಿರ್ಗೋಪ್ತಾ** ಎಂದು ವಿಷ್ಣುಸಹಸ್ರನಾಮದಲ್ಲಿ ಪರಮಾತ್ಮನಿಗೆ ಉತ್ತರ ಎಂಬ ಹೆಸರನ್ನು ಕಾಣಬಹುದು. ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿ ''**ಉದಿತೋ ಹ ವೈ ಸರ್ವೇಭ್ಯಃ ಪಾಪ್ಮಭ್ಯಃ**'' ಎಲ್ಲ ಪಾಪಗಳಿಂದ,

ದೂರನಾದದ್ದರಿಂದ ಸರ್ವದೋಷದೂರನಾದ್ದರಿಂದ ಪರಮಾತ್ಮನಿಗೆ ಉತ್-ಉತ್ತರ ಎಂಬ ಉತ್ತರನಾಮ್ನದ ವಿವರಣೆಯನ್ನೂ ಕಾಣುತ್ತೇವೆ.[1]

ಹೀಗೆ ಸರ್ವದೋಷದೂರನಾದ, ಸನಕಾದಿಗಳ ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕಾಗಿಯೇ ಅವತರಿಸಿದ ಉತ್ತರ (ಹಂಸ) ನಾಮಕ ಭಗವಂತನೇ ಈ ಮಠಕ್ಕೆ ಆದಿಯಾದ್ದರಿಂದ (ಮೂಲನಾದದ್ದರಿಂದ) ಈ ಮಠಕ್ಕೆ 'ಉತ್ತರಾದಿಮಠ' ಎಂದು ಹೆಸರು ಬಂದಿದೆ.

**4. ಉತ್ತರಾದಿಮಠದ ಪೀಠದಲ್ಲಿ ಶ್ರೀಮದಾಚಾರ್ಯರಿಗಿಂತಲೂ ಪೂರ್ವದಲ್ಲಿ ಯಾವ ಯಾವ ಯತಿಗಳಿದ್ದರು ? ಇದಕ್ಕೆ ಐತಿಹಾಸಿಕ ಮಾಹಿತಿ ಏನಾದರೂ ಇದೆಯೇ ?**

**''ಶ್ರೀಹಂಸಂ ಪರಮಾತ್ಮಾನಂ ವಿರಿಂಚಿಂ ಸನಕಾದಿಕಾನ್ ।**
**ದೂರ್ವಾಸಸೋ ಜ್ಞಾನನಿಧೀನ್ ವೀಂದ್ರವಾಹನತೀರ್ಥಕಾನ್ ॥**
**ಕೈವಲ್ಯತೀರ್ಥಾನ್ ಜ್ಞಾನೇಶಾನ್ ಪರತೀರ್ಥಾನ್ ನ ಮಾಮ್ಯಹಮ್ ।**
**ಸತ್ಯಪ್ರಜ್ಞಾನ್ ಪ್ರಾಜ್ಞತೀರ್ಥಾನ್ ಅನ್ಯಾಂಸ್ತದ್ವಂಶಜಾನಪಿ ॥''**

ಎಂಬ ನಿತ್ಯಪಠಿಸುವ ಗುರುಪರಂಪರಾಸ್ತೋತ್ರದಲ್ಲಿ ಶ್ರೀಮದಾಚಾರ್ಯರಿಗಿಂತಲೂ ಮೊದಲು ಉತ್ತರಾದಿಮಠದ ಪೀಠದಲ್ಲಿ ಇದ್ದವರ ಹೆಸರುಗಳು ಅಂದರೆ ಹಂಸನಾಮಕ ಪರಮಾತ್ಮ, ಬ್ರಹ್ಮದೇವರು, ಸನಕಾದಿಗಳು, ದೂರ್ವಾಸರು ಮೊದಲಾದವರ ಹೆಸರುಗಳು ಪ್ರಾಯಃ ಸಿಕ್ಕಿವೆ.

---

3.1 **''ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ ।''** **(ಛಾಂದೋಗ್ಯ ಅ-1 ಖಂ-6 ಮಂ-7)**

**ವಿವರಣೆ:** ಸರ್ವಪಾಪರಹಿತನಾದ್ದರಿಂದ, ನಿರ್ದೋಷನಾದ್ದರಿಂದ ಪರಮಾತ್ಮನಿಗೆ ಉತ್ ಎಂದು ಹೆಸರು. ಹಾಗಾದರೆ ಉತ್ತರ ಏಕೆ ? ಲಕ್ಷ್ಮೀದೇವಿಯೂ ಅಜ್ಞಾನಾದಿ-ದೋಷರಹಿತಳೇ ಅರ್ಥಾತ್ ನಿರ್ದೋಷಳೇ ಆಗಿದ್ದಾಳೆ. ಆದರೆ ಪಾರತಂತ್ರ್ಯ ಎಂಬ ದೋಷ ಇದೆ. ಪರಮಾತ್ಮನಿಗೆ ಮಾತ್ರ ಆ ಪಾರತಂತ್ರ್ಯ ಎಂಬ ದೋಷವೂ ಇಲ್ಲ.

ಮತ್ತು ಲಕ್ಷ್ಮೀದೇವಿಯ ನಿರ್ದೋಷತ್ವವು ಪರಮಾತ್ಮನ ಅಧೀನವಾದದ್ದು. ಆದರೆ ಪರಮಾತ್ಮನ ನಿರ್ದೋಷತ್ವವು ಮಾತ್ರ ಪರಮಾತ್ಮನ ಅಧೀನವಾದದ್ದು. ಹೀಗೆ ಪಾರ-ತಂತ್ರ್ಯ ಎಂಬ ದೋಷವೂ ಇಲ್ಲದೇ ಸ್ವಾತಂತ್ರ್ಯೇಣ ನಿರ್ದೋಷನಾದ ಪರಮಾತ್ಮನು ನಿರ್ದೋಷಳಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾದ್ದರಿಂದ, ಪರಮಾತ್ಮನು ಕೇವಲ ಉತ್ (ನಿರ್ದೋಷಿ) ಅಲ್ಲ. 'ಉತ್ತರ' (ನಿರ್ದೋಷರಲ್ಲಿ ಉತ್ತಮ) ಆಗಿದ್ದಾನೆ ಎಂದು ಅಭಿಪ್ರಾಯ.

**5. ಮಹಾಭಾರತದ ಕಾಲದಲ್ಲಿ ಉತ್ತರಾದಿಮಠದ ಪೀಠದಲ್ಲಿ ಯಾರಿದ್ದರು ?**

**''ದೂರ್ವಾಸಸೋ ಜ್ಞಾನನಿಧೀನ್''**

ಎಂದು ಹೇಳಿದಂತೆ ಮಹಾತಪಸ್ವಿಗಳಾದ, ಜ್ಞಾನನಿಧಿಗಳಾದ ದೂರ್ವಾಸರು ಮಹಾಭಾರತದ ಕಾಲದಲ್ಲಿ ಈ ಉತ್ತರಾದಿಮಠದ ಪೀಠದಲ್ಲಿದ್ದರು.

**6. ಶ್ರೀಮಠದ ರಾಮದೇವರ ಪ್ರತಿಮೆಯು ಬ್ರಹ್ಮಕರಾರ್ಚಿತವಾದ್ದರಿಂದ ಅಪಾರ ಸನ್ನಿಧಾನವಿದೆ ಎಂದು ಹೇಳುವುದಾದರೆ, ಇದೇ ಪ್ರತಿಮೆಯೇ ಸಾಕ್ಷತ್ ಮಹಾಲಕ್ಷ್ಮೀ ಕರಾರ್ಚಿತವಾಗಿದ್ದರೆ, ಸಾಕ್ಷಾತ್ ರಾಮಕರಾರ್ಚಿತ-ವಾಗಿದ್ದರೆ ಇದರಲ್ಲಿ ಇನ್ನೂ ಅಪಾರ ಸನ್ನಿಧಾನವಿರುತ್ತಿತ್ತು ಅಲ್ಲವೇ ?**

**'ಪ್ರತಿಮಾಯಾಂ ತು ಸಾನ್ನಿಧ್ಯಂ ಅರ್ಚಕಸ್ಯ ತಪೋಬಲಾತ್'** ಎಂದು ಹೇಳಿದಂತೆ ಪ್ರತಿಮೆಯಲ್ಲಿ ಸಾನ್ನಿಧ್ಯವು ಅದರ ಪ್ರತಿಷ್ಠಾಪಕರ / ಮೂಲ ಅರ್ಚಕರ ಯೋಗ್ಯತೆಯಿಂದ ಬರುತ್ತದೆಯಾದ್ದರಿಂದ, ಬ್ರಹ್ಮಕರಾರ್ಚಿತ-ವಾದ ಪ್ರತಿಮೆಯು ಲಕ್ಷ್ಮೀಕರಾರ್ಚಿತವೂ, ಸಾಕ್ಷಾತ್ ರಾಮಕರಾರ್ಚಿತವೂ ಆದರೆ ಅದರಲ್ಲಿ ಅನಂತಸನ್ನಿಧಾನವಿರುತ್ತಿತ್ತು ಎನ್ನುವುದು ಸತ್ಯವೇ.

ಆದರೆ, ಶ್ರೀಮಠದ ರಾಮದೇವರ ಪ್ರತಿಮೆಯು ಕೇವಲ ಬ್ರಹ್ಮಕರಾರ್ಚಿತ ಎಂದು ತಿಳಿಯುವುದು ತಪ್ಪು. ಯಾಕೆಂದರೆ - ಈ ಮೂಲರಾಮದೇವರ ಪ್ರತಿಮೆ, ಕೇವಲ ಬ್ರಹ್ಮಕರಾರ್ಚಿತವಾದದ್ದಲ್ಲ. ಕಿಂತು ಸೀತಾದೇವಿಯೂ ಇದನ್ನು ಮುಟ್ಟಿ ಪೂಜಿಸಿದ್ದಾಳೆ. ಸ್ವತಃ ರಾಮದೇವರೂ ಇದನ್ನು ಮುಟ್ಟಿ ಪೂಜಿಸಿದ್ದಾರೆ. ಅನಂತಗುಣಪೂರ್ಣನಾದ ಪರಮಾತ್ಮನೇ (ರಾಮದೇವರೇ) ಪೂಜಿಸಿದ ಪ್ರತಿಮೆಯಿದು.

ಅದಕ್ಕೆ ವಾಸಿಷ್ಠರಾಮಾಯಣದಲ್ಲಿ ಇತಿಹಾಸವಿದೆ.[1] ಈ ರಾಮ-ಸೀತೆಯರ ಪ್ರತಿಮೆಗಳು ಇಕ್ಷ್ವಾಕುಕುಲದ ಕುಲದೈವ. ರಾಮ ಹಾಗೂ ಸೀತಾದೇವಿಯರ ಅವತಾರ ಪ್ರತಿಕಲ್ಪದಲ್ಲಿಯೂ ಆಗುತ್ತದೆ. ಅದರಂತೆ ಕಳೆದಕಲ್ಪದಲ್ಲಿಯೂ ರಾಮ-ಸೀತೆಯರ ಅವತಾರ ಆಗಿದೆ. ಆ

---

6.1 ''ರಾಮಃ - ರಸ್ಯ ರಶಬ್ದವಾಚ್ಯಸ್ಯ ।'' ''ರಶ್ಚ ರಾಮೇಽನಿಲ'' ಇತಿ ವರರುಚಿಃ । ರಾಮಸ್ಯ ಬ್ರಹ್ಮಪೂಜಿತಸ್ಯ ವೈವಸ್ವತೇಕ್ಷ್ವಾಕುಕುಲದೇವಸ್ಯ ಸೀತಾರಾಮಸ್ಯ ಪ್ರಸಾದಾತ್ । ಆ - ಸಮ್ಯಕ್ ಮಾ-ನಿರ್ಮಾಣಂ । ದಶರಥಾತ್ ಕೌಸಲ್ಯಾಯಾಂ ಪ್ರಾದುರ್ಭಾವಃ । ಯಸ್ಯ ಸಃ ರಾಮಃ । ತದುಕ್ತಂ ವಾಸಿಷ್ಠರಾಮಾಯಣೇ ॥

ರಾಮ-ಸೀತೆಯರ ಅವತಾರದ ನೆನಪಿಗಾಗಿ ಸಾಕ್ಷಾತ್ ಬ್ರಹ್ಮಕರಾರ್ಚಿತವಾದ ಆ ಪ್ರತಿಮೆಗಳು ಇಕ್ಷ್ವಾಕುವಂಶದಲ್ಲಿದ್ದವು. ನಿತ್ಯಪೂಜೆಗಾಗಿ ಹಾಗೂ ಸ್ಮರಣೆ-ಗಾಗಿ ಇಟ್ಟುಕೊಂಡಿದ್ದ ಬ್ರಹ್ಮಕರಾರ್ಚಿತವಾದ ಆ ಪ್ರತಿಮೆಗಳಿಗೆ ಇದ್ದ 'ರಾಮ' 'ಸೀತಾ' ಎಂಬ ಹೆಸರುಗಳನ್ನು ದಶರಥಮಹಾರಾಜ ತನ್ನ ಮಗನಿಗೆ-ಸೊಸೆಗೆ ಇಟ್ಟದ್ದು. ದಶರಥರಾಜನಂತೆ ರಾಮದೇವರೂ ಆ ಪ್ರತಿಮೆಗಳನ್ನು ಪೂಜೆ ಮಾಡಿ ಅದರಲ್ಲಿ ಅನಂತಸನ್ನಿಧಾನವನ್ನು ಇಟ್ಟಿದ್ದಾರೆ.

ಅಂದಮೇಲೆ ''ಬ್ರಹ್ಮಕರಾರ್ಚಿತವಾಗುವುದಕ್ಕಿಂತಲೂ ಲಕ್ಷ್ಮೀ-ಕರಾರ್ಚಿತವಾಗಿದ್ದರೆ ಸಾಕ್ಷಾತ್ ರಾಮಕರಾರ್ಚಿತವಾಗಿದ್ದರೆ ಅಪಾರ

---

ಸೀತೋವಾಚ -

ಪೂರ್ವಂ ವಿವಸ್ವತೇ ದತ್ತಾ ಬ್ರಹ್ಮಣಾ ಪರಮೇಷ್ಠಿನಾ ।
ಸ್ವಯಂವ್ಯಕ್ತಾ ಮಹಾಭಾಗ ಪ್ರತಿಮಾ ತೇನ ಪೂಜಿತಾ ॥
ರಘುನಾಥಸ್ಯ ಸರ್ವಸ್ಯ ಸರ್ವಲಕ್ಷಣಸಂಯುತಾ ।
ವಿವಸ್ವಾನ್ ಮನವೇ ಪ್ರಾದಾತ್ ಸುತಾಯ ಸುತವತ್ಸಲಃ ॥
ವೈವಸ್ವತಾಯ ಕಾಕುಸ್ಥಃ ಸ್ವಸ್ಮೈ ದತ್ತಾಂ ಸ್ವಯಂಭುವಾ ।
ವೈವಸ್ವತಮುಖಾನಾಂ ಹಿ ಯೋ ಮೂಲರಘುಪುಂಗವಃ ॥
ಕುಲದೈವಂ ರಾಮದೇವಂ ರಾಜರಾಜೇಶ್ವರಾರ್ಚಿತಮ್ ।
ಸ್ವಯಂವ್ಯಕ್ತಂ ಮಹೀಪಾಲ ಬ್ರಹ್ಮಣೋ ದೇವತಾರ್ಚನಮ್ ।
ಇಕ್ಷ್ವಾಕುಪ್ರಮುಖೈಃ ಸಮ್ಯಕ್ ಪೂಜಿತಂ ಮಾನವೋತ್ತಮೈಃ ।
ಯಂ ಪೂಜಯತಿ ದೇವೇಶ ತ್ವಂ ಮೂಲರಘುಪುಂಗವಮ್ ॥
ಸೀತಯಾ ಸಹಿತಂ ಮಹ್ಯಂ ಪ್ರದೇಹಿ ಪುರುಷೋತ್ತಮ ।
ಪೂಜಯೇಯಂ ಅಹಂ ಭರ್ತಃ ತ್ವದನುಗ್ರಹಕಾಮ್ಯಯಾ ॥
ಯಂ ಮೇ ರಾಜಾ ದಶರಥಃ ಶ್ವಶುರೋಽಪೂಜಯಚ್ಚಿರಮ್ ।
ಚಕಾರ ನಾಮಕರಣಂ ಯಸ್ಯ ದೇವಸ್ಯ ನಾಮತಃ ॥
ತವ ರಾಮೇತಿ ರಾಜೇಂದ್ರ ಮಾಮಸೂದ್ವಾಹಯನ್ ಪರಮ್ ।
ಸೀತೇತಿ ಜನಕಃ ಪ್ರಾಹ ಭಕ್ತಃ ಸೀತಾಪತೇಃ ಸ ಹಿ ॥

ಇತಿ ರಾಮಂ ಪ್ರತಿ ಸೀತಾವಚನಮ್ । ತತ್ರೈವ -

ಚಿರಂ ದಶರಥೋ ರಾಜಾ ಶ್ವಶುರಸ್ತೇ ವರಾನನೇ ।
ಸಂಪೂಜ್ಯ ತನಯಂ ಲೇಭೇ ದೇವಮೇವಂ ರಘೂತ್ತಮಮ್ ॥

ಚಕಾರ ನಾಮ ರಾಮೇತಿ ಜ್ಯೇಷ್ಠಪುತ್ರಸ್ಯ ಭಾಮಿನಿ ॥
ಇತಿ ಸೀತಾಂ ಪ್ರತಿ ವಸಿಷ್ಠವಚನಮ್ ॥ 5 ॥''

(ಸತ್ಯಪರಾಯಣತೀರ್ಥ ವಿರಚಿತಾ - ರಾಮಶಬ್ದಾರ್ಥರತ್ನಮಾಲಾ)

ಸನ್ನಿಧಾನವಿರುತ್ತಿತ್ತಲ್ಲವೇ ?'' ಎನ್ನುವುದು ಕೇವಲ ಪ್ರಶ್ನೆಯಲ್ಲ. ಕಿಂತು ಇದ್ದ ಸತ್ಯಸಂಗತಿ. ಬ್ರಹ್ಮಕರಾರ್ಚಿತವಾದ ಈ ಪ್ರತಿಮೆ ಸೀತಾಕರಾರ್ಚಿತವೂ, ಸಾಕ್ಷಾತ್ ರಾಮಕರಾರ್ಚಿತವೂ ಆಗಿದ್ದರಿಂದ ಇದರಲ್ಲಿ ಅನಂತ-ಸನ್ನಿಧಾನವಿರುವುದರಲ್ಲಿ ಸಂದೇಹವಿಲ್ಲ.

**7. ರಾಮ-ಸೀತೆಯರ ಪ್ರತಿಮೆಗಳು ಸಾಕ್ಷಾತ್ ರಾಮಕರಾರ್ಚಿತವಾಗಿದೆ ಎನ್ನುವುದಾದರೆ ''ಬ್ರಹ್ಮಕರಾರ್ಚಿತ'' ಎಂದು ಏಕೆ ಹೇಳುವುದು ?**

ಇದನ್ನು ಅನೇಕ ರೀತಿಯಂದ ಅರ್ಥೈಸುವುದಾದರೆ -

1. ತಮ್ಮ ಕುಲದೈವವಾದ ಈ ಪ್ರತಿಮೆಗಳನ್ನು ಸಾಕ್ಷಾತ್ ರಾಮಚಂದ್ರನೇ ಕೈಮುಟ್ಟಿ ಪೂಜೆ ಮಾಡಿದ್ದು ಸತ್ಯವೇ. ಆದರೆ ಈ ಪ್ರತಿಮೆಗಳನ್ನು ಮೊದಲು ಪೂಜೆ ಮಾಡಿದ್ದು ಬ್ರಹ್ಮದೇವರು. ಆನಂತರ ಅವುಗಳ ಅರ್ಚನ-ಪರಂಪರೆಯಲ್ಲಿ ಮಧ್ಯದಲ್ಲಿ ರಾಮದೇವರು ಪೂಜೆ ಮಾಡಿದ್ದು. ಹಾಗಾಗಿ ಮೊದಲು ಪೂಜೆ ಮಾಡಿದ ವಿವಕ್ಷೆಯಿಂದ ''ಬ್ರಹ್ಮಕರಾರ್ಚಿತ'' ಎಂದು ಹೇಳುವ ಪದ್ಧತಿ.

2. **''ಮಮ ಯೋನಿರ್ಮಹದ್‌ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್''** ಎಂದು ಹದಿನಾಲ್ಕನೇ ಅಧ್ಯಾಯದ ಗೀತೆಯಲ್ಲಿ ಹೇಳುವಂತೆ ಬ್ರಹ್ಮ ಎಂದರೆ ಮಹಾಲಕ್ಷ್ಮೀದೇವಿ. ಬ್ರಹ್ಮಕರಾರ್ಚಿತ ಎಂದರೆ ಸೀತಾಕರಾರ್ಚಿತ ಎಂದರ್ಥ.

3. **''ರಾಮ ಏವ ಪರಂಬ್ರಹ್ಮ ರಾಮ ಏವ ಪರಂತಪಃ ।**
**ರಾಮ ಏವ ಪರಂ ತತ್ವಂ ಶ್ರೀರಾಮೋ ಬ್ರಹ್ಮ ತಾರಕಮ್ ॥''**

ಎಂಬುದಾಗಿ ರಾಮರಹಸ್ಯೋಪನಿಷತ್ತಿನಲ್ಲಿ (ಅ-1 ಶ್ಲೋ-6) ಹೇಳಿದಂತೆ ಬ್ರಹ್ಮ ಎಂದರೆ ರಾಮದೇವರು ಎಂದರ್ಥ. ಬ್ರಹ್ಮಕರಾರ್ಚಿತ ಎಂದರೆ ಸಾಕ್ಷಾತ್ ರಾಮಕರಾರ್ಚಿತ ಎಂದರ್ಥ.

ಆದ್ದರಿಂದ ಬ್ರಹ್ಮಕರಾರ್ಚಿತ ಎಂದರೆ ಕೇವಲ ಚತುರ್ಮುಖ ಬ್ರಹ್ಮಕರಾರ್ಚಿತ ಎಂದರ್ಥವಲ್ಲ. ಚತುರ್ಮುಖಬ್ರಹ್ಮಕರಾರ್ಚಿತ ಹಾಗೂ ಲಕ್ಷ್ಮೀ(ಸೀತಾ) ಕರಾರ್ಚಿತ ಮತ್ತು ಸಾಕ್ಷಾತ್ ರಾಮ-ಕರಾರ್ಚಿತ ಎಂದರ್ಥ.

**8. ರಾಮ-ಸೀತೆಯರ ಈ ಪ್ರತಿಮೆಗಳು ''ಚತುರ್ಯುಗಮೂರ್ತಿ'' ಎಂದರೆ ಹೇಗೆ ನಂಬುವುದು ? ಅಷ್ಟು ಬಹಳ ಹಿಂದಿನ ಕಾಲದ ಪ್ರತಿಮೆಗಳು ಈಗ ಇರಲು ಹೇಗೆ ಸಾಧ್ಯ ?**

ಪರಮಾತ್ಮನು ತನ್ನ ಅಚಿಂತ್ಯ-ಅದ್ಭುತ ಸನ್ನಿಧಾನವನ್ನು ಇಟ್ಟಂತಹ ಪ್ರತಿಮೆಗಳಿವು. ಪರಮಾತ್ಮನು ಯಾವ ವಸ್ತುವನ್ನು 'ರಕ್ಷಿಸಬೇಕು' ಎಂದು ಇಚ್ಛಿಸುತ್ತಾನೆ, ಅದನ್ನು ಹಾಗೆ ರಕ್ಷಿಸಿದಲ್ಲಿ ಏನು ಆಶ್ಚರ್ಯ ?[1]

---

8.1 **ವಿವರಣೆ** : ಸ್ಕಾಂದಮಹಾಪುರಾಣದಲ್ಲಿ ಒಂದು ತಾಮ್ರಶಾಸನದ ಉಲ್ಲೇಖವನ್ನು ಕಾಣುತ್ತೇವೆ. ಸ್ವತಃ ರಾಮದೇವರೇ ಬರೆದುಕೊಟ್ಟ ತಾಮ್ರಶಾಸನ ಅದು. ಒಂದು ಆಶ್ಚರ್ಯವೆಂದರೆ - ಆ ತಾಮ್ರಶಾಸನವು ಅನೇಕಯುಗಗಳಿಂದ ಅಕ್ಷಯವಾಗಿಯೇ ಉಳಿದು ಬಂದಿರುವುದು. ಬಂಗಾರ ಮೊದಲಾದ ಎಲ್ಲ ಲೋಹಗಳೂ ನಾಶವಾಗು-ವಾಗ ಈ ತಾಮ್ರಶಾಸನವು ಮಾತ್ರ ನಾಶವಾಗದಿರಲು ಏನು ಕಾರಣ ? ಈ ಪ್ರಶ್ನೆಗೆ ಸ್ಕಾಂದಪುರಾಣವೇ ಉತ್ತರಿಸುತ್ತದೆ.

''ವೇದ, ಪುರಾಣಗಳು, ಭಾರತ, ಧರ್ಮಶಾಸ್ತ್ರ ಹೀಗೆ ಸಮಗ್ರವಾಙ್ಮಯಗಳಿಂದಲೂ ಪ್ರತಿಪಾದ್ಯನಾದವನು ವಿಷ್ಣು. ನಾನಾದೇಶಗಳಲ್ಲಿ, ನಾನಾವಿಧ ಜನಾಂಗದವರಿಂದ ಪೂಜ್ಯನಾದವನು ವಿಷ್ಣುವೇ. ಅಂತಹ ವಿಷ್ಣುವೇ ದುಷ್ಟಜನಸಂಹಾರಕ್ಕಾಗಿ, ಧರ್ಮ-ಸಂರಕ್ಷಣೆಗಾಗಿ ಶ್ರೀರಾಮನಾಗಿ ಅವತರಿಸಿದ್ದಾನೆ. ಅಂತಹ ಅಚಿಂತ್ಯಶಕ್ತಿಸಂಪನ್ನನಾದ ಶ್ರೀರಾಮನಿಂದ ಲಿಖಿತವಾದ ಶಾಸನವಾದ್ದರಿಂದ ಅನೇಕಯುಗಗಳವರೆಗೆ ಅಕ್ಷಯವಾಗಿ ಉಳಿಯಲು ಸಾಧ್ಯವಾಗಿದೆ.''

ಈ ರೀತಿಯಾಗಿ ಶ್ರೀರಾಮನು ಸ್ವತಃ ಬರೆದುಕೊಟ್ಟ ಆ ತಾಮ್ರಶಾಸನವೇ ಅನೇಕಯುಗಳವರೆಗೆ ಉಳಿದಿದೆ ಎಂದಮೇಲೆ ಸ್ವತಃ ಶ್ರೀರಾಮ ಹಾಗೂ ಲಕ್ಷ್ಮೀ-ಬ್ರಹ್ಮಾದಿಗಳಿಂದ ಬಹಳದಿನಗಳವರೆಗೆ ಪೂಜಿಸಲ್ಪಟ್ಟ, ಪರಮಾತ್ಮನು ತನ್ನ ಅನಂತ-ಸನ್ನಿಧಾನವನ್ನು ಇಟ್ಟಿರುವ, ಶ್ರೀಮಠದ ತಾಮ್ರದ ಮೂಲರಾಮದೇವರ ಸೀತೆಯ ಪ್ರತಿಮೆ ಅನೇಕಯುಗಗಳಿಂದ ರಕ್ಷಿತವಾಗಿ ಉಳಿದಿವೆ ಎನ್ನುವುದರಲ್ಲಿ ಏನು ಆಶ್ಚರ್ಯ?

''ಶಾಸನಂ ತತ್ರ ರಾಮಸ್ಯ ರಾಘವಸ್ಯ ಚ ನಾಮತಃ ।  
ಶೃಣು ತಾಮ್ರಾಶ್ರಯಂ ತತ್ರ ಲಿಖಿತಂ ಧರ್ಮಶಾಸ್ತ್ರತಃ ॥  
ಮಹಾಶ್ಚರ್ಯಕರಂ ತಚ್ಚ ಹ್ಯನೇಕಯುಗಸಂಸ್ಥಿತಮ್ ।  
ಸರ್ವೋ ಧಾತುಃ ಕ್ಷಯಂ ಯಾತಿ ಸುವರ್ಣಂ ಕ್ಷಯಮೇತಿ ಚ ॥  
ಪ್ರತ್ಯಕ್ಷಂ ದೃಶ್ಯತೇ ಪುತ್ರ ದ್ವಿಜ ಶಾಸನಮಕ್ಷಯಮ್ ।  
ಅವಿನಾಶೋ ಹಿ ತಾಮ್ರಸ್ಯ ಕಾರಣಂ ತತ್ರ ವಿದ್ಯತೇ ॥  
ವೇದೋಕ್ತಂ ಸಕಲಂ ಯಸ್ಮಾದ್ವಿಷ್ಣುರೇವ ಹಿ ಕಥ್ಯತೇ ।  
ಪುರಾಣೇಷು ಚ ವೇದೇಷು ಧರ್ಮಶಾಸ್ತ್ರಸ್ಯ ಭಾರತ ॥  
ಸರ್ವತ್ರ ಗೀಯತೇ ವಿಷ್ಣುಃ ನಾನಾಭಾವಸಮಾಶ್ರಯಃ ।  
ನಾನಾದೇಶೇಷು ಧರ್ಮೇಷು ನಾನಾಧರ್ಮನಿಷೇವಿಭಿಃ ॥

ಅನೇಕ ವಸ್ತುಗಳು ಹಾಗೆ ಬಹುಕಾಲದವರೆಗೆ ಇರುವುದನ್ನುಕಾಣುತ್ತೇವೆ. ಉದಾಹರಣೆಗೆ - ನರಸಿಂಹದೇವರ / ಹನುಮಂತದೇವರ ಇನ್ನೂ ಅನೇಕ ಪ್ರತಿಮೆಗಳು ವಸಿಷ್ಠಕರಾರ್ಚಿತ - ಜನಮೇಜಯಕರಾರ್ಚಿತ - ಯುಧಿಷ್ಠಿರಕರಾರ್ಚಿತ ಎಂಬುದಾಗಿ ಇತಿಹಾಸದಲ್ಲಿ ಕಾಣುತ್ತೇವೆ. ಸಾವಿರಾರು ವರ್ಷಗಳಿಂದ, ಯುಗಾಂತರದಿಂದ ಇರುವುದನ್ನು ಕೇಳುತ್ತೇವೆ, ಕಾಣುತ್ತೇವೆ. ಅವುಗಳಂತೆ ಇವುಗಳೂ ಐತಿಹಾಸಿಕವಾಗಿ ನಂಬಲಾರ್ಹವಾದವುಗಳೇ.

ವೈಜ್ಞಾನಿಕವಾಗಿ ದೃಷ್ಟಾಂತ ಕಾಣಬೇಕಾದರೆ - ಫಾಸಿಲ್ಸ್ (ಎಲುಬು)ಗಳು ಇರುತ್ತವೆ. ಲಕ್ಷ ಲಕ್ಷ ವರ್ಷಗಳಾದರೂ ಅವುಗಳು ಹಾಗೇ ಉಳಿದಿರುತ್ತದೆ. ಅವುಗಳನ್ನು ನಿರ್ಮಿಸಿದವನೂ ಪರಮಾತ್ಮನೇ. ಅಂತಹ ಫಾಸಿಲ್ಸ್ (ಎಲುಬು)ಗಳನ್ನು ನಿರ್ಮಿಸಿದ ಪರಮಾತ್ಮನೇ ಲೋಹಗಳನ್ನು ನಿರ್ಮಿಸಿದ್ದಾನೆ. ಆ ಹೊಲಸು ಎಲುಬುಗಳೇ ಲಕ್ಷ ಲಕ್ಷ ವರ್ಷಗಳಾದರೂ ಹಾಗೆಯೇ ಇರುತ್ತವೆ ಎಂದಮೇಲೆ ಪರಮಾತ್ಮನ ಅದ್ಭುತಸನ್ನಿಧಾನವುಳ್ಳ ಪ್ರತಿಮೆಗಳು ಅಂದಿನಿಂದ ಇವೆ ಎಂದರೆ ಆಶ್ಚರ್ಯವೇನಿಲ್ಲ.

ಆ ಭಗವಂತ ಮುಂದೆ ನಿಮ್ಮಂತಹ ಅನಂತಭಕ್ತರಿಗೆ ತನ್ನ ದರ್ಶನ ಮಾಡಿಸಿ ಅನುಗ್ರಹಿಸಬೇಕು ಎಂಬ ಇಚ್ಛೆ ಹಾಗೂ ಅಚಿಂತ್ಯ- ಶಕ್ತಿಯನ್ನು ಉಪಯೋಗ ಮಾಡಿದರೆ ಲಕ್ಷವರ್ಷಗಳಾದರೇನು ? ಕೋಟಿವರ್ಷ-ಗಳಾದರೇನು ? ಅದಕ್ಕೆ ಯಾವ ವಿಧವಾದ ವಿಕಾರವಾಗಲು ಸಾಧ್ಯವಿಲ್ಲ. ಅದು ಭಗವಂತನ ಮಹಿಮೆ ಎಂಬುದಾಗಿ ತಿಳಿಯಬೇಕೇ ಹೊರತು ಅದನ್ನು ಮಾನವೀಯದೃಷ್ಟಿಯಿಂದ (ನೋಡಿದರೆ) ವಿಚಾರ ಮಾಡಿದರೆ ಅದಕ್ಕೆ ಅರ್ಥವಾಗುವುದಿಲ್ಲ.

★★★

---

ನಾನಾಭೇದೈಸ್ತು ಸರ್ವತ್ರ ವಿಷ್ಣುರೇವೇತಿ ಚಿಂತ್ಯತೇ ।
ಅವತೀರ್ಣಃ ಸ ವೈ ಸಾಕ್ಷಾತ್ಪುರಾಣಪುರುಷೋತ್ತಮಃ ॥
ದೇವವೈರಿವಿನಾಶಾಯ ಧರ್ಮಸಂರಕ್ಷಣಾಯ ಚ ।
**ತೇನೇದಂ ಶಾಸನಂ ದತ್ತಮವಿನಾಶಾತ್ಮಕಂ ಸುತ ॥**
ಯಸ್ಯ ತಾಪಾದ್ದ್ರುಪದಸ್ತಾರಿತಾ ಜಲಮಧ್ಯತಃ
ವಾನರೈರ್ವೇಷ್ಟಿತಾ ಲಂಕಾ ಹೇಲಯಾ ರಾಕ್ಷಸಾ ಹತಾಃ ॥
..... ಚತುರ್ದಶಸಹಸ್ರಾಣಿ ಜವೇನ ನಿಹತಾ ರಣೇ ।
**ತೇನೇದಂ ಶಾಸನಂ ದತ್ತಮಕ್ಷಯಂ ನ ಕಥಂ ಭವೇತ್ ॥"**

(ಸ್ಕಾಂದಪುರಾಣ-ಬ್ರಾಹ್ಮಖಂಡೇ ದ್ವಿತೀಯಂ ಧರ್ಮಾರಣ್ಯಖಂಡಂ ಅಧ್ಯಾಯ-34 ಶ್ಲೋ-5-15)

# ತಪ್ತಮುದ್ರಾಧಾರಣೆ ವಿಭಾಗ

## 1. ತಪ್ತಮುದ್ರಾಧಾರಣೆ ಏಕೆ ಮಾಡಿಸಿಕೊಳ್ಳಬೇಕು ?

ಮುದ್ರಾಧಾರಣೆ ಏಕೆ ಮಾಡಿಸಿಕೊಳ್ಳಬೇಕು ಎಂಬ ಪ್ರಶ್ನೆಗೆ ಎರಡು - ಮೂರು ರೀತಿಗಳಿಂದ ಉತ್ತರ ತಿಳಿಯಬೇಕಿದೆ.

1. ಮೊದಲನೆಯದಾಗಿ, ದೇಹದ ಶುದ್ಧಿಗಾಗಿ ಹಾಗೂ ನಾವು ಮಾಡಿದ ಪುಣ್ಯದ ಉಳಿವಿಗಾಗಿ ಮುದ್ರಾಧಾರಣೆ ಆಗಬೇಕು. ಶಾಸ್ತ್ರವು ಅರ್ಥಾತ್ ಋಗ್ವೇದಮಂತ್ರವು ನಮಗೆ ಆದೇಶಿಸುತ್ತದೆ.

**''ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।**
**ಅತಪ್ತತನೂರ್ನತದಾಮೋ ಅಶ್ನುತೇ ಶ್ರುತಾಸ ಇದ್ವಹಂತಸ್ತತ್ ಸಮಾಷತ ॥''**

ಅಂದರೆ - ಪವಿತ್ರದಿಂದ ಅರ್ಥಾತ್ ತಪ್ತವಾದ (ಕಾಯ್ದ) ಸುದರ್ಶನಚಕ್ರ-ದಿಂದ ಯಾರು ದೇಹವನ್ನು ಸಂಸ್ಕಾರಕ್ಕೆ ಒಳಪಡಿಸುವುದಿಲ್ಲ ಅವರ ದೇಹ ಶುದ್ಧವಾಗುವುದಿಲ್ಲ.[1] ಅವರು ಮಾಡಿದ ಪುಣ್ಯ ಅವರಿಗೆ ಉಳಿಯುವುದಿಲ್ಲ. ಅರ್ಥಾತ್ ಅವರು ಏನೇ ಕರ್ಮಗಳನ್ನು ಆಚರಿಸಿದರೂ ಅದು ನಿಷ್ಫಲವಾಗುತ್ತದೆ.[2] ಆದ್ದರಿಂದ ಮಾಡಿದ ಪುಣ್ಯಗಳನ್ನು ಉಳಿಸಿಕೊಳ್ಳ-ಬೇಕಾದರೆ ಈ ವಿಧವಾದ ಸಂಸ್ಕಾರವನ್ನು ದೇಹಕ್ಕೆ ಮಾಡಲೇಬೇಕು.

---

1.1 ''ಯದಿ ಚಕ್ರಂ ಭುಜೇ ನ ಸ್ಯಾತ್ತಪ್ತಶಂಖೋಽಪಿ ಯಸ್ಯ ಹಿ ।
ಪ್ರಾಯಶ್ಚಿತ್ತೇನ ಚೀರ್ಣೇನ ಯಥೋಕ್ತವಿಧಿನಾಽಪಿ ವಾ ॥
ನಿಷ್ಕೃತಿರ್ನೈವ ಪಾಪಸ್ಯ ಯಾವಚ್ಚಕ್ರಂ ನ ಧಾರಯೇತ್ ।
**ತಸ್ಮಾತ್ ಸ್ವಶುದ್ಧಿಕಾಮೇನ ಮತ್ಪ್ರೀತೇರಪಿ ವಾಂಛಯಾ ॥''**
(ವರಾಹಪುರಾಣ - ಚಾತುರ್ಮಾಸಮಾಹಾತ್ಮ್ಯೇ) ಅ-5 ಶ್ಲೋ-12/13)

1.2 ''ಅಗ್ನಿತಪ್ತಂ ಪವಿತ್ರಂ ಚ ಧೃತ್ವಾ ವೈ ಭುಜಮೂಲಯೋಃ ।
ತ್ಯಕ್ತ್ವಾ ಯಮಪುರಂ ಘೋರಂ ಯಾತಿ ವಿಷ್ಣೋಃ ದರಂ ಪದಮ್ ॥
**ಚಕ್ರಚಿಹ್ನವಿಹೀನಸ್ತು ಯಃ ಪೂಜಯತಿ ಕೇಶವಮ್ ।**
**ತತ್ಸರ್ವಂ ವಿಫಲಂ ಯಾತಿ ಪೂಜಾಮಂತ್ರಜಪಾದಿಕಮ್ ॥**

ಅನೇಕ ಒಳ್ಳೆಯ ಕೆಲಸಗಳನ್ನು ಮಾಡಿದರೂ ಸಹ ಅವುಗಳ ಫಲವನ್ನು ಪಡೆಯಬೇಕಾದರೆ ಕೆಲವು ನಿಯಮಗಳನ್ನು ಪರಿಪಾಲಿಸಬೇಕಾಗುತ್ತದೆ. ಉದಾಹರಣೆಗೆ - ಬೇಕಾದಷ್ಟು ಓದಿರಬಹುದು. ಬೇಕಾದಷ್ಟು ಪಾಠ ಕೇಳಿರಬಹುದು. ಆದರೆ ಇಂತಹ ದಿವಸ ಇಂತಹ ಸಮಯಕ್ಕೆ ಇಂತಹ ಸ್ಥಳದಲ್ಲಿ ಕುಳಿತು ಪರೀಕ್ಷೆ ಬರೆದರೆ ಮಾತ್ರ ಪ್ರಮಾಣಪತ್ರ ಕೊಡಲಾಗುತ್ತದೆ ಎಂಬ ನಿಯಮ ಶಾಲಾ-ಕಾಲೇಜುಗಳಲ್ಲಿ ಇದೆ. ಆ ನಿಯಮವನ್ನು ಪರಿ ಪಾಲಿಸಿದಾಗ ಮಾತ್ರ ಫಲ (ಪ್ರಮಾಣಪತ್ರ) ಸಿಗುತ್ತದೆ. ಇಲ್ಲದಿದ್ದರೆ ಎಷ್ಟು ಓದಿದ್ದರೇನು ? ಎಷ್ಟು ಪಾಠ ಕಲಿತಿದ್ದರೇನು ? ಅದು ವ್ಯರ್ಥವೇ.

ಅದರಂತೆ ನಾವು ಧರ್ಮಗಳನ್ನು ಆಚರಿಸುವಾಗ ''ಯಾರು ತಪ್ತಮುದ್ರಾ-ಧಾರಣೆಯಿಂದ ದೇಹಕ್ಕೆ ಸಂಸ್ಕಾರ ಮಾಡಿಸುವುದಿಲ್ಲ ಅವರ ಪುಣ್ಯ ಉಳಿಯುವುದಿಲ್ಲ. ಪುಣ್ಯವು ಉಳಿಯಬೇಕಾದರೆ ದೇಹದ ಸಂಸ್ಕಾರ ಆವಶ್ಯಕ'' ಎಂಬುದಾಗಿ ವೇದರೂಪವಾದ ಭಗವಂತನ ಆಜ್ಞೆಯಿದೆ (ನಿಯಮವಿದೆ). ಆ ನಿಯಮವನ್ನು ಪರಿಪಾಲಿಸಿದಾಗ ಮಾತ್ರ ಅದರ ಫಲ (ಪುಣ್ಯ ಪ್ರಾಪ್ತಿ) ನಮಗೆ ಸಿಗುತ್ತದೆ.

ವೇದವೇ ತಾನು ದೃಷ್ಟಾಂತ ಕೊಡುತ್ತದೆ ''ಅತಪ್ತತನೂರ್ನತದಾಮೋ ಅಶ್ನುತೇ'' ಎಂದು 'ಆಪಃ' ಎಂದರೆ ಆಗಲೇ ಮಾಡಿದ ಹಸಿಯಾದ ಮಡಿಕೆ ಎಂದರ್ಥ. ಅಂತಹ ಆಗಲೇ ಮಾಡಿದ, ಹಸಿಯಾಗಿಯೇ ಉಳಿದಿರುವ ಮಡಿಕೆಯಲ್ಲಿ ನೀರು ಹಾಕಿದರೆ ಅದರಲ್ಲಿ ನೀರು ನಿಲ್ಲದೇ ಹೇಗೆ

---

ಅಗ್ನಿತಪ್ತೇನ ಚಕ್ರೇಣ ಬ್ರಾಹ್ಮಣೋ ಭುಜಮೂಲಯೋಃ ।
ಅಂಕಯಿತ್ವಾ ಜಪನ್ಮಂತ್ರಂ ಸಂಸಾರಾನ್ಮೋಕ್ಷಮಾಪ್ನುಯಾತ್ ॥''
(ಪದ್ಮಪುರಾಣ - ಉತ್ತರಖಂಡ ಅ-224 ಶ್ಲೋ-31/34)

''**ಅಂಕಯಿತ್ವಾ ನ ಚಕ್ರೇಣ ಯತ್ಕಿಂಚಿತ್ಕರ್ಮ ಸಂಚರೇತ್ ।**
**ತತ್ಸರ್ವಂ ಯಾತಿ ವೈಕಲ್ಯಂ ಇಷ್ಟಾಪೂರ್ತಾದಿಕಂ ನೃಪ ॥''**
(ವೃದ್ಧಹಾರೀತಸ್ಮೃತಿ ಅ-2 ಶ್ಲೋ-27)

''ಯಥಾ ಸ್ಮಶಾನಗಂ ಕಾಷ್ಠಂ ಗರ್ಹಿತಂ ಸರ್ವಕರ್ಮಸು ।
**ಅತಪ್ತಶಂಖಚಕ್ರಾಂಗಂ ತಥಾ ಗರ್ಹಿತಮುಚ್ಯತೇ ॥**
ನಾರೀ ವಾ ಪುರುಷೋ ವಾಪಿ ಬ್ರಾಹ್ಮಣಃ ಕ್ಷತ್ರಿಯೋಽಪಿ ವಾ ।
**ವೇದವೇದಾಂಗವೇತ್ತಾಽಪಿ ಸರ್ವಕರ್ಮಸು ಗರ್ಹಿತಃ ॥''**
(ವರಾಹಪುರಾಣ - ಚಾತುರ್ಮಾಸಮಾಹಾತ್ಮ್ಯೆ 5-10/11)

ಸೋರಿಹೋಗುತ್ತದೆಯೋ ಅದರಂತೆ ಈ ದೇಹವೆಂಬ ಮಣ್ಣಿನ ಮಡಿಕೆಗೆ ಮುದ್ರಾಧಾರಣೆ ಎಂಬ ಕಾವು (ಸಂಸ್ಕಾರ) ಕೊಟ್ಟಾಗ ಮಾತ್ರ ಅದರಲ್ಲಿ ಪುಣ್ಯವೆಂಬ ನೀರು ನಿಲ್ಲುತ್ತದೆ. ಮುದ್ರಾಧಾರಣೆಯ ಕಾವು ಕೊಡದಿದ್ದರೆ ಪುಣ್ಯವೆಂಬ ನೀರು ಸೋರಿಹೋಗುತ್ತದೆ. ಆದ್ದರಂದ ದೇಹದ ಶುದ್ಧಿಗಾಗಿ ಮತ್ತು ಮಾಡಿದ ಪುಣ್ಯಗಳನ್ನು ಉಳಿಸಿಕೊಳ್ಳುವುದಕ್ಕಾಗಿ ತಪ್ತಮುದ್ರಾಧಾರಣೆ ಆವಶ್ಯಕ.

2. ಎರಡನೆಯದಾಗಿ, **''ಈ ನಮ್ಮ ದೇಹ ಭಗವಂತನ ಅಧೀನವಾಗಿದೆ''** ಎಂಬ ತತ್ವದ ಚಿಂತನೆಗಾಗಿ ಮುದ್ರಾಧಾರಣೆ ಆಗಬೇಕು. ಯಾವ ವಸ್ತು ಯಾರ ಅಧೀನವಾಗಿರುತ್ತದೆ ಅದರ ಮೇಲೆ ಅವರ ಚಿಹ್ನೆ (ಸೀಲ್) ಹಾಕು-ವುದುಂಟು. ಉದಾಹರಣೆಗೆ - ಶ್ರೀಗಂಧವು ಸರ್ಕಾರದ ಅಧೀನವಾಗಿದ್ದರೆ ಅದರ ಮೇಲೆ ಸರ್ಕಾರದ ಚಿಹ್ನೆ (ಸೀಲ್) ಹಾಕುತ್ತಾರೆ. ಅದರಂತೆ ಈ ದೇಹ ನಮ್ಮದಲ್ಲ. ಭಗವಂತನ ಅಧೀನವಾದದ್ದು. ಭಗವಂತನ ಅಧೀನವಾದ ಈ ದೇಹದ ಮೇಲೆ ಅವನ ಚಿಹ್ನೆ ಅರ್ಥಾತ್ ಶಂಖ-ಚಕ್ರಗಳು ಬೀಳಬೇಕು. ಆದ್ದರಿಂದ 'ಈ ದೇಹ ಭಗವಂತನ ಅಧೀನವಾದದ್ದು. ಎಂಬ ತತ್ವದ ಚಿಂತನೆಗಾಗಿ ಅವನ ಚಿಹ್ನೆಗಳಾದ ಶಂಖಚಕ್ರಗಳನ್ನು ದೇಹಕ್ಕೆ ಹಾಕಿಸಿಕೊಳ್ಳಬೇಕು.[3]

3. ಮೂರನೆಯದಾಗಿ, ಈ ದೇಹಕ್ಕೆ ಎಷ್ಟು ರೀತಿಯಿಂದ ವಿಹಿತವಾದ ಕ್ಲೇಶಗಳನ್ನು (ದಂಡನೆಯನ್ನು) ಕೊಡುತ್ತೇವೆ ಅದೂ ಒಂದು ತಪಸ್ಸು. ಹಿರಿಯರು (ಋಷಿ-ಮುನಿಗಳು) ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಆಚರಿಸುತ್ತಿದ್ದರು. ನಮಗೆ ಆ ವಿಧವಾದ ದೊಡ್ಡ ತಪಸ್ಸನ್ನು ಮಾಡಲು ಆಗದಿದ್ದರೂ ಸಹ, ಈ ಸಣ್ಣದಾದ ತಾಪವನ್ನು ಸಹನೆ ಮಾಡಿದರೂ ಸಹ ಅದೊಂದು ತಪಸ್ಸಾಗುತ್ತದೆ. ಆ ದೃಷ್ಟಿಯಲ್ಲಿ ವಿಹಿತ(ಶಾಸ್ತ್ರೋಕ್ತ)ವಾದ ದೇಹದಂಡನೆಯೂ ಒಂದು ತಪಸ್ಸು ಎಂಬ ಕಾರಣಕ್ಕಾಗಿಯೂ ತಪ್ತಮುದ್ರಧಾರಣೆ ಆವಶ್ಯಕವಾಗಿದೆ.

ಆದ್ದರಿಂದ ಮೊದಲನೆಯದಾಗಿ ದೇಹದ ಶುದ್ಧಿಗಾಗಿ ಹಾಗೂ ಮಾಡಿದ ಪುಣ್ಯಗಳನ್ನು ಉಳಿಸಿಕೊಳ್ಳುವುದಕ್ಕಾಗಿ, ಎರಡನೆಯದಾಗಿ ''ಈ ದೇಹವು ಭಗವಂತನ ಅಧೀನ'' ಎಂಬ ತತ್ವದ ಚಿಂತನೆಗಾಗಿ ಅರ್ಥಾತ್ ಭಗವಂತನ ಸ್ವಾತಂತ್ರ್ಯ ಚಿಂತನೆಗಾಗಿ,

---

1.3 ''ಮದೀಯತ್ವಜ್ಞಾಪನಾಯ ಧಾರಯೇತ್ ತಪ್ತಚಕ್ರಕಮ್''

(ವರಾಹ - ಚಾತುರ್ಮಾಸಮಾಹಾತ್ಮ್ಯೆ 5-14)

ಮೂರನೆಯದಾಗಿ ಈ ವಿಹಿತವಾದ ದೇಹದಂಡನೆಯೂ ಒಂದು ತಪಸ್ಸು ಎಂಬ ಕಾರಣಕ್ಕಾಗಿ ತಪ್ತಮುದ್ರಾಧಾರಣೆ ಅತ್ಯಂತ ಆವಶ್ಯಕವಾದದ್ದು ಎಂಬುದಾಗಿ ಶಾಸ್ತ್ರ ತಿಳಿಸಿದೆ.

**2. ಮುದ್ರಾಧಾರಣೆ ಯಾವಾಗ ಮಾಡಿಸಿಕೊಳ್ಳಬೇಕು ? ಒಂದು ಸಲ ಮಾಡಿಸಿಕೊಂಡ ಮೇಲೆ ಮತ್ತೆ ಮತ್ತೆ ಯಾಕೆ ಮಾಡಿಸಿಕೊಳ್ಳಬೇಕು ?**

ನಿತ್ಯದಲ್ಲಿಯೂ ಈ ದೇಹಕ್ಕೆ ಗೋಪೀಚಂದನದಿಂದ ಮುದ್ರಾಧಾರಣೆ ಆಗಲೇಬೇಕು. ಸಂದರ್ಭವಿಶೇಷಗಳಲ್ಲಿ ಅರ್ಥಾತ್

''ಮಹಾಗುರುಸಮಾಜೇ ಚ''

ಎಂಬುದಾಗಿ ವರಾಹಪುರಾಣದ ಚಾತುರ್ಮಾಸಮಾಹಾತ್ಮ್ಯೆಯಲ್ಲಿ ಹೇಳಿದಂತೆ[1] ಎಷ್ಟು ಸಲ ಗುರುಗಳ ಸಮಾಗಮವಾಗುತ್ತದೆಯೋ ಅಷ್ಟು ಸಲ ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳಬೇಕು ಎಂದು ತಿಳಿಸಿದ್ದಾರೆ.

'ಮತ್ತೆ ಮತ್ತೆ ಏಕೆ ಮಾಡಿಸಿಕೊಳ್ಳಬೇಕು' ಎನ್ನುವುದು ಸರಿಯಲ್ಲ. ಎಷ್ಟು ಸಲ ನಾವು ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳುತ್ತೇವೆಯೋ ಅಷ್ಟು ಶುದ್ಧಿ ದೇಹಕ್ಕೆ ಆಗುತ್ತದೆ. ಮಾಡಿದ ಪುಣ್ಯಗಳು ಉಳಿಯುತ್ತವೆ. ಆದ್ದರಿಂದ ತಮ್ಮ ತಮ್ಮ ಸಂಪ್ರದಾಯದ ಗುರುಗಳ ಸಮಾಗಮ ಆದಾಗಲೆಲ್ಲ ಮುದ್ರಾಧಾರಣೆ ಮಾಡಿಸಿಕೊಳ್ಳಬೇಕು.

**3. ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳುವಾಗ ಯಾವ ಅನುಸಂಧಾನ ಇರಬೇಕು ?**

1. ''ಈ ದೇಹ ಭಗವಂತನ ಅಧೀನವಾದದ್ದು''
2. ''ಈ ಸಣ್ಣದಾದ ತಾಪವನ್ನು ಸಹಿಸಿಕೊಳ್ಳುವುದೂ ಒಂದು ತಪಸ್ಸು''
3. ''ಈ ಮುದ್ರಾಧಾರಣೆಯಿಂದ ನಮ್ಮ ದೇಹವು ಶುದ್ಧವಾಗುತ್ತದೆ ಸಂಪಾದಿಸಿದ ಪುಣ್ಯಗಳು ಉಳಿಯುತ್ತವೆ''

ಈ ರೀತಿಯಾದ ಅನುಸಂಧಾನಗಳು ಇರಬೇಕು.

ಹೊರತು 'ಯಾಕೆ ಮುದ್ರಾಧಾರಣೆ ಮಾಡುತ್ತಾರೆ?' ಎಂಬುದಾಗಿ ಮನಸ್ಸಿನಲ್ಲಿಯೂ ಅನ್ಯಥಾಭಾವನೆ (ಕೋಪಾದಿಗಳು) ಬರಬಾರದು.

---

2.1 ''ಮಹಾಗುರುಸಮಾಜೇ ಚ ಧಾರಯೇತ್ ತಪ್ತಮುದ್ರಿಕಾಃ ।''
(ವರಾಹಪುರಾಣ - ಚಾತುರ್ಮಾಸಮಾಹಾತ್ಮ್ಯೆ ಅ-5 ಶ್ಲೋ-4)

**4. ತಪ್ತಮುದ್ರಾಧಾರಣೆಯ ವಿಷಯದಲ್ಲಿ ಉದಾಹರಿಸಿದ 'ಪವಿತ್ರಂ ತೇ ವಿತತಂ' ಎಂಬ ಮಂತ್ರವು ತಪ್ತಮುದ್ರಾಧಾರಣೆಯನ್ನು ತಿಳಿಸುತ್ತಿಲ್ಲ ಎಂದು ಕೆಲವರು ಹೇಳುತ್ತಾರೆ. ಅದು ಸರಿಯೇ ?**

ಕೆಲವರು ಹಾಗೆ ಹೇಳುತ್ತಾರೆ. "**ಪವಿತ್ರಂ ತೇ ವಿತತಂ** ಎಂಬ ಮಂತ್ರವು ತಪ್ತಮುದ್ರಾಧಾರಣೆಯನ್ನೇ ಹೇಳುತ್ತದೆ ಎಂಬ ವಿಷಯದಲ್ಲಿ ಯಾವ ಆಧಾರವಿಲ್ಲ. ಅಲ್ಲಿ ಪವಿತ್ರ ಎಂದಿದೆ. ಸುದರ್ಶನಚಕ್ರ ಎಂದು ಎಲ್ಲಿ ಹೇಳಿದೆ ? ಅತಪ್ತತನೂಃ ಎಂದಿದೆ. ತಾಪ ಎಂದರೆ ತಪಸ್ಸು. ತಪಸ್ಸು ಮಾಡಬೇಕು ಎಂದು ಹೇಳಿದ್ದಾರೆಯೇ ಹೊರತು ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳಬೇಕು ಎಂಬುದಾಗಿ ಸ್ಪಷ್ಟವಾಗಿ ವೇದದಲ್ಲಿ ಹೇಳಿಲ್ಲ" ಎಂದು ಅಭಿಪ್ರಾಯಪಡುತ್ತಾರೆ.

ಆದರೆ ಅದು ಸರಿಯಾದದ್ದಲ್ಲ. ಏಕೆಂದರೆ ಸಾಕ್ಷಾತ್ ವೇದವ್ಯಾಸರೇ ತಮ್ಮ 'ಪದ್ಮಪುರಾಣ'ದಲ್ಲಿ ಹಾಗೂ ಹಾರೀತರು ತಮ್ಮ 'ವೃದ್ಧಹಾರೀತಸ್ಮೃತಿ' ಯಲ್ಲಿ ಇದೇ ಮಂತ್ರವನ್ನು ಉದಾಹರಿಸಿ ತಪ್ತಮುದ್ರಾಧಾರಣೆ ಮಾಡಿಕೊಳ್ಳಬೇಕು ಎಂದು ಹೇಳುತ್ತಾರೆ. ಅರ್ಥಾತ್ ಈ ಮಂತ್ರವನ್ನು ತಪ್ತಮುದ್ರಾಧಾರಣ ವಿಷಯವಾಗಿಯೇ ವ್ಯಾಖ್ಯಾನಿಸಿದ್ದಾರೆ.[1] ಈ ಮಂತ್ರದಲ್ಲಿರುವ ಪವಿತ್ರ ಎಂಬ ಶಬ್ದಕ್ಕೆ ಸುದರ್ಶನಚಕ್ರ ಎಂದು ಅರ್ಥೈಸಿದ್ದಾರೆ.[2]

---

4.1 "ಚರಣಂ **ಪವಿತ್ರಂ** ವಿತತಂ ಪುರಾಣಂ ವಾಙ್ಮಯಂ ಶುಭಮ್ ।
ತೇನ ಚಕ್ರೇಣ ಸಂತಪ್ತಾಃ ತರೇಯುಃ ಪಾತಕಾಂಬುಧಿಮ್ ॥
ಪವಿತ್ರಂ ಬ್ರಾಹ್ಮಣಸ್ತತ್ಯಂ ಜಗದ್ವ್ಯಾಪ್ತಂ ಹರೇಸ್ಸದಾ ।
ತೇನಾತಪ್ತತನೂರ್ಯೇಷಾಂ ನ ತೇ ಯಾಂತಿ ಪರಂ ಪದಮ್ ॥
ತೇನ ತಪ್ತಾ ತನೂರ್ಯೇಷಾಂ ತೇ ಪ್ರಯಾಂತಿ ಪರಂ ಪದಮ್ ।"
(ಪದ್ಮಪುರಾಣ - ಉತ್ತರಖಂಡ ಅ-224 ಶ್ಲೋ-60/62)

"ತಸ್ಮಾದ್ವೈ ತಪ್ತಚಕ್ರಸ್ಯ ಚಾಂಕನಂ ಮುನಿಭಿಃ ಶ್ರುತಮ್ ।
**ಪವಿತ್ರಂ ವಿತತಂ ಬ್ರಾಹ್ಮಂ ಪ್ರಭೋರ್ಗಾತ್ರೇ ತು ಧಾರಿತಮ್ ॥**
ಶ್ರುತ್ಯೈವ ಚಾಂಕಯೇದ್ಗಾತ್ರೇ ತದ್ಬ್ರಹ್ಮಸಮವಾಪ್ತಯೇ ।"
(ವೃದ್ಧಹಾರೀತಸ್ಮೃತಿ ಅ-2 ಶ್ಲೋ-35 - ಸ್ಮೃತಿಸಂದರ್ಭ ಭಾಗ-2 ಪು.ಸಂ-999)

4.2 "**ಪವಿತ್ರಂ** ಚರಣಂ ನೇಮಿಃ ಹರೇಶ್ಚಕ್ರಂ ಸುದರ್ಶನಮ್ ।
ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಮ್ ॥
**ನಾಮಾನಿ ವಿಷ್ಣುಚಕ್ರಸ್ಯ** ಪರ್ಯಾಯೇಣ ನಿಬೋಧ ಮೇ ।"
(ಪದ್ಮಪುರಾಣ - ಉತ್ತರಖಂಡ ಅ-224 ಶ್ಲೋ-62/63)

'ಅಗ್ನಿತಪ್ತಂ **ಪವಿತ್ರಂ** ಚ ಧೃತ್ವಾ ವೈ ಭುಜಮೂಲಯೋಃ ॥
ತ್ಯಕ್ತ್ವಾ ಯಮಪುರಂ ಘೋರಂ ಯಾತಿ ವಿಷ್ಣೋಃ ಪರಂ ಪದಮ್ ॥"
(ಪದ್ಮ - ಉತ್ತರ ಅ-224 ಶ್ಲೋ-31/32)

**5. ಉತ್ತರಾದಿಮಠದ ಶಿಷ್ಯರಿಗೆ ಮಾತ್ರ ಐದು ಮುದ್ರೆಗಳು ಏಕೆ ? ಇತರ ಮಠಗಳ ಶಿಷ್ಯರಿಗೆ ಎರಡು ಮುದ್ರೆಗಳು ಏಕೆ ?**

ಇವುಗಳಲ್ಲಿ ಐದು ಮುದ್ರೆಗಳನ್ನು ಹಾಕುವುದು, ಎರಡು ಮುದ್ರೆಗಳನ್ನು ಹಾಕುವುದು ಎಲ್ಲವೂ ಶಾಸ್ತ್ರಸಮ್ಮತವಾದದ್ದೇ. ಅರ್ಥಾತ್ ''ಒಂದು ಶಾಸ್ತ್ರವಿಹಿತವಾದದ್ದು, ಇನ್ನೊಂದು ನಿಷಿದ್ಧ'' ಎಂದಲ್ಲ. ಎಲ್ಲ ಮಠಗಳ ಸಂಪ್ರದಾಯದಲ್ಲಿ ಬಂದದ್ದು ಎಲ್ಲವೂ ಶಾಸ್ತ್ರವಿಹಿತವಾದದ್ದೇ.

ವರಾಹಪುರಾಣದ ಚಾತುರ್ಮಾಸಮಾಹಾತ್ಮ್ಯೆಯಲ್ಲಿ ಐದು ಮುದ್ರಾ-ಧಾರಣೆಯನ್ನೂ ಹೇಳಿದ್ದಾರೆ.[1] ಅಥವಾ ಎರಡನ್ನು ಮಾಡಬಹುದೆಂದೂ ಹೇಳಿದ್ದಾರೆ.[2] ಮತ್ತು ಕೆಲವು ಪ್ರಸಂಗಗಳಲ್ಲಿ ಕೇವಲ ಚಕ್ರ ಒಂದನ್ನು ಮಾತ್ರ ವಿಧಿಸಿದ್ದಾರೆ. ಹೀಗೆ ನಾನಾವಿಧವಾದ ಕಲ್ಪ(ಪಕ್ಷ)ಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಐದು ಮುದ್ರಾಧಾರಣೆಕ್ರಮವನ್ನು ಉತ್ತರಾದಿಮಠದಲ್ಲಿ ಹಾಗೂ ಕೆಲವು ಮಠಗಳಲ್ಲಿ ಅನುಷ್ಠಾನಕ್ಕೆ ತರಲಾಗಿದೆ. ಎರಡು ಮುದ್ರಾಧಾರಣೆಯ ಕ್ರಮವನ್ನು ಹೇಳಿದ್ದಾರೆ. ಅದನ್ನು ಇತರ ಮಠಗಳಲ್ಲಿ ಅನುಷ್ಠಾನಕ್ಕೆ ತಂದಿದ್ದಾರೆ.

**6. ಆಷಾಢ ಏಕಾದಶೀ ದಿನ ನಮ್ಮ ಮಠದ (ಸಂಪ್ರದಾಯದ) ಗುರುಗಳು ಊರಿನಲ್ಲಿ ಇಲ್ಲದಿದ್ದರೆ ಮುದ್ರಾಧಾರಣೆಯನ್ನು ಹೇಗೆ ಮಾಡಿಸಿ-ಕೊಳ್ಳುವುದು ? ಬೇರೆ ಮಠದ ಗುರುಗಳಿಂದ ಮುದ್ರಾಧಾರಣೆ ಮಾಡಿಸಿಕೊಳ್ಳಬಹುದೇ ?**

ಆ ಆ ಮಠದ ಶಿಷ್ಯರು ತಮ್ಮ ತಮ್ಮ ಗುರುಗಳಿಂದ ಮುದ್ರಾಧಾರಣೆ ಮಾಡಿಸಿಕೊಳ್ಳುವುದು ಸಂಪ್ರದಾಯಾನುಗುಣವಾಗಿದೆ. ಗುರುಗಳ ದರ್ಶನ, ಗುರುಗಳ ಸಮಾಗಮ ಯಾವಾಗ ಆಗುತ್ತದೆ ಆ ಕಾಲದಲ್ಲಿಯೇ

---

5.1 ''ಧಾರಯೇತ್ ತಪ್ತಚಕ್ರಂ ಚ ದಕ್ಷಿಣೇ ಬಾಹುಮೂಲಕೇ ।
ಸ್ತನೇ ಚ ಜಠರೇ ಚೈವ ತತಃ ಶಂಖಂ ತು ಸವ್ಯತಃ ॥
ಭುಜಮೂಲೇ ಸ್ತನೇ ಚೈವ ಧಾರಯೇತ್ ಪಂಚಮುದ್ರಿಕಾಃ ।''

5.2 ''ಚಕ್ರಶಂಖೌ ದ್ವಯೋರ್ಬಾಹ್ವೋಃ ಅಥವಾ ಧಾರಯೇತ್ ಬುಧಃ ।''
(ವರಾಹಪುರಾಣ - ಚಾತುರ್ಮಾಸ ಮಹಾತ್ಮ್ಯೆ ಅ-5 ಶ್ಲೋ-7/8/9)

ಮುದ್ರಾಧಾರಣೆ ಮಾಡಿಸಿಕೊಳ್ಳಬೇಕು.[1] ಸಮೀಪದಲ್ಲಿ ಗುರುಗಳು ಇದ್ದಾಗ ಆಷಾಢ ಏಕಾದಶೀ ಮುದ್ರಾಧಾರಣೆಗೆ ಬಹಳಶ್ರೇಷ್ಠವಾದ ಮುಹೂರ್ತ. ಅನ್ನುವುದಕ್ಕಾಗಿಯೇ ಆಷಾಢ ಏಕಾದಶೀ ಮುದ್ರಾಧಾರಣೆ ಮಾಡಿಸಿ-ಕೊಳ್ಳುವುದು ವಿಶೇಷ ಎಂದು ತಾತ್ಪರ್ಯವೇ ಹೊರತು ತಮ್ಮ ಮಠದ ಗುರುಗಳಿಲ್ಲದಿದ್ದರೂ ಮುದ್ರಾಧಾರಣೆ ಮಾಡಿಸಿಕೊಳ್ಳಬಹುದು ಎಂದು ಅರ್ಥವಲ್ಲ.

7. **'ಅವರವರ ಮಠಾಧೀಶರಿಂದ ಅವರವರು ಮುದ್ರಾಧಾರಣೆ ತೆಗೆದುಕೊಳ್ಳಬೇಕು' ಎಂದು ನಿಯಮವೇ ? ಯಾವ ಮಠದಲ್ಲಿಯಾದರೂ ಯಾರಾದರೂ ತೆಗೆದುಕೊಳ್ಳಬಹುದೇ ? ಬೇರೆ ಮಠದ ಶಿಷ್ಯರಿಗೆ ಮುದ್ರೆ ನೀಡಿದರೆ ಅದು ತಪ್ಪಾಗುತ್ತದೆಯೇ ?**

ದೇಹದ ಶುದ್ಧಿಗಾಗಿ, ವೈಷ್ಣವತ್ವ ಚಿಹ್ನೆಗಾಗಿ ತಪ್ತಮುದ್ರಾಧಾರಣೆಯನ್ನು ಅವಶ್ಯ ಮಾಡಿಕೊಳ್ಳಲೇಬೇಕು ಎನ್ನುವುದರಲ್ಲಿ ಸಂದೇಹವಿಲ್ಲ. ಎಲ್ಲ ಪೀಠಾಧಿಪತಿಗಳೂ ಶ್ರೀಮದಾಚಾರ್ಯರ ಶಿಷ್ಯರೇ ಆಗಿದ್ದರಿಂದ ಎಲ್ಲರೂ ಪೂಜ್ಯರೇ ಆಗಿದ್ದಾರೆ. ಎಲ್ಲರೂ ಎಲ್ಲರನ್ನೂ ಗೌರವಿಸಬೇಕು, ನಮಸ್ಕರಿಸಬೇಕು ಎನ್ನುವುದರಲ್ಲಿ ಸಂದೇಹವಿಲ್ಲ.

ಆದರೆ ಮುದ್ರಾಧಾರಣೆಯ ವಿಷಯದಲ್ಲಿ ಒಂದು ಅನೂಚಾನವಾದ ಸಂಪ್ರದಾಯ ನಡೆದು ಬಂದಿದ್ದದರಿಂದ, ಆ ಅನೂಚಾನವಾಗಿ ನಡೆದು ಬಂದಿರುವ ಸಂಪ್ರದಾಯದಂತೆ ಆ ಆ ಮಠದವರು ತಮ್ಮ ತಮ್ಮ ಗುರುಗಳಲ್ಲಿಯೇ ಮುದ್ರಾಧಾರಣೆ ತೆಗೆದುಕೊಳ್ಳಬೇಕು.

ಮನು ಹೇಳುತ್ತಾನೆ -

**''ವೇದೋಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**
**ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿರೇವ ಚ ॥''**

''ವೇದವು ಸಮಗ್ರ ಧರ್ಮಕ್ಕೆ ಪ್ರಮಾಣಭೂತವಾದದ್ದು. ಅದರ ನಂತರ ಆ ವೇದಗಳನ್ನಾಧರಿಸಿ ವಸಿಷ್ಠಾದಿಗಳು ರಚಿಸಿದ ಸ್ಮೃತಿಗಳೂ ಪ್ರಮಾಣವೇ.

---

6.1 ''ಮಹಾಗುರುಸಮಾಜೇ ಚ ಧಾರಯೇತ್ ತಪ್ತಮುದ್ರಿಕಾಃ ।''
(ವರಾಹಪುರಾಣ-ಚಾತುರ್ಮಾಸಮಾಹಾತ್ಮ್ಯೆ ಅ-5 ಶ್ಲೋ-4)

**'ಆಚಾರಶ್ಚೈವ ಸಾಧೂನಾಂ'**

ಅನೂಚಾನವಾಗಿ, ಅಬಾಧಿತವಾಗಿ ನಡೆದು ಬಂದಿರುವ ಸಂಪ್ರದಾಯವೂ ಧರ್ಮದ ವಿಷಯದಲ್ಲಿ ಪ್ರಮಾಣವಾಗುತ್ತದೆ'' ಎಂದು.

ಆದ್ದರಿಂದ ಅನೂಚಾರವಾಗಿ ನಡೆದುಬಂದಿರುವ ಪರಂಪರೆಗೆ, ಸಂಪ್ರದಾಯಕ್ಕೆ ಅನುಸಾರವಾಗಿ ಆ ಆ ಮಠದ ಶಿಷ್ಯರು ತಮ್ಮ ತಮ್ಮ ಗುರುಗಳಿಂದ ಮುದ್ರಾಧಾರಣೆ ತೆಗೆದುಕೊಂಡು, ವೈಷ್ಣವದೀಕ್ಷೆಯನ್ನು ಪಡೆದುಕೊಳ್ಳಬೇಕು.

ಎಂತೆಂತಹ ಪೀಠಾಧಿಪತಿಗಳು ಜ್ಞಾನಿಗಳು ಬಂದು ಹೋಗಿದ್ದಾರೆ. ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ರಘೂತ್ತಮರ ವಿದ್ಯಾಧೀಶರು, ರಾಘವೇಂದ್ರರು ಹೀಗೆ ಎಲ್ಲ ಮಠಗಳಲ್ಲಿಯೂ ಮಹಾ ಮಹಾಗ್ರಂಥಕಾರರು, ತ್ರಿಕಾಲಜ್ಞಾನಿಗಳು, ಶಾಪಾನುಗ್ರಹಸಮರ್ಥರು, ತ್ರೈಲೋಕ್ಯೋದ್ಧರಣಕ್ಷಮರು ಆಗಿ ಹೋಗಿದ್ದಾರೆ. ಅಂತಹ ಅಂತಹ ಜ್ಞಾನಿಗಳು (ಇರುವಾಗಲೂ ಕೂಡ) ತಮ್ಮ ಕಾಲದಲ್ಲಿಯೂ ಕೂಡ ಈ ಮುದ್ರಾಧಾರಣಕ್ರಮವನ್ನು ವ್ಯತ್ಯಾಸಮಾಡಲಿಲ್ಲ. ಅಂದರೆ ಆ ಆ ಮಠದ ಶಿಷ್ಯರು ಅವರವರ ಗುರುಗಳಿಂದಲೇ ಮುದ್ರಾಧಾರಣೆಯನ್ನು ತೆಗೆದುಕೊಳ್ಳುವ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಯಾರೂ ಇದನ್ನು ಬದಲಾಯಿಸಲಿಲ್ಲ. ಅಂದಮೇಲೆ ವೇದ-ಧರ್ಮಶಾಸ್ತ್ರ-ಗಳಂತೆ ಆಚರಣೆಯ ವಿಷಯದಲ್ಲಿ ಸಂಪ್ರದಾಯವೂ ಪ್ರಮಾಣ-ವಾಗುವುದರಿಂದ, ''ಆ ಆ ಮಠದ ಶಿಷ್ಯರು ತಮ್ಮ ತಮ್ಮ ಗುರುಗಳಿಂದ ಮುದ್ರಾಧಾರಣೆ ತೆಗೆದುಕೊಳ್ಳಬೇಕು'' ಎಂಬ ವಿಷಯದಲ್ಲಿ ಅನೂಚಾನವಾಗಿ, ಅಬಾಧಿತವಾಗಿ ನಡೆದು ಬಂದಿರುವ ಸಂಪ್ರದಾಯವೇ ಪ್ರಮಾಣವಾಗಿದೆ. ಆ ಸಂಪ್ರದಾಯಕ್ಕೆ ಅನುಸಾರವಾಗಿ ತಮ್ಮ ತಮ್ಮ ಗುರುಗಳಿಂದಲೇ ಮುದ್ರಾಧಾರಣೆಯನ್ನು ತೆಗೆದುಕೊಳ್ಳಬೇಕು ಎನ್ನುವುದೇ ಶಾಸ್ತ್ರಸಮ್ಮತವಾದುದು.

ಬೇರೆ ಮಠದ ಯತಿಗಳನ್ನು ಅವರ ಜ್ಞಾನಕ್ಕೆ, ಪೀಠಕ್ಕೆ, ತಪಸ್ಸಿಗೆ ಗೌರವಿಸಬೇಕು. ಆದರಿಸಬೇಕು ಎನ್ನುವುದನ್ನೂ ಮರೆಯಬಾರದು.

★★★

ಶ್ರೀಃ

# ಪ್ರಮಾಣ ಭಾವ ಸಂಗ್ರಹ

## (ಅಡಿಟಿಪ್ಪಣಿಯಲ್ಲಿ ಉದಾಹರಿಸಿದ ಕೆಲವು ಪ್ರಮಾಣಗಳ ಅಭಿಪ್ರಾಯಸಂಗ್ರಹ)

**ಪುಟ ಸಂ-3 ಪ್ರಶ್ನೆ ಸಂ—2.1**

**'ವಿಷ್ಣುಂ ಜ್ಞಾತ್ವಾ ತದನ್ಯತ್ರ—— ಭಜತೇ ಪುರುಷೋತ್ತಮಮ್ ।'**

ಯಾವ ವ್ಯಕ್ತಿ ಭಗವಂತನನ್ನು ತಿಳಿದು ಇತರ ದೇವತೆಗಳನ್ನು ತಿಳಿಯುವುದಿಲ್ಲ, ಆ ದೇವತೆಗಳಲ್ಲಿ ತಾರತಮ್ಯವನ್ನು ತಿಳಿಯುವುದಿಲ್ಲ, ದೇವತೆಗಳನ್ನು ಉಪೇಕ್ಷೆ ಮಾಡಿ ಅವರನ್ನು ಸ್ಮರಿಸುವುದಿಲ್ಲ, ಅನೇಕ ಉತ್ತಮಮನುಷ್ಯರನ್ನು ಕಂಡು ಅವರಲ್ಲಿರುವಂತಹ ಉತ್ತಮತ್ವವೇ ಭಗವಂತನಲ್ಲಿ ಇದೆ ಎಂಬುದಾಗಿ ಅಲ್ಪವಾದ ಉತ್ತಮತ್ವವನ್ನು ವಿಷ್ಣುವಿನಲ್ಲಿ ತಿಳಿಯುತ್ತಾನೆಯೋ ಅಂತಹ ವ್ಯಕ್ತಿ ಅಧಮಭಕ್ತ ಎನಿಸಿಕೊಳ್ಳುತ್ತಾನೆ. ಅವನಿಗೆ ಕೇವಲ ಸ್ವರ್ಗಾದಿಫಲವಾಗುತ್ತದೆ.

ದೇವತೆಗಳನ್ನು ಉಪೇಕ್ಷಿಸಿ ಅವಮಾನಗೊಳಿಸಿದರೆ, ಅವನಿಗೆ ದೇವತೆಗಳು ವಿಷ್ಣುವಿನಲ್ಲಿ ದ್ವೇಷ ಹುಟ್ಟಿಸಿ ಅಧೋಗತಿಗೆ ಕಳಿಸುತ್ತಾರೆ. ' ದೇವತೆಗಳನ್ನು ಪೂಜಿಸಿದರೆ ವಿಷ್ಣುವಿನಲ್ಲಿ ಅವನಿಗೆ ಭಕ್ತಿಯನ್ನು ಹುಟ್ಟಿಸುತ್ತಾರೆ. ಮತ್ತು ದೇವತೆ-ಗಳನ್ನು ಉಪೇಕ್ಷಿಸಿದರೆ ಭಗವಂತನೇ ಅವನಲ್ಲಿ ಭಕ್ತಿಯನ್ನು ನಾಶಗೊಳಿಸಿ ಮತ್ತೆ ಮತ್ತೆ ಸಂಸಾರದಲ್ಲಿಯೇ ಉಳಿಯುವಂತೆ ಮಾಡುತ್ತಾನೆ. ಆದ್ದರಿಂದ ಭಗವಂತ-ನಂತೆ ಉಳಿದ ಬ್ರಹ್ಮ—ರುದ್ರ—ಇಂದ್ರ—ಶನಿ ಮೊದಲಾದ **ಎಲ್ಲ ದೇವತೆ-ಗಳೂ ಪೂಜ್ಯರೇ ಆಗಿದ್ದಾರೆ.**

**ಪುಟ ಸಂ—5 ಪ್ರ.ಸಂ—5**

''ಇನ್ನೊಂದು ಪ್ರಸಂಗದಲ್ಲಿ ಪಂಚಮಹಾಭೂತಗಳನ್ನು ಭಾಗವತದಲ್ಲಿ ಹೇಳಿದ್ದಾರೆ'' ಎಂಬುದಾಗಿ 5ನೇ ಪ್ರಶ್ನೆಯ ಉತ್ತರದಲ್ಲಿ ತಿಳಿಸಿದೆ. ಅದಕ್ಕೆ ಈ ಭಾಗವತಶ್ಲೋಕದ ಆಧಾರವನ್ನು ಕಾಣಬಹುದು.

**ನಾಹಂ ಮಮೇತಿ ಭಾವೋಽಯಂ ಪುರುಷೇ ವ್ಯವಧೀಯತೇ ।**
**ತಾವದ್ ಬುದ್ಧಿಮನೋಽಕ್ಷಾರ್ಥಗುಣವ್ಯೂಹೋ ಹ್ಯನಾದಿಮಾನ್ ॥**

**(4-29-72)**

ಲಿಂಗದೇಹದಲ್ಲಿರುವ ಮನಸ್ಸು ಅಹಂ ಮಮ ಎಂಬ ಅಭಿಮಾನವನ್ನು ಹುಟ್ಟಿಸುವ ಮೂಲಕವಾಗಿಯೇ ಸಂಸಾರವನ್ನು ತಂದುಕೊಡುತ್ತದೆ, ಹೊರತು ಕೇವಲ ಲಿಂಗದೇಹವಲ್ಲ ಎಂದು ಹಿಂದೆ ಹೇಳಿದ್ದಾರೆ. ಹೀಗೆ ಹೇಳಿದರೇ

ಲಿಂಗದೇಹವಿರುವಾಗ ಕೆಲವೊಮ್ಮೆ ಅಕಸ್ಮಾತ್ ಅಹಂ ಮಮಾಭಿಮಾನ ನಾಶವಾದರೇ ಸಂಸಾರವು ಇಲ್ಲದೇ ಹೋಗಬೇಕಾಗುತ್ತದೆ. ಈ ಪ್ರಶ್ನೆಗೆ ಭಾಗವತ ಉತ್ತರಿಸುತ್ತದೆ. ಅನಾದಿಯಾದ 'ಬುದ್ಧಿ—ಮನಸ್ಸು—ಅಕ್ಷ ಅಂದರೆ ಇಂದ್ರಿಯಗಳು — **ಅರ್ಥ ಅಂದರೆ ಪಂಚಮಹಾಭೂತಗಳು** — ಗುಣ ಅಂದರೆ ಸತ್ವಾದಿಗುಣಗಳು ಇವುಗಳ ಸಮೂಹಾತ್ಮಕವಾದ ಲಿಂಗದೇಹವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಅಹಂ ಮಮ ಎಂಬ ಅಭಿಮಾನಗಳು ಇದ್ದೇ ಇರುತ್ತವೆ. ಆದ್ದರಿಂದ ಸಂಸಾರ ಇಲ್ಲದಿರಬೇಕಾದೀತು' ಎಂದು ಶಂಕಿಸುವುದು ಸರಿಯಲ್ಲ. ಈ ಪ್ರಸಂಗದಲ್ಲಿ ಲಿಂಗದೇಹ ಪಂಚಭೂತಾತ್ಮಕ ಎಂದು ಹೇಳಿದ್ದಾರೆ.

ಇಲ್ಲಿ ಭಾಗವತದ ಮೂಲಶ್ಲೋಕದಲ್ಲಿ ಭೂತಗಳು ಎಂದು ಹೇಳದಿದ್ದರೂ ಶ್ಲೋಕದಲ್ಲಿರುವ ಅರ್ಥ ಎಂಬ ಪದಕ್ಕೆ ಪಂಚಮಹಾಭೂತಗಳು ಎಂದು ಯಾದವಾರ್ಯರು ವ್ಯಾಖ್ಯಾನಿಸುತ್ತಾರೆ — "ಅಕ್ಷಾಣೀಂದ್ರಿಯಾಣಿ, **ಅರ್ಥಾ ಭೂತಾನಿ,** ಗುಣಾಃ ಸತ್ವಾದಯಃ ॥"

(ಪ್ರಕಾಶಿಕಾ — ಯಾದವಾರ್ಯಟಿಪ್ಪಣೀ)

**ಪುಟ ಸಂ—5 ಪ್ರ.ಸಂ—5.1**

'ಏಕಂ' 'ಪಂಚವಿಧಂ' 'ತ್ರಿವೃತ್' ಹೀಗೆ 16 ಕಲೆಗಳಿಂದ ಕೂಡಿದ ಲಿಂಗಶರೀರವು ಚೇತನನಿಂದ ಕೂಡಿಕೊಂಡು ಜೀವ ಎಂದು ಕರೆಸಿಕೊಳ್ಳುತ್ತದೆ.

(ಭಾಗವತಶ್ಲೋಕದ ಅಭಿಪ್ರಾಯ)

ಇಲ್ಲಿ ಹದಿನಾರುಕಲೆಗಳನ್ನು ವಿವರಿಸುವುದಕ್ಕಾಗಿ ಏಕಂ ಪಂಚವಿಧಂ ತ್ರವೃತ್ ಎಂದು ಹೇಳಿದ್ದಾರೆ. ಇದನ್ನು ನೋಡಿದರೆ ಒಂಭತ್ತೇ ಕಲೆಗಳು ಎಂದು ತೋರುತ್ತದೆ. ಹಾಗಾದರೆ 16 ಕಲೆಗಳು ಹೇಗೆ ? ಅದಕ್ಕಾಗಿ ಆಚಾರ್ಯರು ಭಾಗವತದ ಅಭಿಪ್ರಾಯವನ್ನು ವಿವರಿಸುತ್ತಾರೆ.

ತ್ರಿವೃತ್ ಎನ್ನುವುದರ ಅರ್ಥ — 'ಪ್ರಾಣೇಂದ್ರಿಯಾಂತಃಕರಣ-ಭೇದೇನ ತ್ರಿವಿಧಂ ಮತಮ್ ।' ಎನ್ನುವುದು. ಪ್ರಾಣ—ಇಂದ್ರಿಯ—ಅಂತಃಕರಣ ಎಂಬುದಾಗಿ ಮೂರುವಿಧವಾಗಿದೆ ಲಿಂಗದೇಹ ಎಂದರ್ಥ. ಪಂಚವಿಧಂ ಎನ್ನುವುದರ ಅರ್ಥ —

**'ಪಂಚ ಪಂಚೈವ ತೇ ಸರ್ವೇ ಪ್ರಾಣಬುದ್ಧೀಂದ್ರಿಯಾಣಿ ಚ ।'**
**ಕರ್ಮೇಂದ್ರಿಯಾಣಿ ಚ ತಥಾ ತಸ್ಮಾತ್ ಪಂಚವಿಧಂ ಸ್ಮೃತಮ್ ॥**

ಎನ್ನುವುದು. ಪಂಚವಿಧಂ ಎನ್ನುವಲ್ಲಿ ಪ್ರತ್ಯೇಕಂ (ಪ್ರತ್ಯೇಕವಾಗಿ) ಎಂಬು-ದನ್ನು ಶೇಷಮಾಡಿಕೊಳ್ಳಬೇಕು. ಅಂದರೆ, ಪ್ರಾಣ — ಇಂದ್ರಿಯ —

ಅಂತಃಕರಣಗಳು ಪ್ರತ್ಯೇಕವಾಗಿ ಐದು ವಿಧವಾಗಿವೆ ಎಂದರ್ಥ. ಏಕಂ ಎನ್ನುವುದರ ಅರ್ಥ — 'ಮನಸಾ ಸಹ ತತ್ಪುನಃ' ಎನ್ನುವುದು. ಪ್ರತ್ಯೇಕವಾಗಿ ಪಂಚವಿಧವಾದ ಪ್ರಾಣಾದಿಗಳ ಜೊತೆಗೆ ಒಂದು ಮನಸ್ಸೂ ಸೇರಿದೆ ಎಂದರ್ಥ.

ಈ ರೀತಿಯಾಗಿ ಪ್ರತ್ಯೇಕವಾಗಿ ಐದೈದು ವಿಧವಾದ ಪ್ರಾಣ—ಇಂದ್ರಿಯ —ಅಂತಃಕರಣಗಳು ಹಾಗೂ ಒಂದು ಮನಸ್ಸು ಹೀಗೆ ಒಟ್ಟು ಹದಿನಾರು ಕಲೆಗಳುಳ್ಳದ್ದಾಗಿದೆ ಲಿಂಗಶರೀರ ಎಂದರ್ಥ. (ಭಾಗವತ ತಾತ್ಪರ್ಯದ ಅಭಿಪ್ರಾಯ)

ಒಟ್ಟಿನಲ್ಲಿ ಇವೆಲ್ಲ ಅಭಿಪ್ರಾಯಗಳನ್ನು ಸೇರಿಸಿದಾಗ 16 ಕಲೆಗಳನ್ನು ಎರಡು ಪಕ್ಷಗಳಲ್ಲಿ ಹೇಳಿದಂತಾಗುತ್ತದ.

1. ಪ್ರಾಣ-ಇಂದ್ರಿಯ-ಅಂತಃಕರಣಗಳು ಪ್ರತ್ಯೇಕ ಐದು ವಿಧವಾದ್ದರಿಂದ ಅ) ಪಂಚಪ್ರಾಣಗಳು ಆ) ಪಂಚ ಜ್ಞಾನೇಂದ್ರಿಯಗಳು ಇ) ಪಂಚ ಅಂತಃಕರಣ (ಮನಸ್ಸು)ಗಳು ಈ) ಹಾಗೂ ಒಂದು ಮನಸ್ಸು ಹೀಗೆ ಹದಿನಾರು ಕಲೆಗಳು.

2. ಅಥವಾ ಅ) ಪಂಚ ಪ್ರಾಣಗಳು ಆ) ಪಂಚ ಜ್ಞಾನೇಂದ್ರಿಯಗಳು ಇ) ಪಂಚ ಕರ್ಮೇಂದ್ರಿಯಗಳು ಈ) ಹಾಗೂ ಒಂದು ಮನಸ್ಸು ಹೀಗೆ ಹದಿನಾರು ಕಲೆಗಳು. (ಈ ಎರಡನೇ ಪಕ್ಷದಲ್ಲಿ ಪಂಚ ಅಂತಃಕರಣಗಳನ್ನು ಒಂದು ಮನಸ್ಸಿನಲ್ಲಿಯೇ ಅಂತರ್ಭಾವ ಮಾಡಿ ಕೊಳ್ಳುವುದು.)

ಹೀಗೆ ಎರಡು ಪಕ್ಷಗಳಲ್ಲಿ 16 ಕಲೆಗಳನ್ನು ಲಿಂಗದೇಹದಲ್ಲಿ ತಿಳಿದು ಕೊಳ್ಳಬೇಕು.

(ಯಾದವಾರ್ಯಟಿಪ್ಪಣೀ — ಪ್ರಕಾಶಿಕಾ ಅಭಿಪ್ರಾಯ)

**ಪುಟ ಸಂ—12 ಪ್ರ ಸಂ—10.2**

ನರ್ಮದಾ ನದಿಯ ಉತ್ತರದೇಶದಲ್ಲಿ ಯಾರು ಮಾತುಲಸಂಬಂಧವನ್ನು ಬೆಳೆಸುತ್ತಾರೆ (ಸೋದರ ಮಾವ/ಅತ್ತೆ ಮಕ್ಕಳನ್ನು ವಿವಾಹವಾಗುತ್ತಾರೆ) ಅವರಿಗೆ ''ಮಾತುಲಕನ್ಯಾವಿವಾಹ ಮಾಡಿಕೊಂಡರೆ ಚಾಂದ್ರಾಯಣವ್ರತ ಮಾಡಬೇಕು'' ಎಂಬುದಾಗಿ ಪ್ರಾಯಶ್ಚಿತ್ತ ಹೇಳಿದ್ದು. ಅವರಿಗೇ ಮಾತುಲಕನ್ಯಾವಿವಾಹದ ನಿಷೇಧ ಹೇಳಿರುವುದು. ಅವರಿಗೆ ಅದು ದೋಷ. ಶ್ರುತಿಸ್ಮೃತಿಗಳ ವಿಧಾನವೂ ಹಾಗೆಯೇ ಇದೆ.

**''ಉತ್ತರೇ ನೋದ್ವಹೇತ್ ವಿಪ್ರೋ''**

ಎಂಬುದಾಗಿ ವ್ಯಾಘ್ರಪಾದನೂ ಇದೇ ಅಭಿಪ್ರಾಯವನ್ನು ತಿಳಿಸಿದ್ದಾರೆ.

**ಪುಟ ಸಂ—12/13 ಪ್ರ.ಸಂ—10.3**

ಸೋದರ ಮಾವ/ಅತ್ತೆ ಮಕ್ಕಳನ್ನು ವಿವಾಹವಾಗುವ ಪದ್ಧತಿಯು ಉತ್ತರ ದೇಶದ ಜನರಿಗೆ ನಿಷಿದ್ಧವಾದರೂ ವಿಂಧ್ಯಪರ್ವತದ ದಕ್ಷಿಣದೇಶದಲ್ಲಿರುವ ಜನರಿಗೆ ಅದು ನಿಷಿದ್ಧವಲ್ಲ. ಗೌತಮರು ಹಾಗೂ ಬೋಧಾಯನರೂ ಇದೇ ಅಭಿಪ್ರಾಯವನ್ನು ತಿಳಿಸುತ್ತಾರೆ. ಆದ್ದರಿಂದ ಮಾತುಲಕನ್ಯಾವಿವಾಹವು ದಕ್ಷಿಣದೇಶದವರಿಗೆ ದೋಷವಲ್ಲ.

**ಪುಟ ಸಂ—13 ಪ್ರ.ಸಂ—10.5**

ಮಾತುಲಕನ್ಯಾಪರಿಣಯವನ್ನು ಪೂರ್ಣವಾಗಿ ನಿಷೇಧಿಸಲು ಬರುವುದಿಲ್ಲ. ಕಾರಣ ಅದು ಅನೇಕ ಶ್ರುತಿ ಸ್ಮೃತಿಸಿದ್ಧವಾಗಿದೆ. ಆದ್ದರಿಂದ ಯಾವ ದಕ್ಷಿಣ-ದೇಶಸ್ಥರ ಕುಲದಲ್ಲಿ ಮಾತುಲಕನ್ಯಾವಿವಾಹವು ಪರಂಪರಾಪ್ರಾಪ್ತವಾಗಿದೆ ಅವರು ಅದನ್ನು ಆಚರಿಸಬಹುದು. ಇನ್ನು ಯಾವ ಉತ್ತರದೇಶಸ್ಥರ ಕುಲದಲ್ಲಿ ಮಾತುಲ-ಕನ್ಯಾವಿವಾಹವು ಪರಂಪರಾಪ್ರಾಪ್ತವಾಗಿಲ್ಲ ಅವರಿಗೆ ಅದು ನಿಷಿದ್ಧ. ಅನೇಕ ರೀತಿ ಪ್ರಾಯಶ್ಚಿತ್ತಗಳನ್ನು ಹೇಳಿ ಮಾತುಲಕನ್ಯಾವಿವಾಹವನ್ನು ದೂಷಿಸಿದ್ದು ಆ ಉತ್ತರದೇಶದ ಜನರ ವಿವಕ್ಷೆಯಿಂದ.

**ಪುಟ ಸಂ—14 ಪ್ರ.ಸಂ—11.1**

ಮೋಕ್ಷವು ಬಹುಜನ್ಮಸಾಧ್ಯ (ಅನೇಕಬ್ರಹ್ಮಕಾಲಪ್ರಾಪ್ಯ) ವಾದ್ದರಿಂದ ಅಲ್ಲಿಯವರೆಗೆ ತಪಸ್ಸನ್ನು (ಸಾಧನೆಯನ್ನು) ಆಚರಿಸಲು ಸಾಧ್ಯವಿಲ್ಲ ಎಂದು ತಿಳಿದು ಮಂದಾಧಿಕಾರಿಗಳು ಶೀಘ್ರದಲ್ಲಿ ಸಿಗಬಹುದಾದ ಸ್ವರ್ಗಾದಿಗಳಲ್ಲಿ ಅಭಿರುಚಿ ಪಡೆಯುತ್ತಾರೆ. ಅದಕ್ಕಾಗಿ ಅವರನ್ನು ಕುರಿತು ''ಮಾಡುವ ಕರ್ಮ-ಗಳಿಗೆ ಮೋಕ್ಷವೇ ಮೂಲಭೂತವಾದ (ಕೊನೆಯಲ್ಲಿ ಸಿಗುವ) ಫಲ. ಮಧ್ಯದಲ್ಲಿ ಸ್ವರ್ಗಾದಿಗಳೂ (ಫಲ) ಸಿಗುತ್ತದೆ. ಆದ್ದರಿಂದ ವಿಹಿತವಾದ ಕರ್ಮಗಳನ್ನು ಆಚರಿಸಬೇಕು. ಹೊರತು ಬಹುಕಾಲನಂತರ ಫಲ ಬರುವುದೆಂಬ ಕಾರಣದಿಂದ ಕರ್ಮಗಳನ್ನು ಬಿಡಬಾರದು'' ಎಂದು ತಿಳಿಸುವುದಕ್ಕಾಗಿ ಫಲಶ್ರುತಿಯನ್ನು ಹೇಳುತ್ತಾರೆ. (ಮಧ್ಯದಲ್ಲಿ ಸ್ವರ್ಗಾದಿಗಳೂ ಸಿಗುತ್ತವೆ ಎಂದು ಹೇಳುತ್ತಾರೆ)

ಉತ್ತಮಾಧಿಕಾರಿಗಳು ಮಾತ್ರ ''ಸ್ವರ್ಗಾದಿಗಳು ಅನಿತ್ಯತ್ವಾದಿದೋಷ-ವಿಶಿಷ್ಟವಾದ್ದರಿಂದ ಅದು ಮುಖ್ಯಫಲವಲ್ಲ. ಮೋಕ್ಷವೇ ಮೂಲಭೂತಫಲ'' ಎಂದು ತಿಳಿದು ಪ್ರವೃತ್ತರಾಗುತ್ತಾರೆ. ಆದ್ದರಿಂದ ಅವರಿಗೆ ಫಲಶ್ರುತಿ ಹೇಳುವುದಲ್ಲ. 'ವಿಚಾರ' ಎಂಬ ಗ್ರಂಥವೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ.

**ಪುಟ ಸಂ—18 ಪ್ರ.ಸಂ—16.1**

''ನಿಯತಗುರುಗಳ (ಶಿಷ್ಯರ ಯೋಗ್ಯತೆಯನ್ನು ತಿಳಿದ ಗುರುಗಳ) ಉಪದೇಶಕ್ಕೆ ಅನುಸಾರವಾಗಿ ಶ್ರವಣಾದಿಗಳನ್ನು ಮಾಡಬೇಕು'' ಎಂದು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ — ಅಂತಹ ನಿಯತಗುರುಗಳು (ದುರ್ಲಭವಾದ್ದರಿಂದ) ಸುಲಭವಾಗಿ ಸಿಗದ ಕಾರಣ ಶ್ರವಣಾದಿಗಳು ಅನುಪಪನ್ನವಾಗಬೇಕಾಗುತ್ತದೆ. ನಿಯತಗುರುಗಳು ಸಿಗುವವರಾದರೂ ಯಾರು ಶ್ರವಣಾದಿಗಳನ್ನು ಅನುಷ್ಠಾನ ಮಾಡಿ ಆಧ್ಯಾತ್ಮಿಕಶಕ್ತಿಯನ್ನು ಸಂಪಾದಿಸಿರುತ್ತಾರೆ ಅಂತಹ ಶಿಷ್ಯರಿಗೆ ಮಾತ್ರ ಸಿಗುತ್ತಾರೆ. ಹೊರತು ಉಳಿದ ಶಿಷ್ಯರಿಗೆ ಸಿಗುವುದಿಲ್ಲ. ಅಂದಮೇಲೆ ನಿಯತಗುರುಗಳೇ ದುರ್ಲಭ ಎಂದಮೇಲೆ ಅವರ ಉಪದೇಶಾನು ಸಾರವಾಗಿ ಶ್ರವಣಾದಿಗಳನ್ನು ಮಾಡಬೇಕು ಎಂದರೆ ಅದು ಹೇಗೆ ಸಾಧ್ಯ ?

ಇದಕ್ಕೆ ಆಚಾರ್ಯರು ಉತ್ತರ ನೀಡುತ್ತಾರೆ —

**''ಯದಿ ತಾದೃಗ್ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಮ್ ।**
**ತತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ ಸಮಾಚರೇತ್ ॥''**

ಅದರ ಅಭಿಪ್ರಾಯ ಹೀಗಿದೆ :— ಅಂತಹ ಮುಖ್ಯಗುರುಗಳು (ನಿಯತ-ಗುರುಗಳು) ಸಿಗುವುದಿಲ್ಲ ಎಂದಮಾತ್ರಕ್ಕೆ ಶ್ರವಣಾದಿಗಳು ಅನುಪಪನ್ನವಾಗ-ಬೇಕಾಗಿಲ್ಲ. ಏಕೆಂದರೆ — ಮುಖ್ಯ (ನಿಯತ) ಗುರುಗಳು ಸಿಗುವವರೆಗೆ ಅಮುಖ್ಯ ಗುರುಗಳ (ಸತ್ಸಂಪ್ರದಾಯದಲ್ಲಿ ಬಂದ, ಸದಾಚಾರನಿಷ್ಠರಾದ ಯೋಗ್ಯಗುರುಗಳ) ಉಪದೇಶಾನುಸಾರವಾಗಿ ಶ್ರವಣಾದಿಗಳನ್ನು ಮಾಡಬಹುದು.

ಅತ್ಯಂತ ಗೂಢಾರ್ಥಕವಾದ ವೇದಾದಿಗಳ ವ್ಯಾಖ್ಯಾನ ಮಾಡುವ ಸಾಮರ್ಥ್ಯವು ಮುಖ್ಯಗುರುಗಳಲ್ಲಿ ಇರುವಂತೆ ಅಮುಖ್ಯಗುರುಗಳಲ್ಲಿ ಇರುವುದಿಲ್ಲ ವಾದರೂ, ನಿರ್ಣೀತಶಾಸ್ತ್ರವನ್ನು (ಬ್ರಹ್ಮಸೂತ್ರಾದಿಗಳನ್ನು) ವ್ಯಾಖ್ಯಾನ ಮಾಡುವ ಸಾಮರ್ಥ್ಯವಿರುತ್ತದೆ. ಬ್ರಹ್ಮಸೂತ್ರಗಳ ವ್ಯಾಖ್ಯಾನದಲ್ಲೂ ವಿಪ್ರತಿಪತ್ತಿ ಇರುವುದರಿಂದ ಶಾಸ್ತ್ರಾರ್ಥ ತಿಳಿಯುವುದು ಹೇಗೆ ? ಎಂದರೆ ಶ್ರೀಮದಾಚಾರ್ಯರು ರಚಿಸಿಕೊಟ್ಟಿರುವ ಭಾಷ್ಯಾದಿಗಳ ಸಹಾಯದಿಂದ ಶಾಸ್ತ್ರದ ನಿಜವಾದ ಅಭಿಪ್ರಾಯಗಳನ್ನು ತಿಳಿಸಲು ಅಮುಖ್ಯಗುರುಗಳಿಗೆ ಸಾಮರ್ಥ್ಯವಿರುತ್ತದೆ. ಆದ್ದರಿಂದ ನಿಯತಗುರುಗಳು ಸಿಗುವವರೆಗೆ ಅಮುಖ್ಯಗುರುಗಳಿಂದ ಉಪದೇಶ ಪಡೆದು ಶ್ರವಣಾದಿಗಳನ್ನು ಆಚರಿಸಬೇಕು. ಹೀಗೆ ಅಮುಖ್ಯಗುರುಗಳಿಂದ ಶ್ರವಣಾದಿಗಳನ್ನುಆಚರಿಸಿದರೆ ನಂತರ ನಿಯತಗುರುಗಳು ಸಿಗುವುದು ನಿಶ್ಚಿತ.

**ಪುಟ ಸಂ—21 ಪ್ರ.ಸಂ—18.3**

ಈ ಹಿಂದೆ ಹೇಳಿದ ಹಾಗೂ ಮುಂದೆ ಹೇಳುವ ಭಗವದ್ವ್ಯತಿರಿಕ್ತ ದೇವತೆಗಳ (ರುದ್ರಾದಿಗಳ) ಮಂತ್ರಗಳು ಆ ಆ **ದೇವತೆಗಳನ್ನು**

**ಪುಟ ಸಂ—12/13 ಪ್ರ.ಸಂ—10.3**

ಸೋದರ ಮಾವ/ಅತ್ತೆ ಮಕ್ಕಳನ್ನು ವಿವಾಹವಾಗುವ ಪದ್ಧತಿಯು ಉತ್ತರ ದೇಶದ ಜನರಿಗೆ ನಿಷಿದ್ಧವಾದರೂ ವಿಂಧ್ಯಪರ್ವತದ ದಕ್ಷಿಣದೇಶದಲ್ಲಿರುವ ಜನರಿಗೆ ಅದು ನಿಷಿದ್ಧವಲ್ಲ. ಗೌತಮರು ಹಾಗೂ ಬೋಧಾಯನರೂ ಇದೇ ಅಭಿಪ್ರಾಯವನ್ನು ತಿಳಿಸುತ್ತಾರೆ. ಆದ್ದರಿಂದ ಮಾತುಲಕನ್ಯಾವಿವಾಹವು ದಕ್ಷಿಣದೇಶದವರಿಗೆ ದೋಷವಲ್ಲ.

**ಪುಟ ಸಂ—13 ಪ್ರ.ಸಂ—10.5**

ಮಾತುಲಕನ್ಯಾಪರಿಣಯವನ್ನು ಪೂರ್ಣವಾಗಿ ನಿಷೇಧಿಸಲು ಬರುವುದಿಲ್ಲ. ಕಾರಣ ಅದು ಅನೇಕ ಶ್ರುತಿ ಸ್ಮೃತಿಸಿದ್ಧವಾಗಿದೆ. ಆದ್ದರಿಂದ ಯಾವ ದಕ್ಷಿಣ-ದೇಶಸ್ಥರ ಕುಲದಲ್ಲಿ ಮಾತುಲಕನ್ಯಾವಿವಾಹವು ಪರಂಪರಾಪ್ರಾಪ್ತವಾಗಿದೆ ಅವರು ಅದನ್ನು ಆಚರಿಸಬಹುದು. ಇನ್ನು ಯಾವ ಉತ್ತರದೇಶಸ್ಥರ ಕುಲದಲ್ಲಿ ಮಾತುಲ-ಕನ್ಯಾವಿವಾಹವು ಪರಂಪರಾಪ್ರಾಪ್ತವಾಗಿಲ್ಲ ಅವರಿಗೆ ಅದು ನಿಷಿದ್ಧ. ಅನೇಕ ರೀತಿ ಪ್ರಾಯಶ್ಚಿತ್ತಗಳನ್ನು ಹೇಳಿ ಮಾತುಲಕನ್ಯಾವಿವಾಹವನ್ನು ದೂಷಿಸಿದ್ದು ಆ ಉತ್ತರದೇಶದ ಜನರ ವಿವಕ್ಷೆಯಿಂದ.

**ಪುಟ ಸಂ—14 ಪ್ರ.ಸಂ—11.1**

ಮೋಕ್ಷವು ಬಹುಜನ್ಮಸಾಧ್ಯ (ಅನೇಕಬ್ರಹ್ಮಕಾಲಪ್ರಾಪ್ಯ) ವಾದ್ದರಿಂದ ಅಲ್ಲಿಯವರೆಗೆ ತಪಸ್ಸನ್ನು (ಸಾಧನೆಯನ್ನು) ಆಚರಿಸಲು ಸಾಧ್ಯವಿಲ್ಲ ಎಂದು ತಿಳಿದು ಮಂದಾಧಿಕಾರಿಗಳು ಶೀಘ್ರದಲ್ಲಿ ಸಿಗಬಹುದಾದ ಸ್ವರ್ಗಾದಿಗಳಲ್ಲಿ ಅಭಿರುಚಿ ಪಡೆಯುತ್ತಾರೆ. ಅದಕ್ಕಾಗಿ ಅವರನ್ನು ಕುರಿತು ''ಮಾಡುವ ಕರ್ಮ-ಗಳಿಗೆ ಮೋಕ್ಷವೇ ಮೂಲಭೂತವಾದ (ಕೊನೆಯಲ್ಲಿ ಸಿಗುವ) ಫಲ. ಮಧ್ಯದಲ್ಲಿ ಸ್ವರ್ಗಾದಿಗಳೂ (ಫಲ) ಸಿಗುತ್ತದೆ. ಆದ್ದರಿಂದ ವಿಹಿತವಾದ ಕರ್ಮಗಳನ್ನು ಆಚರಿಸಬೇಕು. ಹೊರತು ಬಹುಕಾಲನಂತರ ಫಲ ಬರುವುದೆಂಬ ಕಾರಣದಿಂದ ಕರ್ಮಗಳನ್ನು ಬಿಡಬಾರದು'' ಎಂದು ತಿಳಿಸುವುದಕ್ಕಾಗಿ ಫಲಶ್ರುತಿಯನ್ನು ಹೇಳುತ್ತಾರೆ. (ಮಧ್ಯದಲ್ಲಿ ಸ್ವರ್ಗಾದಿಗಳೂ ಸಿಗುತ್ತವೆ ಎಂದು ಹೇಳುತ್ತಾರೆ)

ಉತ್ತಮಾಧಿಕಾರಿಗಳು ಮಾತ್ರ ''ಸ್ವಾರ್ಗಾದಿಗಳು ಅನಿತ್ಯತ್ವಾದಿದೋಷ-ವಿಶಿಷ್ಟವಾದ್ದರಿಂದ ಅದು ಮುಖ್ಯಫಲವಲ್ಲ. ಮೋಕ್ಷವೇ ಮೂಲಭೂತಫಲ'' ಎಂದು ತಿಳಿದು ಪ್ರವೃತ್ತರಾಗುತ್ತಾರೆ. ಆದ್ದರಿಂದ ಅವರಿಗೆ ಫಲಶ್ರುತಿ ಹೇಳುವುದಲ್ಲ. 'ವಿಚಾರ' ಎಂಬ ಗ್ರಂಥವೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ.

**ಪುಟ ಸಂ—18 ಪ್ರ.ಸಂ—16.1**

''ನಿಯತಗುರುಗಳ (ಶಿಷ್ಯರ ಯೋಗ್ಯತೆಯನ್ನು ತಿಳಿದ ಗುರುಗಳ) ಉಪದೇಶಕ್ಕೆ ಅನುಸಾರವಾಗಿ ಶ್ರವಣಾದಿಗಳನ್ನು ಮಾಡಬೇಕು'' ಎಂದು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ — ಅಂತಹ ನಿಯತಗುರುಗಳು (ದುರ್ಲಭವಾದ್ದರಿಂದ) ಸುಲಭವಾಗಿ ಸಿಗದ ಕಾರಣ ಶ್ರವಣಾದಿಗಳು ಅನುಪಪನ್ನವಾಗಬೇಕಾಗುತ್ತದೆ. ನಿಯತಗುರುಗಳು ಸಿಗುವವರಾದರೂ ಯಾರು ಶ್ರವಣಾದಿಗಳನ್ನು ಅನುಷ್ಠಾನ ಮಾಡಿ ಆಧ್ಯಾತ್ಮಿಕಶಕ್ತಿಯನ್ನು ಸಂಪಾದಿಸಿರುತ್ತಾರೆ ಅಂತಹ ಶಿಷ್ಯರಿಗೆ ಮಾತ್ರ ಸಿಗುತ್ತಾರೆ. ಹೊರತು ಉಳಿದ ಶಿಷ್ಯರಿಗೆ ಸಿಗುವುದಿಲ್ಲ. ಅಂದಮೇಲೆ ನಿಯತಗುರುಗಳೇ ದುರ್ಲಭ ಎಂದಮೇಲೆ ಅವರ ಉಪದೇಶಾನುಸಾರವಾಗಿ ಶ್ರವಣಾದಿಗಳನ್ನು ಮಾಡಬೇಕು ಎಂದರೆ ಅದು ಹೇಗೆ ಸಾಧ್ಯ ?

ಇದಕ್ಕೆ ಆಚಾರ್ಯರು ಉತ್ತರ ನೀಡುತ್ತಾರೆ —

**''ಯದಿ ತಾದೃಗ್ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಮ್ ।**
**ತತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ ಸಮಾಚರೇತ್ ॥''**

ಅದರ ಅಭಿಪ್ರಾಯ ಹೀಗಿದೆ :— ಅಂತಹ ಮುಖ್ಯಗುರುಗಳು (ನಿಯತ-ಗುರುಗಳು) ಸಿಗುವುದಿಲ್ಲ ಎಂದಮಾತ್ರಕ್ಕೆ ಶ್ರವಣಾದಿಗಳು ಅನುಪಪನ್ನವಾಗ-ಬೇಕಾಗಿಲ್ಲ. ಏಕೆಂದರೆ — ಮುಖ್ಯ (ನಿಯತ) ಗುರುಗಳು ಸಿಗುವವರೆಗೆ ಅಮುಖ್ಯ ಗುರುಗಳ (ಸತ್ಸಂಪ್ರದಾಯದಲ್ಲಿ ಬಂದ, ಸದಾಚಾರನಿಷ್ಠರಾದ ಯೋಗ್ಯಗುರುಗಳ) ಉಪದೇಶಾನುಸಾರವಾಗಿ ಶ್ರವಣಾದಿಗಳನ್ನು ಮಾಡಬಹುದು.

ಅತ್ಯಂತ ಗೂಢಾರ್ಥಕವಾದ ವೇದಾದಿಗಳ ವ್ಯಾಖ್ಯಾನ ಮಾಡುವ ಸಾಮರ್ಥ್ಯವು ಮುಖ್ಯಗುರುಗಳಲ್ಲಿ ಇರುವಂತೆ ಅಮುಖ್ಯಗುರುಗಳಲ್ಲಿ ಇರುವುದಿಲ್ಲವಾದರೂ, ನಿರ್ಣೀತಶಾಸ್ತ್ರವನ್ನು (ಬ್ರಹ್ಮಸೂತ್ರಾದಿಗಳನ್ನು) ವ್ಯಾಖ್ಯಾನ ಮಾಡುವ ಸಾಮರ್ಥ್ಯವಿರುತ್ತದೆ. ಬ್ರಹ್ಮಸೂತ್ರಗಳ ವ್ಯಾಖ್ಯಾನದಲ್ಲೂ ವಿಪ್ರತಿಪತ್ತಿ ಇರುವುದರಿಂದ ಶಾಸ್ತ್ರಾರ್ಥ ತಿಳಿಯುವುದು ಹೇಗೆ ? ಎಂದರೆ ಶ್ರೀಮದಾಚಾರ್ಯರು ರಚಿಸಿಕೊಟ್ಟಿರುವ ಭಾಷ್ಯಾದಿಗಳ ಸಹಾಯದಿಂದ ಶಾಸ್ತ್ರದ ನಿಜವಾದ ಅಭಿಪ್ರಾಯಗಳನ್ನು ತಿಳಿಸಲು ಅಮುಖ್ಯಗುರುಗಳಿಗೆ ಸಾಮರ್ಥ್ಯವಿರುತ್ತದೆ. ಆದ್ದರಿಂದ ನಿಯತಗುರುಗಳು ಸಿಗುವವರೆಗೆ ಅಮುಖ್ಯಗುರುಗಳಿಂದ ಉಪದೇಶ ಪಡೆದು ಶ್ರವಣಾದಿಗಳನ್ನು ಆಚರಿಸಬೇಕು. ಹೀಗೆ ಅಮುಖ್ಯಗುರುಗಳಿಂದ ಶ್ರವಣಾದಿಗಳನ್ನುಆಚರಿಸಿದರೆ ನಂತರ ನಿಯತಗುರುಗಳು ಸಿಗುವುದು ನಿಶ್ಚಿತ.

**ಪುಟ ಸಂ—21 ಪ್ರ.ಸಂ—18.3**

ಈ ಹಿಂದೆ ಹೇಳಿದ ಹಾಗೂ ಮುಂದೆ ಹೇಳುವ ಭಗವದ್ವ್ಯತಿರಿಕ್ತ ದೇವತೆಗಳ (ರುದ್ರಾದಿಗಳ) ಮಂತ್ರಗಳು ಆ ಆ ದೇವತೆಗಳನ್ನು

(ರುದ್ರಾದಿಗಳನ್ನು ತಿಳಿಸಿಕೊಡುತ್ತವೆಯೋ ? ಇಲ್ಲವೋ ? 1) ರುದ್ರಾದಿಗಳ ಮಂತ್ರಗಳು ರುದ್ರಾದಿಗಳನ್ನು ತಿಳಿಸಿಕೊಡುತ್ತವೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ — 'ಸ್ರವತ್ಯನೋಂಕೃತಂ ಬ್ರಹ್ಮ'ಪರಸ್ತಾಚ್ಚ ವಿಶೀರ್ಯತೇ' ಎಂಬ ಪ್ರಮಾಣಾನುಸಾರವಾಗಿ ಈ ಮಂತ್ರಗಳ ಆದಿ—ಅಂತ್ಯಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕಾಗಿದೆ. ಮತ್ತು ಗರುಡಮಂತ್ರ ಮೊದಲಾದ ಮಂತ್ರಗಳಲ್ಲಿ ಓಂಕಾರವು ಅಂತರ್ಗತವೇ ಆಗಿದೆ. ಹೀಗೆ ಮಂತ್ರದಲ್ಲಿ ಉಚ್ಚರಿಸುವ ಓಂಕಾರವು 'ಪ್ರಣವಸ್ತು ಪರಬ್ರಹ್ಮಭೋಧಕಃ ಸಮುದಾಹೃತಃ' ಎಂಬ ಪ್ರಮಾಣಾನುಸಾರ ವಾಗಿ ವಿಷ್ಣುವನ್ನು ಮಾತ್ರ ತಿಳಿಸುತ್ತದೆ. ಅಂದಮೇಲೆ ಅಂತಹ ಓಂಕಾರದಿಂದ ಸಹಿತವಾದ ಮಂತ್ರಗಳು ಆ ಭಗವದ್ವ್ಯತಿರಿಕ್ತರುದ್ರಾದಿ ದೇವತೆಗಳನ್ನು ತಿಳಿಸಿ ಕೊಡಲು ಸಾಧ್ಯವಿಲ್ಲ. ಅವಯವವಾದ ಓಂಕಾರವು ವಿಷ್ಣುವನ್ನು ತಿಳಿಸಿಕೊಟ್ಟರೂ ಅವಯವಿಯಾದ ಮಂತ್ರವು ರುದ್ರಾದಿಗಳನ್ನು ತಿಳಿಸಿಕೊಡಲಿ ಎನ್ನಲು ಬರುವು-ದಿಲ್ಲ. ಹಾಗಾದರೆ ವಾಕ್ಯಭೇದ ಬರಬೇಕಾಗುತ್ತದೆ. ಆದ್ದರಿಂದ ರುದ್ರಾದಿಗಳನ್ನು ತಿಳಿಸುತ್ತವೆ ಎಂದು ಹೇಳಲು ಬರುವುದಿಲ್ಲ.

2. ಇನ್ನು, ಆ ಮಂತ್ರಗಳು ರುದ್ರಾದಿದೇವತೆಗಳನ್ನು ತಿಳಿಸಿಕೊಡುವುದಿಲ್ಲ ಎನ್ನಲೂ ಬರುವುದಿಲ್ಲ. ಏಕೆಂದರೆ — 'ಧ್ಯೇಯಃ ಪಂಚಮುಖೋ ರುದ್ರಃ' ಎಂಬುದಾಗಿ ರುದ್ರದೇವರಿಗೆ ಧ್ಯಾನವಿಷಯತ್ವವನ್ನು ಹೇಳುವ ಮೂಲಕ ಮಂತ್ರ ವಾಚ್ಯತ್ವವನ್ನು ತಿಳಿಸಿಕೊಡುವ ಮಾತಿನ ವಿರೋಧ ಬರುತ್ತದೆ. ರುದ್ರದೇವರು ಮಂತ್ರವಾಚ್ಯರಾಗದಿದ್ದರೂ ಧ್ಯಾನವಿಷಯರಾಗಲಿ ಎನ್ನಲು ಬರುವುದಿಲ್ಲ. ಆದ್ದರಿಂದ 'ತಿಳಿಸಿಕೊಡುತ್ತವೆ' 'ತಿಳಿಸುವುದಿಲ್ಲ' ಎಂಬ ಎರಡು ಪಕ್ಷಗಳೂ ಸರಿಯಲ್ಲ.

ಇದಕ್ಕೆ ಆಚಾರ್ಯರು 'ಮಂತ್ರೇಷ್ವೇತೇಷು ಸರ್ವೇಷು' ಎಂಬ ಶ್ಲೋಕದಿಂದ ಉತ್ತರ ನೀಡುತ್ತಾರೆ.

ಅಂದರೆ — ಭಗವದ್ವ್ಯತಿರಿಕ್ತದೇವತೆಗಳ ಮಂತ್ರಗಳಲ್ಲಿ ಓಂಕಾರದಿಂದ ಹಾಗೂ ಮಂತ್ರದಿಂದಲೂ ರುದ್ರಾಂತರ್ಯಾಮಿಯಾದ ಭಗವಂತನೇ ವಾಚ್ಯನಾಗಿದ್ದಾನೆ. ಓಂಕಾರವನ್ನು ಬಿಟ್ಟು ಉಳಿದ ಮಂತ್ರದಿಂದ ರುದ್ರಾದಿಗಳೂ ವಾಚ್ಯರಾಗಿದ್ದಾರೆ. ಹಾಗಾದರೆ ವಾಕ್ಯಭೇದ ಬರುತ್ತದೆಯಲ್ಲ ? ಎಂದರೆ ಬರುವುದಿಲ್ಲ. ಆ ಮಂತ್ರಗಳಲ್ಲಿ ಎಲ್ಲ ದೇವತೆಗಳಲ್ಲಿ ಅಂತರ್ಯಾಮಿಯಾಗಿ ಇರುವ ಭಗವಂತನೇ ಧ್ಯಾನವಿಷಯನಾಗಿದ್ದಾನೆ. ಆದ್ದರಿಂದ ಅಂತಹ ಭಗವಂತನೇ ಆ ಮಂತ್ರಗಳಿಂದ ವಾಚ್ಯನೂ ಆಗಿದ್ದಾನೆ. 'ಧ್ಯೇಯ: ಪಂಚಮುಖೋ ರುದ್ರಃ' ಎಂಬುದಾಗಿ ರುದ್ರದೇವರಿಗೆ ಧ್ಯಾನವಿಷಯತ್ವವನ್ನು ಹೇಳಿದೆಯಲ್ಲ ? ಎಂದರೆ, ಅದರ ಅಭಿಪ್ರಾಯ ಹೀಗಿದೆ. ಅಧಿಷ್ಠಾನಧ್ಯಾನ

ಮಾಡದೇ ಅಂತರ್ಯಾಮಿಯಾದ ಭಗವಂತನನ್ನು ಧ್ಯಾನ ಮಾಡಲು ಸಾಧ್ಯವಿಲ್ಲವಾದ್ದರಿಂದ ರುದ್ರಾಂತರ್ಗತನಾದ ಭಗವಂತನನ್ನು ಧ್ಯಾನ ಮಾಡುವುದಕ್ಕಾಗಿ ಅಧಿಷ್ಠಾನರಾದ ರುದ್ರದೇವರಿಗೆ ಧ್ಯೇಯತ್ವವನ್ನು ಹೇಳಿದ್ದು.

ಆದ್ದರಿಂದ ಭಗವದ್ವ್ಯತಿರಿಕ್ತದೇವತೆಗಳ ಮಂತ್ರಗಳಲ್ಲಿ ಅಂತರ್ಯಾಮಿತಯಾ ಭಗವಂತನೇ ವಾಚ್ಯ. ಓಂಕಾರದಿಂದಲೂ ಭಗವಂತನೇ ವಾಚ್ಯನಾಗಿದ್ದಾನೆ. ಅಂತೆಯೇ ಅವನೇ ಧ್ಯಾನವಿಷಯನೂ ಆಗಿದ್ದಾನೆ.

**ಪುಟ ಸಂ—29 ಪ್ರಶ್ನೆ ಸಂ—25.1**

ಜೀವ ಹಾಗೂ ಭಗವಂತ ಯಾವಾಗಲೂ ಹೃದಯದಲ್ಲಿ ಇರುತ್ತಾರೆ. ಜಾಗ್ರತ್ಕಾಲಾದಿಗಳಲ್ಲಿ ಅಂದರೆ ಜಾಗ್ರತ್ಕಾಲದಲ್ಲಿ ಭಗವಂತ ದಕ್ಷಿಣಾಕ್ಷಿಯಲ್ಲಿ (ಬಲಗಣ್ಣಿನಲ್ಲಿ), ಸ್ವಪ್ನಕಾಲದಲ್ಲಿ ಕಂಠಸ್ಥಾನದಲ್ಲಿ, ಸುಷುಪ್ತಿಯಲ್ಲಿ ಹೃದಯದಲ್ಲಿ ವಿಶ್ವ-ತೈಜಸ—ಪ್ರಾಜ್ಞರೂಪಗಳಿಂದ ಅಭಿವ್ಯಕ್ತನಾಗುತ್ತಾನೆ. ಜೀವನೂ ಸಹ ಭಗವಂತನ ಜೊತೆ (ಅಂಶದಿಂದ) ಪ್ರಕಾಶರೂಪದಿಂದ ಸಂಚರಿಸುತ್ತಾನೆ. ಹೀಗೆ ಜಾಗ್ರದಾದಿ ಅವಸ್ಥೆಗಳಲ್ಲಿ ವಿಶ್ವಾದಿರೂಪಗಳಿಂದ ದಕ್ಷಿಣಾಕ್ಷಿ ಮೊದಲಾದ ಸ್ಥಾನಗಳಲ್ಲಿರುವ ಭಗವಂತನು ಸುಷುಪ್ತಿಯಲ್ಲಿ ಅಗ್ರೇಶ (ಪ್ರಾಜ್ಞ) ನಾಮಕ ರೂಪದಿಂದ ಯಾವಾಗ ಐಕ್ಯವನ್ನು (ಸಂಶ್ಲೇಷವಿಶೇಷಭಾವವನ್ನು) ,ಹೊಂದುತ್ತಾನೆ. ಜೀವನು ಆ ಅಗ್ರೇಶನಲ್ಲಿ ಪ್ರವೇಶಮಾಡುತ್ತಾನೆ ಆವಾಗ ಜೀವನು ತಾನು—ಕಾಲ—ಅಜ್ಞಾನ—ಸುಪ್ತ್ಯವಸ್ಥೆ—ಸುಖಗಳನ್ನು ಬಿಟ್ಟು ಯಾವ ವಸ್ತುವನ್ನೂ ತಿಳಿಯುವುದಿಲ್ಲ. (ಭಾಷ್ಯದ ಭಾವ)

'ದಕ್ಷಿಣಾಕ್ಷಿಮುಖೇ ವಿಶ್ವಃ' ಇತ್ಯಾದಿಪ್ರಮಾಣಾನುಸಾರವಾಗಿ ಜಾಗ್ರದಾದಿ ಅವಸ್ಥಾಪ್ರೇರಕವಾದ ವಿಶ್ವ—ತೈಜಸ—ಪ್ರಾಜ್ಞ ರೂಪಗಳು ಜಾಗ್ರದಾದಿ ಅವಸ್ಥೆಗಳಲ್ಲಿ ದಕ್ಷಿಣಾಕ್ಷಿ ಮೊದಲಾದ ಸ್ಥಾನಗಳಲ್ಲಿ ಇರುವುದರಿಂದ. ಜೀವನೂ ಜಾಗ್ರದವಸ್ಥೆಯಲ್ಲಿ ದಕ್ಷಿಣಾಕ್ಷಿಯಲ್ಲಿರುತ್ತಾನೆ, ಸ್ವಪ್ನಾವಸ್ಥೆಯಲ್ಲಿ ಕಂಠದೇಶ-ದಲ್ಲಿರುತ್ತಾನೆ, ಸುಷುಪ್ತಿಯಲ್ಲಿ ಹೃದಯದಲ್ಲಿರುತ್ತಾನೆ. ಅಂದಮೇಲೆ ''ಹೃತ್ಕರ್ಣಿ-ಕಾಮೂಲಗತನಾದ ಮೂಲೇಶನಲ್ಲಿ ಜೀವನು ಯಾವಾಗಲೂ ಇರುತ್ತಾನೆ. ಸುಷುಪ್ತ್ಯವಸ್ಥೆಯಲ್ಲಿ ಹೃತ್ಕರ್ಣಿಕೆಯ ಅಗ್ರದಲ್ಲಿರುವ ಅಗ್ರೇಶ(ಪ್ರಾಜ್ಞ)ನಲ್ಲಿ ಜೀವನು ಪ್ರವೇಶ ಮಾಡುತ್ತಾನೆ'' ಎಂದು ಹೇಗೆ ಹೇಳುತ್ತೀರಿ ? ಅಥವಾ ''ಹೃದಯದಲ್ಲಿ ವ್ಯಾಪ್ತನಾಗಿ ಇರುವ ಪ್ರಾದೇಶಪರಿಮಿತನಾದ ಪ್ರಾದೇಶನಾಮಕ ಭಗವಂತನು ಯಾವಾಗಲೂ ಜೀವನಿಗೆ ಸ್ಥಾನನಾಗಿದ್ದಾನೆ'' ಎಂದು ಹೇಗೆ ಹೇಳುತ್ತೀರಿ? ಎಂದರೆ ಅದಕ್ಕೆ ಈ ರೀತಿ ಉತ್ತರ ನೀಡುತ್ತಾರೆ.

'ಹೃದಿ ಹ್ಯೇಷ ಆತ್ಮಾ' ಇತ್ಯಾದಿಶ್ರುತಿಪ್ರಮಾಣಾನುಸಾರವಾಗಿ ಮತ್ತು 'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿತಿ ಹಿ' ಎಂಬ

ಬ್ರಹ್ಮಸೂತ್ರಾನುಸಾರವಾಗಿ ಹೇಳುವುದಾದರೆ ಜೀವಸ್ವರೂಪವು ಯಾವಾಗಲೂ ಹೃದಯಲ್ಲಿಯೇ ಇರುವುದು. ಹೀಗೆ ಯಾವಾಗಲೂ ಹೃದಯದಲ್ಲಿಯೇ ಇರುದಾದರೂ ಜಾಗ್ರದಾದಿ ಅವಸ್ಥೆಗಳಲ್ಲಿ ದಕ್ಷಿಣಾಕ್ಷಿ ಮೊದಲಾದ ಸ್ಥಾನಗಳಲ್ಲಿ ದೀಪಪ್ರಕಾಶದಂತೆ ವಿಶೇಷವಾಗಿ ಸನ್ನಿಹಿತವಾಗುತ್ತದೆ. ಇದೇ ಅಭಿಪ್ರಾಯವನ್ನು ''ಗುಣಾದ್ವಾಽಲೋಕವತ್'' ಎಂಬ ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ತಿಳಿಸಿದ್ದಾರೆ.

(ಭಾವಬೋಧದ ಭಾವ)

**ಪುಟ ಸಂ—43 ಪ್ರ.ಸಂ—37.1**

ಮಕ್ಕಳನ್ನು ಪಡೆಯುವುದಕ್ಕಾಗಿ ಪುತ್ರಕಾಮೇಷ್ಟಿಯಾಗವನ್ನು ಮಾಡಿದಾಗ, ದೇವತೆಗಳು ಅವನು ನೀಡಿದ ಹವಿಸ್ಸನ್ನು (ಪಡೆದು ಸ್ವರ್ಗಾದಿಗಳನ್ನು ಕೊಡುತ್ತಾರೆ) ಪಡೆಯುತ್ತಾರೆ ಎಂದು ಹೇಳುವುದರಿಂದ 'ಮಕ್ಕಳಿಲ್ಲದವನು ನೀಡುವ ಹವಿಸ್ಸನ್ನು ದೇವತೆಗಳು ಪಡೆಯುವುದಿಲ್ಲ ಆದರಿಂದ ಅವನಿಗೆ ಸ್ವರ್ಗಾದಿಗಳಾಗುವುದಿಲ್ಲ ಎಂದು ತೋರುತ್ತದೆ. ಅದಕ್ಕಾಗಿ ಆಚಾರ್ಯರು ಭಾಗವತದ ಅಭಿಪ್ರಾಯವನ್ನು ಪ್ರಮಾಣಪುರಸ್ಸರವಾಗಿ ವಿವರಿಸುತ್ತಾರೆ —

**'ಅನಪತ್ಯೋಽಪಿ ಸದ್ಧರ್ಮಾ ಲೋಕಜಿನ್ನಾತ್ರ ಸಂಶಯಃ'**

ಮಕ್ಕಳಿಲ್ಲದಿದ್ದರೂ ಸಹ ಸ್ವವಿಹಿತಕರ್ಮಾನುಷ್ಠಾನ ಮಾಡಿ ಉತ್ತಮಜ್ಞಾನಸಂಪಾದನೆ ಮಾಡಿದ್ದರೆ ಆದರಿಂದ ಅವನಿಗೆ ಸದ್ಗತಿ ಆಗುವುದು ನಿಶ್ಚಿತ.

**ಪ್ರ.ಸಂ—37.2**

ರುಕ್ಮಾಂಗದ ಸಂಧ್ಯಾವಲಿಯ ಮಗನಾದ ಧರ್ಮಾಂಗದನು ಮಕ್ಕಳನ್ನು ಪಡೆದಿರುವುದಿಲ್ಲ ತನ್ನ ತಂದೆಯಾದ ರುಕ್ಮಾಂಗದನು ಮೋಹಿನೀಸ್ತ್ರೀಯ (ಬ್ರಹ್ಮದೇವರಿಂದ ಸೃಷ್ಟಳಾದವಳ) ಬಲೆಗೆ ಬಿದ್ದು. ಸ್ವಲ್ಪ ಕಾಲದ ನಂತರ ಎಚ್ಚೆತ್ತ ಮೇಲೆ ಆ ಮೋಹಿನೀಸ್ತ್ರೀಯನ್ನು ಬಿಟ್ಟುಹೋಗುವಾಗ ಮೋಹಿನಿಯು ರುಕ್ಮಾಂಗದನಿಗೆ ಕರಾರು ಹಾಕುತ್ತಾಳೆ. 'ನೀನು ಏಕಾದಶೀವ್ರತನ್ನಾದರೂ ಬಿಡು. ಅಥವಾ ನಿನ್ನ ಮಗನ (ಧರ್ಮಾಂಗದನ) ತಲೆಯನ್ನಾದರೂ ಕೊಡು' ಎಂದು. ಆಗ ತಂದೆ ಮಗನಿಗೆ ಕೇಳಿದಾಗ ಮಗನಾದ ಧರ್ಮಾಂಗದನು ನುಡಿಯುತ್ತಾನೆ — 'ನೀನು ಏಕಾದಶೀವ್ರತವನ್ನು ಬಿಡಬೇಡ. ನಾನೂ ಬಿಡುವುದಿಲ್ಲ. ನನ್ನ ತಲೆಯನ್ನೇ ಕೊಡು' ಎಂದು. ಹೀಗೆ ಧರ್ಮಾಂಗದನು ಏಕಾದಶೀವ್ರತದಲ್ಲಿ ತೋರಿದ ನಿಷ್ಠೆಯಿಂದ, ಪ್ರಬಲಪುಣ್ಯಸಂಪಾದನೆಯಿಂದ ಶ್ರೀಹರಿಯಿಂದ ಅನುಗೃಹೀತನಾಗಿ ಸದ್ಗತಿಯನ್ನು ಹೊಂದುತ್ತಾನೆ.

ಅಂದಮೇಲೆ ತನಗೆ ಸಂತಾನ ಇಲ್ಲದಿದ್ದರೂ ಸಹ ಏಕಾದಶೀವ್ರತದಲ್ಲಿನ ನಿಷ್ಠೆಯಿಂದ ಪುಣ್ಯಸಂಪಾದನೆಯಿಂದ ಧರ್ಮಾಂಗದನು ಹೇಗೆ ಸದ್ಗತಿಯನ್ನು ಹೊಂದಿದನೋ ಹಾಗೆ ಸಂತಾನ ಇಲ್ಲದಿದ್ದರೂ ಸಹ ವಿಹಿತಕರ್ಮಾನುಷ್ಠಾನದಿಂದ ಪುಣ್ಯಸಂಪಾದನೆಯಿಂದ ಮನುಷ್ಯನು ಸ್ವರ್ಗಾದಿ ಉತ್ತಮಲೋಕವನ್ನು ಹೊಂದುತ್ತಾನೆ.

**ಪುಟ ಸಂ—49 ಪ್ರ.ಸಂ—42.1**

ಮೋಕ್ಷಕ್ಕೆ ಹೋದವನಿಗೆ ಪುನರಾವೃತ್ತಿ ಇಲ್ಲ ಎಂಬ ವಿಷಯವನ್ನು 'ಓಂ ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್ ಓಂ' ಎಂಬ ಬ್ರಹ್ಮಸೂತ್ರದಲ್ಲಿ ವೇದವ್ಯಾಸದೇವರು ತಿಳಿಸಿದ್ದಾರೆ.

'ನ ಚ ಪುನರಾವರ್ತತೇ ನ ಚ ಪುನರಾವರ್ತತೇ' 'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ ಸಮಭವತ್' ಇತ್ಯಾದಿಶ್ರುತಿಗಳನ್ನು ಉದಾಹರಿಸಿ ಆಚಾರ್ಯರೂ ಭಾಷ್ಯದಲ್ಲಿ ಅದನ್ನು ಸಮರ್ಥಿಸುತ್ತಾರೆ.

ಮುಕ್ತನಾದವನಿಗೆ ಪುನರಾವೃತ್ತಿ ಇಲ್ಲ. ಏಕೆಂದರೆ — ಮೊದಲನೆಯದಾಗಿ 'ನ ಚ ಪುನರಾವರ್ತತೇ' ಇತ್ಯಾದಿಶ್ರುತಿಪ್ರಮಾಣಗಳು ಇವೆ. ಎರಡನೆಯದಾಗಿ ಮುಕ್ತನಾದವನಿಗೆ ಸರ್ವಕಾಮಾವಾಪ್ತಿಯು ಪ್ರಮಾಣಸಿದ್ಧವಾಗಿದೆ. ಅಂದರೆ ಇಚ್ಛಿಸಿದ್ದನ್ನು ಪಡೆದೇ ಪಡೆಯುತ್ತಾನೆ. ಮುಕ್ತನಾದವನು 'ನಾನು ಮತ್ತೆ ಭೂಲೋಕದಲ್ಲಿ ಹುಟ್ಟಬೇಕು' ಎಂದು ಇಚ್ಛಿಸುವುದಿಲ್ಲ. ಶಾಶ್ವತವಾಗಿ ಮೋಕ್ಷದಲ್ಲಿಯೇ ಇರಬೇಕೆಂದು ಬಯಸುತ್ತಾನೆ ಅಂದಮೇಲೆ ಅವನ ಇಚ್ಛೆಯಂತೆ ಪುನರಾವೃತ್ತಿ ಇಲ್ಲ ಎಂದೇ ಸಿದ್ಧವಾಗುತ್ತದೆ.

**ಪುಟ ಸಂ—51 ಪ್ರ.ಸಂ—44.1**

ಅಪರೋಕ್ಷಜ್ಞಾನಿಯಾದವನು ತನ್ನೆಲ್ಲ ಪ್ರಾರಬ್ಧಕರ್ಮಗಳನ್ನು ಭೋಗದಿಂದ ಕಳೆದುಕೊಂಡು ಚರಮದೇಹವನ್ನು ಬಿಡುವಾಗ (ಅಂತಕಾಲದಲ್ಲಿ) ತನ್ನ ಹೃದಯವನ್ನು ಆರಂಭಿಸಿ ಬ್ರಹ್ಮಲೋಕಪರ್ಯಂತವಾಗಿ (ಇರುವ) ಹೋಗುವ ಎಲ್ಲ ಲೋಕಗಳ ಸ್ಮರಣೆ ಮಾಡುತ್ತಾ ಬ್ರಹ್ಮರಂಧ್ರದ ಮೂಲಕ ಉತ್ಕ್ರಾಂತಿ ಹೊಂದುತ್ತಾನೆ (ಹೊರಹೋಗುತ್ತಾನೆ). ಆ ರೀತಿಯಾಗಿ ಉತ್ಕ್ರಾಂತನಾದ ಜೀವನು ನೇರವಾಗಿ ಬ್ರಹ್ಮಲೋಕಕ್ಕೇ ತೆರಳುತ್ತಾನೆ.

ಈ ವಿಧವಾದ ಗತ್ಯನುಸ್ಮರಣೆ ಹಾಗೂ ಉತ್ಕ್ರಾಂತಿಯು ಎಲ್ಲರಿಗೂ ಆಗಲು ಸಾಧ್ಯವೇ ಇಲ್ಲ. ಅಪರೋಕ್ಷಜ್ಞಾನವಾಗಿರಬೇಕು. ಅಪರೋಕ್ಷಜ್ಞಾನಿಯಾಗಿದ್ದರೂ

ಸಹ ತಕ್ಷಣ ಆಗುವುದಿಲ್ಲ (ಜ್ಞಾನವಾದ ಆ ಜನ್ಮದಲ್ಲೇ ಆಗುವುದಿಲ್ಲ). ಕಿಂತು ಅವನ ಪ್ರಾರಬ್ಧಕರ್ಮಗಳೆಲ್ಲವೂ ಕಳೆದು ಚರಮದೇಹ ಬಂದಾಗ ಮಾತ್ರ ಅಂತಹ ಅಂತಕಾಲದಲ್ಲಿ ಗತ್ಯನುಸ್ಮರಣೆ ಬಂದು ಉತ್ಕ್ರಾಂತಿ ಸಿಗುತ್ತದೆ. ಅಂದಮೇಲೆ ಅಪರೋಕ್ಷಜ್ಞಾನವಾಗಿ ಕರ್ಮಗಳ ಭೋಗ ಎಲ್ಲವೂ ಮುಗಿದಾಗ ಮಾತ್ರ ಗತ್ಯನುಸ್ಮರಣೆ — ಉತ್ಕ್ರಾಂತಿಗಳು ಆಗುವವು ಎಂಬ ಅಂಶವನ್ನು ಗಮನಿಸಬೇಕು.

**ಪುಟ ಸಂ—56 ಪ್ರ.ಸಂ—4.1**

ವಿಷ್ಣು—ಲಕ್ಷ್ಮೀ ಹಾಗೂ ವಾಯುದೇವರನ್ನು ಬಿಟ್ಟು ಉಳಿದ ರುದ್ರಾದಿದೇವತೆಗಳು ಅನ್ಯದೇವತೆಗಳು. ಆ ಅನ್ಯದೇವತೆಗಳಿಗೆ ಅರ್ಪಿಸಿದ ಅನ್ನ—ಪತ್ರ—ಜಲ (ಅಭಿಷೇಕದ ನೀರು) ಇವುಗಳನ್ನು ಸ್ವೀಕರಿಸಬಾರದು. ಸ್ವೀಕರಿಸಿದರೆ ಅನರ್ಥವಾಗುತ್ತದೆ.

ವಿಷ್ಣು—ಲಕ್ಷ್ಮೀ ಹಾಗೂ ವಾಯುದೇವರಿಗೆ ಅರ್ಪಿಸಿದ ಅನ್ನಾದಿಗಳನ್ನು ಸ್ವೀಕರಿಸಲೇಬೇಕು. ವಾಯುದೇವರು ಎಲ್ಲ ದೇವತೆಗಳಿಗೂ ಉತ್ತಮರಾಗಿದ್ದಾರೆ, ಪರಮಶುದ್ಧರಾಗಿದ್ದಾರೆ, ಭಗವಂತನಿಗೆ ಪರಮಪ್ರೀತ್ಯಾಸ್ಪದರಾಗಿದ್ದಾರೆ. ಆದ್ದರಿಂದ ಅವರಿಗೆ ಅರ್ಪಿಸಿದ ಅನ್ನ—ತೀರ್ಥಾದಿಗಳನ್ನು ಸ್ವೀಕರಿಸಬೇಕು. ಉಳಿದ ರುದ್ರಾದಿಗಳಿಗೆ ಅರ್ಪಿಸಿದ ಅನ್ನಾದಿಗಳನ್ನು ಸ್ವೀಕರಿಸಬಾರದು.

**ಪುಟ ಸಂ—58 ಪ್ರ.ಸಂ—6.1**

'ಬ್ರಹ್ಮಹಾ ಕ್ಷಯರೋಗೀ ಸ್ಯಾತ್' ಎಂಬುದಾಗಿ ಗರುಡಪುರಾಣದಲ್ಲಿ ಹೇಳಿದಂತೆ ಕ್ಷಯ ಮೊದಲಾದ ರೋಗಗಳು ಬ್ರಹ್ಮಹತ್ಯಾದಿಪಾಪಗಳ ಫಲವಾಗಿದೆ. ಅಂದರೆ ಬ್ರಹ್ಮಹತ್ಯಾದಿ ಮಹಾಪಾಪಗಳನ್ನು ಮಾಡಿದ ವ್ಯಕ್ತಿಯು ಕ್ಷಯರೋಗಾದಿಗಳನ್ನು ಪ್ರಾರಬ್ಧಕರ್ಮವಾಗಿ ಅನುಭವಿಸುತ್ತಾನೆ. ಆ ರೀತಿ ಕ್ಷಯರೋಗಾದಿಗಳು ಬಂದಾಗ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು ಅದನ್ನು ಪರಿಪರಿಸಿಕೊಳುತ್ತಾನೆ. ಅದು ಅನುಭವಸಿದ್ಧವಾದ ಸಂಗತಿ. ಪ್ರಾರಬ್ಧಕರ್ಮಗಳ ಫಲಹ್ರಾಸ ಸರ್ವಾತ್ಮನಾ (ಸ್ವಲ್ಪವೂ) ಅಗುವುದಿಲ್ಲ ಎಂದಾದರೆ, ಪ್ರಾಯಶ್ಚಿತ್ತ-ಗಳಿಂದ ಕ್ಷಯರೋಗಾದಿಗಳನ್ನು ಕಳೆದುಕೊಳ್ಳುವ ಅನುಭವಸಿದ್ಧವಾದ ವಿಷಯವು ಅನುಪಪನ್ನ ಎಂದಾಗಬೇಕಾಗುತ್ತದೆ.

ಬ್ರಹ್ಮಹತ್ಯೆಗೈದ ವ್ಯಕ್ತಿಯು ಪ್ರಾರಬ್ಧವಾದ ಕ್ಷಯರೋಗವನ್ನು ಕಳೆದುಕೊಂಡಿದ್ದು ಪ್ರಾಯಶ್ಚಿತ್ತದಿಂದ ಅಲ್ಲ. ಕಿಂತು ಭೋಗದಿಂದ ಎನ್ನುವುದಾದರೆ, ಶಾಸ್ತ್ರದಲ್ಲಿ ಪ್ರಾಯಶ್ಚಿತ್ತವಿಧಿಗಳನ್ನು ಹೇಳಿದ್ದೇ ವ್ಯರ್ಥ ಎಂದಾಗುತ್ತದೆ. ಈಗಾದರೋ ಅನೇಕ

ಸ್ಥಳಗಳಲ್ಲಿ ಪ್ರಾಯಶ್ಚಿತ್ತವಿಧಿಗಳನ್ನು ಹೇಳುತ್ತಾರಾದ್ದರಿಂದ 'ಪ್ರಾಯಶ್ಚಿತ್ತದಿಂದ ಪ್ರಾರಬ್ಧಕರ್ಮದ ಉಪಮರ್ದವಾಗುತ್ತದೆ' ಎಂಬ ಸಂಗತಿಯನ್ನು ಒಪ್ಪಲೇಬೇಕಾಗಿದೆ.

**ಪುಟ ಸಂ—67 ಪ್ರ.ಸಂ—15.1**

**ಪ್ರೇತಶ್ರಾದ್ಧಾನಿ ಸರ್ವಾಣಿ ಸಪಿಂಡೀಕರಣಂ ತಥಾ ।**
**ಅಪಕೃಷ್ಯಾಪಿ ಕುರ್ವೀತ ಕರ್ತುಂ ನಾಂದೀಮುಖಂ ದ್ವಿಜಃ ॥**

ಅಂದರೆ — ನಾಂದೀಶ್ರಾದ್ಧಾದಿ (ವಿವಾಹಾದಿವೃದ್ಧಿಕಾರ್ಯ)ಗಳನ್ನು ಮಾಡುವುದಕ್ಕಾಗಿ ಪ್ರೇತಶ್ರಾದ್ಧಗಳನ್ನು ಹಾಗೂ ಸಪಿಂಡೀಕರಣವನ್ನು ಅಪಕರ್ಷ ಮಾಡಿ ವಿವಾಹಾದಿವೃದ್ಧಿಕಾರ್ಯಗಳನ್ನು ಮಾಡಬಹುದು ಎಂಬ ಪ್ರಮಾಣಾನುಸಾರ-ವಾಗಿ ನಾಂದೀಶ್ರಾದ್ಧ (ವಿವಾಹಾದಿ ವೃದ್ಧಿಕಾರ್ಯಗಳು) ಪ್ರಾಪ್ತವಾದಾಗ, ಯಾವ ಮಾಸದಲ್ಲಿ ವೃದ್ಧಿಕಾರ್ಯವು ಪ್ರಾಪ್ತವಾಗಿರುತ್ತದೆಯೋ ಅದೇ ಮಾಸದಲ್ಲಿಯೇ ಸ್ವಲ್ಪ ಮೊದಲು ಆ ವೃದ್ಧಿಕಾರ್ಯನಿಮಿತ್ತವಾಗಿ ಮತ್ತೊಮ್ಮೆ ಮಾಸಾನುಮಾಸಿಕಶ್ರಾದ್ಧಗಳನ್ನು ಅಪಕರ್ಷ ಮಾಡಿ ವಿವಾಹಾದಿವೃದ್ಧಿಕಾರ್ಯಗಳನ್ನು ಮಾಡುವುದು. (ಧರ್ಮಸಿಂಧು)

ಕಲಿಯುಗದಲ್ಲಿ ಆಯುಷ್ಯವು ಸ್ಥಿರವಾಗಿರುವುದಿಲ್ಲ ಎಂಬ ಕಾರಣದಿಂದ ಆಯುಷ್ಯ ಅಸ್ಥಿರತ್ವ ನಿಮಿತ್ತ ಅಪಕರ್ಷವನ್ನು ಹನ್ನೆರಡನೇ ದಿನದಲ್ಲಿ ಮಾಡಿಕೊಂಡು, ವಿವಾಹಾದಿ ವೃದ್ಧಿಕಾರ್ಯವು ಪ್ರಾಪ್ತವಾದಾಗ ಆ ವೃದ್ಧಿಕಾರ್ಯ-ನಿಮಿತ್ತವಾಗಿ ಮತ್ತೊಮ್ಮೆ ಮಾಸಿಕಶ್ರಾದ್ಧಗಳನ್ನು ಅಪಕರ್ಷ ಮಾಡಿ ವಿವಾಹಾದಿ-ಗಳನ್ನು ಮಾಡುವುದು. ತಂದೆ—ತಾಯಿಗಳು ಮೃತರಾಗಿದ್ದರೆ, ಈ ಹಿಂದೆ ಹೇಳಿದಂತೆ ಎರಡು ಬಾರಿ ಅಪಕರ್ಷ ಮಾಡಿದ್ದರೂ ವಿವಾಹಾದಿಗಳನ್ನು ಮಾಡಿದ ನಂತರದ ಮುಂದಿನ ಮಾಸಗಳಲ್ಲಿ ಬರುವ ತಂದೆ—ತಾಯಿಗಳ ಮಾಸಿಕಗಳನ್ನು ಪೂರ್ಣವಾಗಿ ಮಾಡಿ ಮುಗಿಸುವುದು. ತಂದೆ—ತಾಯಿಗಳನ್ನು ಬಿಟ್ಟು ಉಳಿದವರ ಮಾಸಿಕಗಳಾಗಿದ್ದರೆ, ಎರಡು ಬಾರಿಯ ಅಪಕರ್ಷ ಮಾಡಿ ವಿವಾಹಾದಿಗಳನ್ನು ಮಾಡಿದ ನಂತರ ಮುಂದಿನ ಮಾಸಿಕಗಳನ್ನು ಮಾಡುವ ಆವಶ್ಯಕತೆಯಿಲ್ಲ. (ಸ್ಮೃತಿ ಮುಕ್ತಾವಲೀ)

**ಪುಟ ಸಂ—67 ಪ್ರ.ಸಂ—15.2**

ಯಾರು ವರ್ಷದ ಕೊನೆಯಲ್ಲಿ ಸಪಿಂಡೀಕರಣಶ್ರಾದ್ಧವನ್ನು ಮಾಡುತ್ತಾರೆ ಅವರಿಗೆ 'ಪ್ರಥಮಾಬ್ದೇ ವರ್ಜ್ಯಾನಿ' (ಒಂದು ವರ್ಷದವರೆಗೆ ವಿವಾಹಾದಿಗಳನ್ನು ಮಾಡಬಾರದು) ಎಂಬುದಾಗಿ ನಿಷೇಧ ಹೇಳಿದ್ದು. ಹೊರತು ಹನ್ನೆರಡನೇ

ದಿವಸವೇ ಯಾರು ಸಪಿಂಡೀಕರಣಶ್ರಾದ್ಧವನ್ನು ಮಾಡುತ್ತಾರೆ ಅವರಿಗೆ ಈ ನಿಷೇಧವಲ್ಲ. ಅಂದರೆ ಹನ್ನೆರಡನೇ ದಿವಸವೇ ಯಾರು ಸಪಿಂಡೀಕರಣ ಮಾಡುತ್ತಾರೆ ಅವರು ವರ್ಷದವರೆಗೆ ವಿವಾಹಾದಿಗಳನ್ನು ಮಾಡಬಹುದು ಎಂದು ಕೆಲವರ ಅಭಿಪ್ರಾಯ.

ಹನ್ನೆರಡನೇ ದಿವಸವೇ ಯಾರು ಸಪಿಂಡೀಕರಣಶ್ರಾದ್ಧವನ್ನು ಮಾಡುತ್ತಾರೆ. ಅವರಿಗೂ ಈ ನಿಷೇಧವಿದೆ. ಅಂದರೆ ಹನ್ನೆರಡನೇ ದಿವಸವೇ ಯಾರು ಸಪಿಂಡೀಕರಣವನ್ನು ಮಾಡುತ್ತಾರೆ ಅವರಿಗೂ ವರ್ಷದವರೆಗೆ ವಿವಾಹಾದಿಗಳನ್ನು ಮಾಡಲು ಬರುವುದಿಲ್ಲ ಎಂದು ಇನ್ನು ಕೆಲವರ ಅಭಿಪ್ರಾಯವಾಗಿದ.

ಹಾಗಾದರೆ ಯಾವುದು ಸರಿ ? ಎಂದರೆ, ಅದಕ್ಕೆ ಈ ರೀತಿ ವ್ಯವಸ್ಥೆ ಮಾಡುತ್ತಾರೆ.

ವಿವಾಹ ಮೊದಲಾದ ಯಾವ ವೃದ್ಧಿಕಾರ್ಯಗಳೂ ಪ್ರಾಪ್ತವಾಗದೇ, ಕೇವಲ ಆಯುಷ್ಯದ ಅಸ್ಥಿರತ್ವನಿಮಿತ್ತವಾಗಿ ಅಪಕರ್ಷವನ್ನು ಹನ್ನೆರಡನೇ ದಿನದಲ್ಲಿ ಮಾಡಿದ್ದರೂ ಪ್ರೇತರೂಪದಲ್ಲಿರುವ ಪಿತೃವಿಗೆ ಪಿತೃತ್ವಪ್ರಾಪ್ತಿಯಾಗುವುದು ಮಾತ್ರ (ಪಿತೃಗಣದಲ್ಲಿ ಪ್ರವೇಶ ಪಡೆಯುವುದು) ವರ್ಷದ ನಂತರವೇ.

**ಕೃತೇ ಸಪಿಂಡೀಕರಣೇ ನರಃ ಸಂವತ್ಸರಾತ್ಪರಮ್ ।**
**ಪ್ರೇತದೇಹಂ ಪರಿತ್ಯಜ್ಯ ಭೋಗದೇಹಂ ಪ್ರಪದ್ಯತೇ ॥**

ಎಂಬ ಪ್ರಮಾಣವೂ ಇದೇ ಅಭಿಪ್ರಾಯವನ್ನೇ ತಿಳಿಸುತ್ತದೆ. ಆದ್ದರಿಂದ

1. ಸಪಿಂಡೀಕರಣಶ್ರಾದ್ಧವನ್ನು ಮಾಡಿದರೂ ಪ್ರತ್ಯೇಕವಾಗಿ ವೃದ್ಧಿನಿಮಿತ್ತ ಅಪಕರ್ಷ ಮಾಡದಿದ್ದರೆ ಅವರಿಗೆ ವಿವಾಹಾದಿವೃದ್ಧಿಕಾರ್ಯಗಳಲ್ಲಿ, ಸಂಧ್ಯಾವಂದನ ದೇವಪೂಜಾ - ಪಂಚಯಜ್ಞಗಳನ್ನು ಬಿಟ್ಟು ಉಳಿದ ವಿಶೇಷದೇವಕಾರ್ಯಗಳಲ್ಲಿ, ಅಮಾವಾಸ್ಯಾಶ್ರಾದ್ಧ ಮಹಾಲಯಶ್ರಾದ್ಧರೂಪವಾದ ಪಿತೃಕಾರ್ಯವಿಶೇಷಗಳಲ್ಲಿ ವರ್ಷದವರೆಗೆ ಅಧಿಕಾರವಿರುವುದಿಲ್ಲ.

2. ಸಪಿಂಡೀಕರಣಶ್ರಾದ್ಧವನ್ನು ಮಾಡಿ ವೃದ್ಧಿಕಾರ್ಯಗಳನ್ನು ಮಾಡುವುದಕ್ಕಾಗಿ ಪ್ರತ್ಯೇಕವಾಗಿ ಮತ್ತೆ ಮಾಸಿಕಶ್ರಾದ್ಧಗಳನ್ನು ಅಪಕರ್ಷ ಮಾಡಿದ್ದಾದರೆ ಹಿಂದೆ ಹೇಳಿದ ವಿವಾಹಾದಿವೃದ್ಧಿಕಾರ್ಯಗಳಲ್ಲಿ, ಉಳಿದ ವಿಶೇಷ ದೇವಕಾರ್ಯಗಳಲ್ಲಿ ಅಮಾವಾಸ್ಯಾಶ್ರಾದ್ಧ — ಮಹಾಲಯಶ್ರಾದ್ಧರೂಪವಾದ ಪಿತೃಕಾರ್ಯ ವಿಶೇಷ ಗಳಲ್ಲಿ ಮೊದಲವರ್ಷದಲ್ಲಿಯೂ ಅವರಿಗೆ ಅಧಿಕಾರವಿರುತ್ತದೆ.

ಈ ಕಾರಣದಿಂದಲೇ ಕಾಲತತ್ವನಿರ್ಣಯ ಎಂಬ ಗ್ರಂಥದಲ್ಲಿ "ಸಂಕಟಾದಿಪ್ರಸಂಗದಲ್ಲಿ ತಂದೆ ಮೃತನಾದ ಒಂದು ವರ್ಷದಲ್ಲಿಯೇ ವೃದ್ಧಿಕಾರ್ಯ ನಿಮಿತ್ತ ಅಪಕರ್ಷ ಮಾಡಿಕೊಂಡು ಮೃತನ ಮಗನಿಗೆ ಉಪನಯನಾದಿ ಸಂಸ್ಕರಗಳನ್ನು ಮಾಡಬಹುದು. ತಂದೆ—ತಾಯಿಗಳು ಮೃತರಾದ ಒಂದು ವರ್ಷ-ದಲ್ಲಿಯೇ ವೃದ್ಧಿನಿಮಿತ್ತ ಅಪಕರ್ಷ ಮಾಡಿ ಮೃತನ ಮಗನು ತನ್ನ ಮಕ್ಕಳಿಗೆ ಉಪನಯನಾದಿ ಸಂಸ್ಕಾರಗಳನ್ನು ಮಾಡಬಹುದು" ಎಂದು ಹೇಳಿದ್ದಾರೆ.

(ಧರ್ಮಸಿಂಧು, Page No. 410)

**ಪುಟ ಸಂ—82 ಪ್ರ.ಸಂ—27.1**

**ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।**
**ವಾಯುಸ್ತು ತತ್ ಪೃಥಗ್ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥**

ಎಂಬುದಾಗಿ ಪುರಾಣಗಳಲ್ಲಿ ರಹಸ್ಯಪ್ರಮೇಯವನ್ನು ತಿಳಿಸುತ್ತಾರೆ. ಎಲ್ಲ ನದಿಗಳ ನೀರು ಸಮುದ್ರಸೇರಿ ಮಿಶ್ರಿತವಾದಾಗ 'ಇದು ಗಂಗಾ' 'ಇದು ಯಮುನಾ' 'ಇದು ಸಮುದ್ರ' ಎಂಬುದಾಗಿ ಆ ಆ ನದಿಗಳ ಅಭಿಮಾನಿ ದೇವತೆಗಳೂ ತಿಳಿಯಲು ಸಾಧ್ಯವಿಲ್ಲ. ಆದರೆ ವಾಯುದೇವರು ಆ ರೀತಿ ಆ ಆ ನದಿಗಳ ನೀರನ್ನು ಪ್ರತ್ಯೇಕ ತಿಳಿದು ಅವನ್ನು ಮೋಡಗಳಿಗೆ ಕಳಿಸಿ ಮೋಡಗಳಿಂದ ಮಳೆ ಸುರಿಸುತ್ತಾರೆ. ಆ ಆ ನದಿಗಳ ನೀರನ್ನು ಆ ಆ ನದಿಗಳಲ್ಲಿಯೇ ಬೀಳುವಂತೆ ಕಾರ್ಯವನ್ನು ಸಮರ್ಥವಾಗಿ ಮಾಡುತ್ತಾರೆ ವಾಯುದೇವರು.

**ಪುಟ ಸಂ—88 ಪ್ರ.ಸಂ—30.1**

ಗಾಯತ್ರೀಮಂತ್ರದಲ್ಲಿ "ಯಃ ಭರ್ಗಃ = ಯಾವ ಭರ್ಗನಾಮಕನಾದ ಸೂರ್ಯನು ನಃ ಧಿಯಃ ಪ್ರಚೋದಯತ್ = ನಮ್ಮ ಬುದ್ಧಿಯನ್ನು ಪ್ರೇರಿಸು-ತ್ತಾನೆಯೋ ತಸ್ಯ ಸವಿತುಃ ವರೇಣ್ಯಂ ರೂಪಂ ಧೀಮಹಿ = ಆ ಸವಿತೃನಾಮಕ ಸೂರ್ಯನ ರೂಪವನ್ನು ಚಿಂತಿಸೋಣ" ಎಂಬುದಾಗಿ ಸೂರ್ಯನು ಪ್ರತಿಪಾದ್ಯ-ನಾಗಿದ್ದಾನೆ ಎಂದು ತೋರುತ್ತದೆ. ಅಂದಮೇಲೆ ಭಗವಂತನು ಹೇಗೆ ಪ್ರತಿಪಾದ್ಯನಾಗುತ್ತಾನೆ ?

ಅದಕ್ಕೆ ಆಚಾರ್ಯರು ನೀಡುವ ಉತ್ತರ —

**'ಸ ಏವ ಭರ್ಗಶಬ್ದಾರ್ಥಃ'**

ಭರ್ಗ ಶಬ್ದವು ತಿಳಿಸುವ ಗುಣಗಳು ಅಂದರೆ ಭರಣ (ಜಗತ್ತನ್ನು ಧರಿಸುವುದು) ಹಾಗೂ ಗಮನ (ಜ್ಞಾನ ಕೊಟ್ಟು ಜಗತ್ತನ್ನು ಸಂರಕ್ಷಿಸುವುದು)ಗಳು

ಭಗವಂತನಿಗೆ ಮಾತ್ರ ಕೂಡುವುದರಿಂದ ಭರ್ಗ ಶಬ್ದವಾಚ್ಯನಾದವನು ಭಗವಂತನೇ. ಹೊರತು ಸೂರ್ಯನಲ್ಲ. ಅದೇ ರೀತಿಯಾಗಿ ಸವಿತೃ ಶಬ್ದವು ತಿಳಿಸುವ ಗುಣ (ಜಗತ್‌ಪ್ರಸವಹೇತುತ್ವವು) ಭಗವಂತನಿಗೆ ಮಾತ್ರ ಕೂಡುವುದರಿಂದ ಸವಿತೃಶಬ್ದವಾಚ್ಯನಾದವನೂ ಭಗವಂತನೇ. ಹೊರತು ಸೂರ್ಯನಲ್ಲ.

ಮತ್ತು ಗಾಯತ್ರೀಮಂತ್ರವು ವ್ಯಾಹೃತಿಯ ವ್ಯಾಖ್ಯಾನವಾಗಿದೆ ಎಂದು ಪ್ರಮಾಣಗಳು ತಿಳಿಸುತ್ತವೆ. ವ್ಯಾಹೃತಿಗಳಿಂದ ಭಗವಂತನು ವಾಚ್ಯನಾದ ಮೇಲೆ ಅದರ ವ್ಯಾಖ್ಯಾನರೂಪವಾದ ಗಾಯತ್ರೀಮಂತ್ರದಿಂದಲೂ ಭಗವಂತನೇ ವಾಚ್ಯನಾಗಬೇಕು. ಅಷ್ಟಲ್ಲದೇ

**'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ'**

ಎಂಬುದಾಗಿ ಗಾಯತ್ರೀಪ್ರತಿಪಾದ್ಯನಾದವನು ಭಗವಂತನೇ ಎಂಬ ಅರ್ಥವನ್ನು ನರಸಿಂಹಪುರಾಣವೂ ಸ್ಪಷ್ಟವಾಗಿ ತಿಳಿಸುತ್ತದೆ.

★★★

# ತಿದ್ದುಪಡಿ

| ಪುಟ ಸಂ | ತಪ್ಪು | ಸರಿ | ಸಾಲು ಸಂ. |
|---|---|---|---|
| 2 | ವದ್ಮಪುರಾಣ | ಪದ್ಮಪುರಾಣ | 2 |
| 2 | ತತ್ತುಲ್ಯ | ತತ್ತುಲ್ಯಂ | 8 |
| 9 | 5 | ಉ | 15 |
| 12 | ಮಕ್ಕಳ ಮದುವೆ ಮಾಡಬಾರದು | ಮಕ್ಕಳನ್ನು ಮದುವೆ ಮಾಡಿಕೊಳ್ಳಬಾರದು | 6 |
| 14 | ಫಲಶ್ಭೃತಿ | ಫಲಶ್ರುತಿ | 12 |
| 19 | ಆಮುಖ್ಯಾದಪಿ | ಅಮುಖ್ಯಾದಪಿ | 23 |
| 21 | ಮಂತ್ರ್ಯೋ ತತ್ವರ | ಮಂತ್ರಸ್ತತ್ಪರ | 23 |
| 26 | ತಸ್ಯೆವ | ತಸ್ಯೈವ | 17 |
| 35 | ಮೂಲತಚ್ಛಿಂದಿ | ಮೂಲತಶ್ಛಿಂದಿ | 14 |
| 37 | ಉಪಾಯವಲ್ಲ | ಉಪಾಯವಿಲ್ಲ | 12 |
| 43 | ಅನಪತ್ಯೋಽಪ್ನೀತಿ | ಅನಪತ್ಯೋಽಪೀತಿ | 16 |
| 49 | ಅ) | ಆ) | 26 |
| 54 | ಮಣ್ಣಿಗೆ | ಮಣಿಗೆ | 9 |
| 56 | ವಿಷ್ಣುಲಕ್ಷೀ | ವಿಷ್ಣುಲಕ್ಷ್ಮೀ | 17 |
| 60 | ಅನೂಢಯಾಃ ಸ್ತ್ರಿಯಾಃ | ಅನೂಢಾಯಾಃ ಸ್ತ್ರಿಯಃ | 26 |
| 62 | ಮಣ್ಮಯೇ | ಮೃಣ್ಮಯೇ | 27 |
| 62 | ಪುಟೇ ಪಾಣಮಯೇ ವಾಽಪಿ ದದ್ಯಾದತ್ರ ತು ವೈಷ್ಣವೇ । | ಪಟಪರ್ಣಮಯೇನಾಪಿ ದದ್ಯಾದಗ್ರಸ್ರುವೇಣ ತು । | 28 |
| 68 | ಏನು ಪ್ರಾಯಶ್ಚಿತ್ತವನ್ನು | ಯಾವ ಜಪವನ್ನು | 4 |
| 67 | ಕುರ್ಯಾಸ್ಮಾಸಿಕಾನಿ | ಕುರ್ಯಾನ್ಮಾಸಿಕಾನಿ | 13 |
| 69 | ಅದರೆ | ಆದರೆ | 12 |
| 70 | ಅದರೆ | ಆದರೆ | 1 |
| 70 | ಅದರೆ | ಆದರೆ | 18 |
| 75 | ಸ್ತೊತ್ರ | ಸ್ತೋತ್ರ | 1 |

| | | | |
|---|---|---|---|
| 75 | ಮಾಡಿದ್ದರಿದ | ಮಾಡಿದ್ದರಿಂದ | 10 |
| 75 | ಫಲಹಾರ | ಫಲಾಹಾರ | 11 |
| 77 | ತಿಷ್ಟೇತ್ | ತಿಷ್ಠೇತ್ | 25 |
| 79 | ಎರಡು | ಮೂರು | 9 |
| 81 | ಯಾವ | ಆ ಆ | 21 |
| 82 | ಪಾರಾಣಿಕೀ | ಪೌರಾಣಿಕೀ | 21 |
| 85 | ಆದು | ಅದು | 1 |
| 29 | ಪ್ರದೇಶಪರಿಮಿತ | ಪ್ರಾದೇಶಪರಿಮಿತ | 28 |
| 88 | ನವಿತೃನಾಮಕ | ಸವಿತೃನಾಮಕ | 2 |
| 88 | ಸನ್ನಿವಿಷ್ಟಃ | ಸನ್ನಿವಿಷ್ಟಃ | 14 |
| 88 | ಜಾಜ್ಞಾಸಾಧಿಕರಣ | ಜಿಜ್ಞಾಸಾಧಿಕರಣ | 25 |
| 91 | ಮಾಡಿಸಿದ್ದಾರೆ | ಮಾಡಿಸಿದ್ದೀರಿ | 17 |
| 97 | ಆಚಾರ್ಯಗೂ | ಆಚಾರ್ಯರಿಗೂ | 9 |
| 99 | ವಿಧಿವಚನ | ವಿಧವಚನ | 9 |
| 105 | ರಾಮಕರಾರ್ಚಿತವಾಗಿದೆ | ರಾಮಕರಾರ್ಚಿತವಾಗಿವೆ | 5 |
| 106 | ಅನೇಕಯುಗಳವರೆಗೆ | ಅನೇಕಯುಗಗಳವರೆಗೆ | 20 |
| 107 | ಉಳಿದಿರುತ್ತದೆ | ಉಳಿದಿರುತ್ತವೆ | 9 |
| 108 | ಬ್ರಹ್ಮಣಸ್ಪೇತೇ | ಬ್ರಹ್ಮಣಸ್ಪತೇ | 7 |
| 108 | ದರಂ | ಪರಂ | 21 |
| 109 | 'ಆಪಃ' | 'ಆಮಃ' | 16 |
| 110 | ಆದ್ದರಂದ | ಆದ್ದರಿಂದ | 4 |
| 112 | ಸುದರ್ಶಸಮ್ | ಸುದರ್ಶನಮ್ | 27 |
| 112 | ತ್ಯಕ್ತ್ವಾ | ತ್ಯಕ್ತ್ವಾ | 32 |
| 113 | ಚಾತುರ್ಮೂಸ | ಚಾತುರ್ಮಾಸ | 7 |
| 113 | (ಸಂದ್ರದಾಯದ) | (ಸಂಪ್ರದಾಯದ) | 15 |
| 114 | ಮಾಹಾತ್ಯೆ | ಮಾಹಾತ್ಮ್ಯೆ | 26 |
| 115 | ರಘೂತ್ತಮರ | ರಘೂತ್ತಮರು | 9 |

★★★

# "अर्चनीयो गुरुः सदा"

ಆನಂದತೀರ್ಥರ ಮತವ ಬೋಧಿಸಿ, ಸನ್ಮಾರ್ಗದಲಿ ನಡೆಸಿ
ಮಹದನುಗ್ರಹಗೈದ ಸ್ವರೂಪೋದ್ಧಾರಕ ಗುರುಗಳಿಗೆ
ಪ್ರತಿರೂಪವಾಗಿ ಏನು ಕೊಡಲು ಸಾಧ್ಯ ?

'न च तत्प्रतिकर्तुं शक्नुमः' (ಗುರುಗಳು ಮಾಡಿದ
ಅನುಗ್ರಹಕ್ಕೆ ಪ್ರತ್ಯುಪಕಾರ ಮಾಡಲು ನಮ್ಮಿಂದ ಸಾಧ್ಯವಿಲ್ಲ)
ಎಂಬುದಾಗಿ ಮಹಾನುಭಾವರಾದ ಟೀಕಾಕೃತ್ಪಾದರಂಥವರೇ
ಈಶಾವಾಸ್ಯ ಟೀಕೆಯಲ್ಲಿ ಹೇಳುವಾಗ ನಮ್ಮ ಪಾಡೇನು ?

ಆದರೂ ಗುರುಗಳು ಕೈಗೊಂಡಿರುವ ಸಿದ್ಧಾಂತ
ಪ್ರಚಾರದಲ್ಲಿ, ತತ್ತ್ವಜ್ಞಾನಪ್ರಸಾರ ಕಾರ್ಯದಲ್ಲಿ ಶಿಷ್ಯಕೋಟಿಯಲ್ಲಿ
ಒಬ್ಬನಾದ ನನ್ನ ಚಿಕ್ಕದಾದ ಒಂದು ಅಳಿಲು ಸೇವೆ.

'ನ್ಯಾಯಸುಧಾ ಮಂಗಳ ಮಹೋತ್ಸವ'ದ ಅಂಗವಾಗಿ
ಪರಮಪೂಜ್ಯ ಗುರುಗಳ ಪಾದಾರವಿಂದಗಳಲ್ಲಿ
ಭಕ್ತಿಪೂರ್ವಕವಾಗಿ ಸಮರ್ಪಿಸಿದ
"ಗುರು ದಕ್ಷಿಣೆ"

ಸುಧಾ ವಿದ್ಯಾರ್ಥಿ
ಕೆ. ಕಾಂತೇಶ. ಕದರಮಂಡಲಗಿ